ಆ ಸನಾತನ ತೈಲತಪಸಿಯೆದೆಯಾಳದಲಿ
ಯುಗಯುಗಗಳಿನ್ನುಮವಿತಿಹವಲ್ಲಿ. ನಾಳದಲಿ
ನಾಳದಲಿ ಕಲ್ಪಗಳು ಆತ್ಮಕಥೆ ಹೇಳುತಿವೆ;
ಹಿಂದು ಮುಂದೊಂದರಿಯದಿಂದಿನೊಳೆ ಬಾಳುತಿವೆ
ಕಾಲದೇಶಾದಿ ಪರಿಣಾಮ ಕೋಟಿಗಳಲ್ಲಿ.

-ಕುವೆಂಪು

# ವಸುಂಧರೆ

ಕಾದಂಬರಿ

ಶಿವರಾಮು ಕಾಡನಕುಪ್ಪೆ

ಶ್ರೀ ರಾಜೇಂದ್ರ ಪ್ರಿಂಟರ್ಸ್ ಅಂಡ್ ಪಬ್ಲಿಷರ್ಸ್
೧೨/೧, ಈವ್ನಿಂಗ್ ಬಜಾರ್ ಹಿಂಭಾಗ
ಶಿವರಾಂಪೇಟೆ, ಮೈಸೂರು - ೫೭೦ ೦೦೧

**VASUNDHARE**
A Novel

*By*
Prof. Shivaramu Kadanakuppe
Principal
Vidyavardhaka First Grade College, Mysore - 570 021

*Published by* :
Sri Rajendra Printers & Publishers
No. 12/1, Behind Evening Bazaar,
Shivarampet, Mysore-1. Ph : 2476019

Pages : viii+192

ಮೊದಲ ಮುದ್ರಣ : 2009



ರಕ್ಷಾಪುಟ ರಚನೆ :ಶ್ರೀ ಮಂಜುನಾಥ್ ಲತಾ

ಬೆಲೆ : ಒಂದು ನೂರು ಇಪ್ಪತ್ತು ರೂಪಾಯಿ
Price : **120/-**

ಈ ಕಾದಂಬರಿಯ ಕಥೆ, ಪಾತ್ರಗಳು ಸಂಪೂರ್ಣ ಕಾಲ್ಪನಿಕ. ಕಥಾವಸ್ತುವಿನ ನಿರ್ವಹಣೆಗೆ ನೈಜತೆಯ ವಾತಾವರಣವನ್ನು ಮೂಡಿಸುವ ನಿಮಿತ್ತವಾಗಿ ಸ್ಥಳ ಮತ್ತು ಪ್ರದೇಶಗಳ ನಿಜ ನಾಮದೇಯಗಳನ್ನು ಬಳಸಲಾಗಿದೆ.

ಮುದ್ರಕರು :
ಶ್ರೀ ರಾಜೇಂದ್ರ ಪ್ರಿಂಟರ್ಸ್ & ಪಬ್ಲಿಷರ್ಸ್
೧೨/೧, ಈವನಿಂಗ್ ಬಜಾರ್ ಹಿಂಭಾಗ
ಶಿವರಾಂಪೇಟೆ, ಮೈಸೂರು - ೫೭೦ ೦೦೧ ದೂರವಾಣಿ : ೨೪೭೬೦೧೯

ಮಿತಭಾಷಿ, ಸಂಯಮಶೀಲ, ವೈಚಾರಿಕ ಮನಸ್ಸಿನ
ನನ್ನ ತಂದೆ
**ಶ್ರೀ ಸಿ. ಲಿಂಗೇಗೌಡ ಕಾಡನಕುಪ್ಪೆ,**

ಅದ್ಭುತ ಕಥನ ಕಲಾಪ್ರತಿಭಾ ಸಂಪನ್ನೆ
ನನ್ನ ತಾಯಿ
**ಶ್ರೀಮತಿ ಶಿವಮ್ಮ ಕಾಡನಕುಪ್ಪೆ**

–ಇವರಿಗೆ ಅತ್ಯಂತ ಪ್ರೀತಿಯಿಂದ ಈ ಕೃತಿ ಅರ್ಪಿತ

# ಓದುಗರೊಂದಿಗೆ

ಈ ಕಾದಂಬರಿಯ ವಸ್ತು ನನ್ನೊಳಗೆ ಮೂಡಿ ಹಲವಾರು ವರ್ಷಗಳೇ ಆದವು. ರಾಮನಗರ ಜಿಲ್ಲೆಯಲ್ಲಿ ಹುಟ್ಟಿ ಬೆಳೆದ ನನ್ನ ಮೇಲೆ ಅಲ್ಲಿನ ಬೆಟ್ಟಗುಡ್ಡಗಳು, ಕಾಡು ಮೇಡುಗಳು, ಅಪಾರ ವೈವಿಧ್ಯಮಯ ಸಸ್ಯಸಂಪತ್ತು ಉಂಟುಮಾಡಿದ ಪರಿಣಾಮ ಅಪಾರ. ಆ ಸಂಪತ್ತು ನನ್ನ ಕಣ್ಣೆದುರೇ ನಾಶವಾಗುತ್ತಾ ವಿಕಾರಗೊಳ್ಳುತ್ತಾ ಸಾಗಿರುವುದು ನನ್ನನ್ನು ಅಘಾಸಿಗೊಳಿಸಿದೆ. ಮನುಷ್ಯನ ದುರಾಸೆ, ಲೋಭತನಗಳು ನಡೆಸಿರುವ ಕ್ರೌರ್ಯವನ್ನು ತಾಳಲಾರದೆ ಬಿಸಿಯುಸಿರು ಬಿಡುವ ವಸುಂಧರೆಯ ಪರಿತಾಪದ ಕಾವು ನನ್ನಂಥ ಹಲವರಿಗೆ ತಟ್ಟಿದೆ. ಭ್ರಷ್ಟ ವ್ಯವಸ್ಥೆ ಸೃಷ್ಟಿಮಾಡಿರುವ ಮಾನವೀಯತೆಯ, ಪ್ರಕೃತಿ ಪ್ರಿಯತೆಯ ವಿಮುಖ ಮನಸ್ಥಿತಿಯನ್ನು ಅನಾವರಣ ಮಾಡುತ್ತಲೇ, ಮಾನವನ ಸ್ವಾರ್ಥ ಮತ್ತು ಕ್ರೌರ್ಯಗಳೇ ಅವನನ್ನು ನಾಶಮಾಡುತ್ತವೆ ಮತ್ತು ಪ್ರಕೃತಿ ಅಂಥ ಮನಸ್ಥಿತಿಯನ್ನು ನುಂಗಿ ನೊಣೆದು ತನ್ನ ಮಕ್ಕಳನ್ನು ರಕ್ಷಿಸುತ್ತದೆಯೆಂದು ಈ ಕಾದಂಬರಿ ಧ್ವನಿಸುತ್ತದೆ.

ನನ್ನ ಕೆಲಸದ ಒತ್ತಡ ಮತ್ತು ನನ್ನ ಇನ್ನಿತರ ಬಿಡಿ ಬಿಡಿ ಬರೆಹಗಳ ನಡುವೆ ಈ ಕಾದಂಬರಿಯನ್ನು ಕೂತು ಬರೆಯುವ ಸಮಯ ಹಾಗೂ ಮನಸ್ಥಿತಿ ನನಗೆ ಸಾಧ್ಯವಾಗಲಿಲ್ಲ. ಆದರೆ ಅಂಥ ಒಂದು ಸಮಯ ನನಗೆ ಒದಗಿ ಬಂದಿತು!

೨೦೦೭ರ ಫೆಬ್ರವರಿ ೭ ರಂದು ನಾನು ತೀವ್ರತರ ಅಪಘಾತಕ್ಕೆ ಈಡಾದೆ. ನನ್ನ ಬಲಗಾಲು ಜಜ್ಜಿಹೋಯಿತು. ಹೀಗಾಗಿ ನಾಲ್ಕಾರು ತಿಂಗಳು ನಾನು ಮನೆಯಲ್ಲೇ ಇರಬೇಕಾಯಿತು. ಆ ಸಮಯವನ್ನು ನಾನು ಈ ಕಾದಂಬರಿಯನ್ನು ಬರೆಯಲು ಬಳಸಿಕೊಂಡೆ. ಬರವಣಿಗೆಯ ಕ್ರಿಯೆಗೆ ನೋವು ನಿವಾರಿಸುವ ಅದ್ಭುತ ಶಕ್ತಿಯಿದೆಯೆಂದು ನಾನು ಕಂಡುಕೊಂಡೆ. ಈ ಕಾದಂಬರಿಯ ಬರವಣಿಗೆ ನನ್ನಲ್ಲುಂಟು ಮಾಡಿದ ಸಂಚಲನವನ್ನು, ಅಂತರ್ದರ್ಶನವನ್ನು ಓದುಗರು ಅನುಭವಿಸುತ್ತಾರೆಂಬ ನಂಬಿಕೆ ನನಗಿದೆ.

ಈ ಕಾದಂಬರಿಯ ರಚನೆಯ ಸಂದರ್ಭದಲ್ಲಿ - ನನ್ನ ಅಪಘಾತಗೊಂಡ ದೇಹಸ್ಥಿತಿಯಲ್ಲಿ - ನನ್ನನ್ನು ನನ್ನ ಮನೆಯವರು ಅತ್ಯಂತ ಜೋಪಾನದಿಂದ, ಪ್ರೀತಿಯಿಂದ ನೋಡಿಕೊಂಡಿದ್ದಾರೆ. ಅವರ ಪಾರವಿಲ್ಲದ ಪ್ರೀತಿ ನನ್ನನ್ನು ಮೂಕನನ್ನಾಗಿಸಿದೆ. ನನ್ನ ಪತ್ನಿ ಶ್ರೀಮತಿ ಆರ್. ಸುವರ್ಣ ಕಾಡನಕುಪ್ಪೆ, ಮಗಳು ಡಾ. ಸುಶಿ ಕಾಡನಕುಪ್ಪೆ, ಮಗ ನೇಸರ ಕಾಡನಕುಪ್ಪೆ - ಇವರಿಗೆ ಎಷ್ಟು ಋಣಿಯಾದರೂ ಸಾಲದು. ಅಂತೆಯೇ ನನ್ನ ಅಪರಿಮಿತ ಹಿತೈಷಿಗಳು, ಸ್ನೇಹಿತರು, ಸಹೋದ್ಯೋಗಿಗಳು, ವಿದ್ಯಾರ್ಥಿಗಳು, ಬಂಧುಮಿತ್ರರು ತೋರಿದ ಪ್ರೀತಿಯನ್ನು ನಾನೆಂದಿಗೂ ಮರೆಯಲಾರೆ. ಅವರ ಪ್ರೀತಿಗೆ ನನ್ನ ಕೃತಜ್ಞತೆ ಎಂಬ ಮಾತು ತೋರಿಕೆಯಾದೀತು ಎಂಬ ಹೆದರಿಕೆ ನನಗೆ.

ನನ್ನ ಎಲ್ಲಾ ಕೃತಿಗಳ ಮೊದಲ ಓದುಗರು ನನ್ನ ಹೆಂಡತಿ ಮಕ್ಕಳೇ ಆದರೂ ಅವುಗಳನ್ನು ಹಸ್ತಪ್ರತಿಯಲ್ಲೇ ಓದಿ ತಪ್ಪುಒಪ್ಪುಗಳ ಬಗ್ಗೆ ಮಾತನಾಡುವವರು ನನ್ನ ಪ್ರಿಯಗುರುಗಳಾದ ಡಾ. ರಾಗೌ ಅವರು. ಅವರ ಪ್ರೋತ್ಸಾಹಭರಿತ ಪ್ರೀತಿಯನ್ನು ಮೂರು ದಶಕಗಳಿಂದಲೂ ನಿರಂತರ ಅನುಭವಿಸುತ್ತಾ ಬಂದಿದ್ದೇನೆ. ಈ ಕಾದಂಬರಿ ಪ್ರಕಟಣೆಯ ಸಂದರ್ಭದಲ್ಲಿ ಅವರನ್ನು ಕುರಿತು ಚಿಂತಿಸುವುದು ನನಗೆ ಆನಂದವನ್ನು ತರುತ್ತದೆ.

ಈ 'ವಸುಂಧರೆ'ಯನ್ನು ನಾನು ಬರೆದು ಎರಡು ವರ್ಷದ ಮೇಲಾಯಿತು. ನಾನು ಕಾದಂಬರಿ ಬರೆಯುತ್ತಿರುವುದನ್ನು ತಿಳಿದ ನನ್ನ ಮಿತ್ರರಾದ ಶ್ರೀ ಡಿ. ಎನ್. ಲೋಕಪ್ಪನವರು ಅದನ್ನು ತಮ್ಮ ಪ್ರಕಾಶನದ ಮೂಲಕ ಪ್ರಕಟಿಸಲು ಉತ್ಸುಕರಾದರು. ಹಸ್ತಪ್ರತಿಯನ್ನು ಅವರಿಗೆ ನೀಡಿದೆ. ಅವರು ಅದನ್ನು ಕಂಪೋಸ್ ಮಾಡಿಸಿ, ಕರಡು ತಿದ್ದಲು ನೀಡಿದರು. ಆದರೆ ನನ್ನ ಕೆಲಸದ ಒತ್ತಡದ ಕಾರಣದಿಂದಲೋ ಆಲಸ್ಯದಿಂದಲೋ ಅವರಿಗೆ ಕರಡು ತಿದ್ದಿ ನಾನು ನೀಡಲೇ ಇಲ್ಲ. ಈ ಕಾದಂಬರಿಯ ಲೋಕಾರ್ಪಣೆ ನನ್ನಿಂದಲೇ ತಡವಾಯಿತು. ಸದಾ ನನ್ನನ್ನು ಒತ್ತಾಯಿಸುತ್ತಾ, ತಮ್ಮ ಎಂದಿನ ಪ್ರೀತಿಯಿಂದ ನನ್ನನ್ನು ನಡೆಸಿಕೊಂಡ ಮಿತ್ರರಾದ ಶ್ರೀ ಡಿ. ಎನ್. ಲೋಕಪ್ಪನವರಿಗೆ ವಿಶೇಷ ನಮಸ್ಕಾರಗಳು ಸಲ್ಲುತ್ತವೆ.

ಈ ಕಾದಂಬರಿಯನ್ನು ಅಚ್ಚುಕಟ್ಟಾಗಿ ಮುದ್ರಿಸಿ ಪ್ರಕಟಿಸಿದ ಶ್ರೀ ರಾಜೇಂದ್ರ ಪ್ರಿಂಟರ್ಸ್ ಅಂಡ್ ಪಬ್ಲಿಷರ್ಸ್‌ನ ಮಾಲೀಕರು ಮತ್ತು ಸಿಬ್ಬಂದಿ ವರ್ಗಕ್ಕೂ, ಈ ಕೃತಿಗೆ ಅಂದವೂ ಅರ್ಥಪೂರ್ಣವೂ ಆದ ರಕ್ಷಾಕವಚವನ್ನು ರಚಿಸಿದ ಕಲಾವಿದ ಗೆಳೆಯ ಶ್ರೀ ಮಂಜುನಾಥ ಲತಾ ಅವರಿಗೂ ನನ್ನ ವಂದನೆಗಳು.

೧೭, ಆಗಸ್ಟ್ ೨೦೦೮ -ಶಿವರಾಮು ಕಾಡನಕುಪ್ಪೆ

ಮೈಸೂರು

# ವಸುಂಧರೆ

## ಅಧ್ಯಾಯ : ಒಂದು

ಬೆಂಗಳೂರು ಕಡೆಯಿಂದ ಬರುವ ಪ್ರತಿಯೊಂದು ಬಸ್ಸು ಮೈಸೂರಿಗೆ ಹೋಗುವುದಿಲ್ಲವೆಂದು ಖಾತ್ರಿಯಾಯಿತು. ಬರುತ್ತಿದ್ದ ಬಸ್ಸುಗಳು ಮಂಡ್ಯ ಹಾಲ್ಟ್ ಎಂದೋ ಮಳವಳ್ಳಿ ಅಥವಾ ಚಾಮರಾಜನಗರಕ್ಕೆಂದೋ ಬೋರ್ಡು ಧರಿಸಿ ಅವನಲ್ಲಿ ನಿರಾಶೆ ಮೂಡಿಸಿದ್ದವು. ರಾಜ್ಯ ಹೆದ್ದಾರಿಯ ಬೆಂಗಳೂರಿನ ಜಾಡನ್ನು ನೋಡಿ ನೋಡಿ ಅವನ ಕುತ್ತಿಗೆ ನೋವು ಬಂದಿತ್ತು; ಅವನ ಕಣ್ಣುಗಳು ಬಿಸಿಲಿನ ಜಳಕ್ಕೆ ಮುಚ್ಚಿಕೊಳ್ಳಲು ಯತ್ನಿಸುತ್ತಿದ್ದವು.

ಆಗಲೇ ಗಂಟೆ ಐದೂವರೆ ಆಗಿತ್ತು. ಸುಮಾರು ಒಂದು ಗಂಟೆಯಿಂದ ಅವನು ಮೈಸೂರಿಗೆ ಹೋಗುವ ಬಸ್ಸಿಗಾಗಿ ಕಾದಿದ್ದ. ಮೊದಲೆ ಅವನ ಅಣ್ಣನ ಮಗ "ಚಿಕ್ಕಪ್ಪ, ಈ ಸಮಯದಲ್ಲಿ ಮೈಸೂರಿಗೆ ಬಸ್ಸು ಕಮ್ಮಿ. ನೀವು ಇಲ್ಲೇ ಇನ್ನು ಸ್ವಲ್ಪ ಹೊತ್ತು ರೆಸ್ಟ್ ತೆಗೆದುಕೊಂಡು ಹೋಗುವುದು ಲೇಸು" ಎಂದು ಹೇಳಿದ್ದ. ಅದಕ್ಕೆ ಅವನು "ಇಲ್ಲ, ನಾನು ಮೈಸೂರಿಗೆ ಆರೂವರೆ-ಏಳುಗಂಟೆಯ ಹೊತ್ತಿಗಾದರೂ ಸೇರಬೇಕು. ನಾಳೆ ಮಾಡಲು ಸಾಕಷ್ಟು ಕೆಲಸಗಳಿವೆ. ತರಗತಿಗಳಿಗೆ ಬೇರೆ ತಯಾರಿ ನಡೆಸಬೇಕು" ಎಂದು ಉತ್ತರಿಸಿ, ಬಸ್ ನಿಲ್ದಾಣಕ್ಕೆ ಬಂದಿದ್ದ. ಅಣ್ಣನ ಮಗನ ಮಾತು ನಿಜವೆಂಬುದು ಸುಮಾರು ಒಂದು ಗಂಟೆ ಬಸ್ಸಿಗೆ ಕಾದನಂತರ ತಿಳಿದು ಬಂತು. ಅವನ ಮಾತನ್ನು ಕೇಳಿದ್ದರೆ ಆಗುತ್ತಿತ್ತು. ಸ್ವಲ್ಪ ನಿದ್ದೆ ಮಾಡಬಹುದಿತ್ತು. ಹೊತ್ತು ಇಳಿದ ನಂತರ ಟೀ ಕುಡಿದು ಇಲ್ಲಿಗೆ ಬರಬಹುದಿತ್ತು.

ಕುತ್ತಿಗೆಯ ಸುತ್ತ ಹನಿಗಟ್ಟಿದ ಬೆವರನ್ನು ಅವನು ಒರೆಸಿಕೊಂಡ. ಮತ್ತೆ ಅವನಿಗರಿವಿಲ್ಲದಂತೆ ಅವನ ಕಣ್ಣು ಬೆಂಗಳೂರು ಕಡೆಯ ರಸ್ತೆಯನ್ನು ನಿರೀಕ್ಷೆಯಿಂದ ನೋಡಿತು. ರಸ್ತೆ ತುಂಬ ಹರಿದು ಬರುತ್ತಿದ್ದ ದ್ವಿಚಕ್ರವಾಹನಗಳು, ಲಾರಿಗಳು, ವಿವಿಧ ಬಗೆಯ ಹೊಸ ಕಾರುಗಳು, ತಡೆರಹಿತ ಬಸ್ಸುಗಳು ಅವನಿಗೆ ನಿರೀಕ್ಷೆಯನ್ನು ಆತಂಕವನ್ನು ಹೆಚ್ಚಿಸುತ್ತಿದ್ದವು. ಮೈಸೂರು-ಬೆಂಗಳೂರು ಹೆದ್ದಾರಿ ಆಧುನೀಕರಣಗೊಂಡು ಸಂಜೆಯ ಬಿಸಿಲಿನ ಜಳಕ್ಕೆ ಹೊಳೆಯುತ್ತಿತ್ತು.

ಅವನಿಗೆ ಆ ರಸ್ತೆಯ ಬಗ್ಗೆ ಒಂದು ಬಗೆಯ ವಿಶೇಷ ಪ್ರೀತಿ. ಅದು ತನ್ನದು ಎಂಬ ಭಾವನೆ! ಸುಮಾರು ಇಪ್ಪತ್ತು ವರ್ಷಗಳಿಂದ ಲೆಕ್ಕವಿಲ್ಲದಷ್ಟು ಬಾರಿ ಈ ರಸ್ತೆಯಲ್ಲಿ ಸಂಚರಿಸಿದ್ದ. ತನ್ನೂರಿನಿಂದ ಮೈಸೂರಿಗೆ, ಮೈಸೂರಿನಿಂದ ತನ್ನೂರಿಗೆ ತನ್ನನ್ನು ಹೊತ್ತು ತರುತ್ತಿದ್ದ ಕೆಂಪು

ಬಸ್ಸುಗಳು ಅವನಿಗೆ ಸದಾ ಪ್ರಿಯ. ಅವು ಗಟ್ಟಿ ಮುಟ್ಟಾಗಿವೆ; ಅವುಗಳ ಬಣ್ಣ ಅಪಾಯದ ಸಂಕೇತವಲ್ಲ; ಬದಲು ಪ್ರೀತಿಯ ಸಂಕೇತ, ಕ್ರಾಂತಿಯ ಸಂಕೇತ ಎಂದೆಲ್ಲ ಸ್ನೇಹಿತರ ಮುಂದೆ ವಾದ ಮಂಡಿಸುತ್ತಿದ್ದ. ಈ ಬಸ್ಸುಗಳು ತಿರುಗಾಡುವ ರಸ್ತೆಯ ಅಕ್ಕಪಕ್ಕದ ಪ್ರತಿ ಸ್ಥಳ, ಪ್ರತಿ ಊರು ಅವನಿಗೆ ಅರಿವಿಲ್ಲದಂತೆ ಅವನಾಳದಲ್ಲಿ ಅಚ್ಚೊತ್ತಿದ್ದವು. ಅನೇಕ ಬಾರಿ ಕಣ್ಣು ಮುಚ್ಚಿ ಕುಳಿತು, ಬಸ್ಸು ಈಗ ಇಂಥಿಂಥ ಸ್ಥಳದಲ್ಲಿದೆಯೆಂದು ಅನುಭವಿಸಿ ಹೇಳುತ್ತಿದ್ದ.

ಕಾಲ ಬದಲಾಗಿತ್ತು. ಈಗ ಅವನ ಕೆಂಪು ಬಸ್ಸುಗಳು ಕಾಣೆಯಾಗುತ್ತಾ ಬಂದಿದ್ದವು. ಅವುಗಳ ಜಾಗದಲ್ಲಿ ಆಧುನೀಕರಣಗೊಂಡ 'ಸುವರ್ಣ ಕರ್ನಾಟಕ ಸಾರಿಗೆ' ಎಂಬ ಬರೆಹ ಹೊತ್ತ ಬಸ್ಸುಗಳು ರಸ್ತೆ ತುಂಬ ಓಡಾಡಿಕೊಂಡಿದ್ದವು. ಕೆಂಪು ಬಣ್ಣಕ್ಕೆ ಬದಲಾಗಿ ನೀಲಿ ಮಿಶ್ರಿತ ಹಳದಿ ವಿನ್ಯಾಸದ ತೆಳು ಹಸಿರು ಬಣ್ಣದ ಅಲಂಕಾರವನ್ನು ಅವು ಮಾಡಿಕೊಂಡಿದ್ದವು. ಇವುಗಳ ವೈಭವದ ಮಧ್ಯೆಕೆಂಪು ಬಸ್ಸುಗಳು ಮುದಿಯಾದಂತೆ, ಲಡಾಸುಗೊಂಡು ಗಡಗಡ ಲಡಲಡ ಸದ್ದು ಮಾಡುತ್ತಾ ಅಲ್ಲೊಂದು ಇಲ್ಲೊಂದು ಕಾಣಿಸುತ್ತಿದ್ದವು.

ಕಾಲ ಬದಲಾಗಿತ್ತು. ಹಳೆಯ ಒಂದು ರಸ್ತೆಯ ಬದಲು ಈಗ ಜೋಡಿ ರಸ್ತೆ ಮಿಂಚುತ್ತಿತ್ತು. ರಸ್ತೆ ತನ್ನ ಹೊಳಪು ಮೈನಿಂದಾಗಿ ನುಣುಪಾಗಿ ಸಮವಾಗಿ ತೋರುತ್ತಿತ್ತು. ಎರಡೂ ರಸ್ತೆಯ ನಡುವಿನ ಆರು ಅಡಿಯ ರಸ್ತೆ ವಿಭಜಕದಲ್ಲಿ ದಾಸವಾಳ, ಕಣಗಲ, ವಿವಿಧ ಬಗೆಯ ಗೊರಂಟಾ ಗಿಡಗಳನ್ನು ಬೆಳೆಸಲಾಗಿತ್ತು. ಬಸ್ಸಿನಲ್ಲಿ ಕೂತವರಿಗೆ ಗಿಡಗಳು ಮತ್ತು ಅವುಗಳ ಹೂವುಗಳು ಆಹ್ಲಾದವನ್ನುಂಟು ಮಾಡುತ್ತಿದ್ದವು. ಜೋಡಿ ರಸ್ತೆಯಾದ್ದರಿಂದ ಏಕಮುಖ ಸಂಚಾರ ವ್ಯವಸ್ಥೆಯಿದ್ದು, ಅಪಘಾತಗಳು ಕಡಿಮೆ ಸಂಭವಿಸುತ್ತವೆಯೆಂಬುದು ಸಾಮಾನ್ಯ ನಂಬಿಕೆಯಾಗಿತ್ತು. ಆ ನಂಬಿಕೆಯನ್ನು ಸುಳ್ಳುಮಾಡಿ ಆಧುನಿಕ ವಾಹನಗಳ ವೇಗ, ಚಾಲಕನ ಅಜಾಗರೂಕತೆ ಅಪಘಾತಗಳ ಸಂಖ್ಯೆಯನ್ನು ಅಧಿಕಗೊಳಿಸಿದ್ದವು. ಶ್ರೀಮಂತರಲ್ಲಿ, ಅಧಿಕಾರಿಶಾಹಿಯಲ್ಲಿ ಕೇಂದ್ರೀಕರಣಗೊಂಡ ಹಣದಿಂದಾಗಿ ರಸ್ತೆಯಲ್ಲಿ ವಾಹನಗಳ ಒತ್ತಡವುಂಟಾಗಿತ್ತು. ವೇಗ ಮತ್ತು ಒತ್ತಡ ವರ್ತಮಾನ ಕಾಲದ ಮಹಿಮೆ. ಆ ಮಹಿಮೆಯ ಮೋಡಿಗೆ ರಸ್ತೆ ಸಿಲುಕಿತ್ತು. ಹೊಸ ರಸ್ತೆ, ಹೊಸ ಕಾರು ಬಸ್ಸುಗಳು ಭವಿಷ್ಯಕ್ಕೆ ಧುತ್ತನೆ ಹಾರುವಂಥ ದಾವಂತದಲ್ಲಿದ್ದವು.

ಕಿವಿಯ ತಮಟೆ ಕಿತ್ತು ಬೀಳುವಂಥ ಸದ್ದಿನಿಂದಾಗಿ ಅವನು ಬೆಚ್ಚಿಬಿದ್ದ. ರಾಮನಗರದಿಂದ ಚನ್ನಪಟ್ಟಣಕ್ಕೋ ಕನಕಪುರಕ್ಕೋ ಬಿಡದಿಗೋ ಸ್ಥಳೀಯ ಪ್ರಯಾಣಿಕರನ್ನು ಕರೆದುಕೊಂಡು ಹೋಗುವ ಮಿನಿಬಸ್ಸುಗಳು ಒಂದರ ಹಿಂದೆ ಒಂದರಂತೆ ನಿಂತು ಕರ್ಕಸವಾದ ಹಾರ್ನ್ ಮಾಡುತ್ತಾ ಅಶಿಸ್ತಿನ ಗೂಳಿಗಳಂತೆ ನಿಂತು, ಪ್ರಯಾಣಿಕರನ್ನು ಕೂಗಿ ಕರೆಯುತ್ತಿದ್ದವು. ಅವನು ಆ ಮಿನಿ ಬಸ್ಸುಗಳನ್ನು ಒಮ್ಮೆ ನೋಡಿದ. ಅವು ಕೂಡ ಆಧುನಿಕರಣಗೊಂಡಿದ್ದವು. ಹಾಗೇ ನೋಡಿದರೆ ಸರ್ಕಾರಿ ಬಸ್ಸುಗಳಿಗಿಂತ ಅಲಂಕಾರದಲ್ಲಿ ಇವು ಒಂದು ಕೈ ಮೇಲು! ಬಸ್ಸಿನ ಮೈ ತುಂಬ ವಿವಿಧ ಬಣ್ಣದ ಚಿತ್ತಾರಗಳು. ಬಸ್ಸಿನ ಮಾಲೀಕನ ಇಷ್ಟ ದೇವತೆಯ ಚಿತ್ರ. ಮುಂಭಾಗದಲ್ಲಿ ಆ ದೇವತೆಯ ಹೆಸರನ್ನು ಗಾಢವಾಗಿ ಬರೆಸಿ 'ಕೃಪೆ' ಎಂದೋ 'ಪ್ರಸನ್ನ'ವೆಂದೋ ಕರೆದು ತಮ್ಮ ಭಕ್ತಿಯನ್ನು ಮೆರೆಸಲಾಗುತ್ತಿತ್ತು. ಬಸ್ಸಿನ ಒಳಗೆ ಸದಾ ಚಿತ್ರಗೀತೆ ಬಿತ್ತರಗೊಳ್ಳುತ್ತಿತ್ತು. ಆದರೆ

ಕಂಡಕ್ಟರ್‌ನ ಕೂಗು, ಸಹಾಯಕನ ಆರಚಾಟ, ಜನರ ನುಗ್ಗಾಟಗಳಲ್ಲಿ ಆ ಗೀತೆಯನ್ನು ಯಾರಾದರೂ ಕೇಳುತ್ತಿದ್ದಾರೆ ಎಂಬುದಕ್ಕೆ ಪುರಾವೆ ಸಿಗುತ್ತಿರಲಿಲ್ಲ.

ಅವನಿಗೆ ಅವನ ಬಾಲ್ಯ ನೆನಪಿಗೆ ಬತು. ಆಗ ಇಂಥ ಮಿನಿ ಬಸ್ಸುಗಳೆಲ್ಲಿದ್ದವು? ಮೂತಿ ಬಸ್ಸುಗಳು, ಮೆಟಡಾರ್‌ಗಳು, ನಿಧಾನವಾಗಿ ಚಲಿಸುವ ಹಳೆಯ ಮಾಡೆಲ್ಲಿನ ಮಜ್ದಾಗಳು. ಆಗ ನಿಧಾನವೇ ಪ್ರಧಾನ. ಕೈ ತೋರಿಸಿದ ಕಡೆಯಲೆಲ್ಲಾ ನಿಂತು ನಿಂತು ಪಯಣಿಸುವ ವಾಹನಗಳು ಜಡತ್ವದ ಸೋದರ ಸಂಬಂಧಿಗಳಂತೆ ತೋರುತ್ತಿದ್ದವು. ಆಗ ಆ ವಾಹನಗಳ ನಿಧಾನ ಮತ್ತು ಗಲಾಟೆಯಿಂದ ಅವನನ್ನು ಕಾಪಾಡುತ್ತಿದ್ದದು ರಾಮನಗರದ ಸುತ್ತ ಮುತ್ತಲ ಪ್ರದೇಶದ ದೈತ್ಯಾಕಾರದ ಬೆಟ್ಟಗಳು, ಮರಗಿಡಗಳಿಂದಾವೃತವಾದ ಗುಡ್ಡಗಳು, ಎಲ್ಲಿಯೂ ಸಮತಟ್ಟಾಗಿರದ ಹಳ್ಳತಗ್ಗಿನ ಭೂಪ್ರದೇಶದ ಸುಂದರ ಹೊಲ ತೋಟಗಳು! ಬೇಸಿಗೆಯಲ್ಲಿ ಬೆಂದು ಕುದಿವ ಬಿಸಿಲಿನ ಜಳ ಬೆವರಿನ ಸ್ನಾನವನ್ನು ಮಾಡುಸುತ್ತಿತ್ತು. ಆ ಬೆವರು ಆ ಬಿಸಿಲು ಆ ಕಾದ ಕಲ್ಲಿನ ಸಂಪರ್ಕದಿಂದಾಗಿ ಅಲ್ಲಿನ ಜನರೂ ಕಪ್ಪಾಗಿದ್ದರು. ಸುತ್ತ ಮುತ್ತಲ ಬಯಲು ಸೀಮೆಯ ಜನರು ಈ ರಾಮನಗರದ ಬೆಟ್ಟಗಳ ನಾಡನ್ನು 'ಗಿಡಸೀಮೆ'ಯೆಂದು ಕರೆಯುತ್ತಿದ್ದರು. ಅವನು ಈ 'ಗಿಡಸೀಮೆ'ಯ ಭಾಗವಾಗಿ ಬಾಲ್ಯವನ್ನು ಕಳೆದಿದ್ದ. ಅಲ್ಲಿನ ಬೆಟ್ಟಗಳು ಅವುಗಳನ್ನು ಆವರಿಸಿನಿಂತು ಬೆಳೆದ ಕಾಡು ಅವನ ಓಡಾಟದ ತಾಣಗಳಾಗಿದ್ದವು.

ಮಲೆನಾಡಿಗರಿಗೆ ಈ 'ಗಿಡಸೀಮೆ' ಕಾಡು ಎಂದು ಅನಿಸುತ್ತಲೇ ಇರಲಿಲ್ಲ. ದಟ್ಟವಾದ ನಿತ್ಯಹರಿದ್ವರ್ಣದ ಸಹ್ಯಾದ್ರಿಯ ಕಾಡುಗಳಿಗೆ 'ಗಿಡಸೀಮೆ'ಯನ್ನು ಹೋಲಿಸಲಾಗದು. ಇದಕ್ಕೆ ಇದರದೇ ಆದ ಸೌಂದರ್ಯವಿದೆ, ನಿಗೂಢವಿದೆ; ಅಪರಿಮಿತವಾದ ಸಸ್ಯಸಂಪತ್ತಿದೆ. ಅವನನ್ನು ಊರಿಂದ ಊರಿಗೆ ಕಾಡುಮೇಡುಗಳ ಮಧ್ಯೆ ಹಳೆಯ ಕಾಲದ ವಾಹನಗಳು ನಿಧಾನವಾಗಿ ಕರೆದೊಯ್ದಿದ್ದವು. ಈಗ ಅವು ಎಲ್ಲಿ ಹೋದವು?

ಅವನಿಗೆ ತನ್ನ ಬಗ್ಗೆಯೇ ಬೇಸರವಾಯಿತು. ತಾನು ಎಲ್ಲೋ ಭೂತಕಾಲದ ಮೋಹದಲ್ಲಿ ಸಿಲುಕಿದ್ದೇನೆ ಎನ್ನಿಸಿತು. ಇಲ್ಲ, ಬಾಲ್ಯ ಅಮೃತದಂಥ ಸಮಯ. ಅದರ ನೆನಪೇ ಮಧುರ. 'ಆ ಕಾಲವೊಂದಿತು, ದಿವ್ಯ ತಾನಾಗಿತ್ತು' ಎಂದು ಕವಿ ಹಾಡಿಲ್ಲವೆ? ಆದರೆ ಬೆಳೆ ಬೆಳೆದಂತೆಲ್ಲಾ ನಾವು ಏನಾಗುತ್ತೇವೆ ? ಏನಾಗಿದ್ದೇವೆ ? ವರ್ತಮಾನ ಆತ್ಮಪರೀಕ್ಷೆ ಮಾಡಿ ಕೊಳ್ಳಬೇಕು. ಬಾಲ್ಯದ ರಕ್ಷಣೆ ಯೌವ್ವನಕ್ಕೆ ಬೇಕಿಲ್ಲದೆ ಇರಬಹುದು. ಆದರೆ ಅದು ಖಂಡಿತ ಭವಿಷ್ಯಕ್ಕೆ ಬೇಕು.

ಅವನು ಸುತ್ತ ದೂರ ದಿಗಂತಗಳಲ್ಲಿ ಕಾಣುವ ಬೆಟ್ಟಗುಡ್ಡಗಳನ್ನು ನೋಡಿದ. ರಾಮನಗರವೇ ಹಾಗೆ. ನೀವು ಯಾವ ದಿಕ್ಕಿಗೆ ನೋಡಿದರೂ ಬೆಟ್ಟಗಳು! ಒಂದೂ ಒಂದೊಂದು ಆಕಾರ. ಅವರವರ ಕಲ್ಪನೆಗೆ ತಕ್ಕಂತೆ! ಕೆಲವರು ಆನೆ ಬೆಟ್ಟವೆಂದರು, ಕೆಲವರು ತಲೆ ಬೆಟ್ಟವೆಂದರು, ದೇಶಭಕ್ತರು ಗಾಂಧೀ ತಲೆಯೆಂದರು- ಹೀಗೆ ನಾನಾ ತರಹ. ಯಾರಾ ಕಲ್ಪನೆಗೂ ಮೋಸವಿಲ್ಲ, ಮಿಥ್ಯೆಯೂ ಅಲ್ಲ.

ಮತ್ತೆ ಗಡಿಯಾರ ನೋಡಿಕೊಂಡ. ಬಸ್ಸುಯಾಕೆ ಬರುತ್ತಿಲ್ಲ ? ರಾಮನಗರದ ಜನ ಬದಲಾಗಿದ್ದಾರೆಯೇ ? ಅವನ ದೃಷ್ಟಿ ರಸ್ತೆಯ ಇಕ್ಕೆಲಗಳ ಅಂಗಡಿ ಸಾಲುಗಳಲ್ಲಿ ನಿಂತ,

ರಸ್ತೆಯಂಚಿನ ಮರಗಳ ನೆರಳಲ್ಲಿ ಸೆಕೆಗೆ ಬೆವರು ಸುರಿಸುತ್ತಾ ನಿಂತ ಜನರ ಕಡೆ ಹರಿಯಿತು. ಅದೇ ಜನ. ಅದೇ ಕೊಳಕು ಪಂಚೆಯ, ಕಡಿಮೆ ಬೆಲೆಯ ನೈಲಾನ್ ಸೀರೆಯ ಜನ. ಹೊಸ ತಲೆಮಾರಿನ ಹುಡುಗರು ಪ್ಯಾಂಟಿಗೆ ಬಂದಿದ್ದಾರೆ. ನಾಲ್ಕು ಅಕ್ಷರ ಕಲಿತ ನಂತರವಂತೋ ಚಡ್ಡಿ ಹಾಕಿಕೊಂಡು ಬೀದಿಯಲ್ಲಿ ನಡೆದಾಡುವುದು ಅವಮಾನವೆಂದು ಬಗೆಯುತ್ತಾರೆ. ಬಣ್ಣಬಣ್ಣದ ಲುಂಗಿಯನ್ನು ಸುತ್ತಿಕೊಂಡಿರುತ್ತಾರೆ. ಅಥವಾ ಪ್ಯಾಂಟು ಧರಿಸುತ್ತಾರೆ. ಹುಡುಗಿಯರು ಅಷ್ಟೇ. ಈಗ ಲಂಗ ದಾವಣಿ, ಲಂಗ ಪ್ರಾಕ್- ಅವೆಲ್ಲಾ ಮಂಗ ಮಾಯ! ಈಗೇನಿದ್ದರೂ ಚೂಡಿದಾರ್!

ಈಗಲೂ ರಸ್ತೆಯಲ್ಲಿ ಅಲ್ಲೊಬ್ಬ ಇಲ್ಲೊಬ್ಬ ಪಟಾಪಟಿ ಚಡ್ಡಿ ಧಾರಿಯನ್ನು ಕಾಣಬಹುದು. ಚಡ್ಡಿಯಿರಲಿ, ಪಂಚೆಯಿರಲಿ ಹೆಗಲ ಮೇಲೆ ಒಂದು ಟವಲ್ಲು ಖಾಯಂ ಆಗಿ ಇರಬೇಕು. ಅದು ಅವರ ಟ್ರೇಡ್ ಮಾರ್ಕ್. ಈ ಕಡೆಯ ರೈತ ಮಕ್ಕಳನ್ನು ಬೆಂಗಳೂರು ಮೈಸೂರಿನ ಪೇಟೆಯ ಜನ ಬಹಳ ಹಿಂದೆ 'ಎಚ್ ಎಂ ಟಿ'ಗಳೆಂದು ಕರೆದು ಲೇವಡಿ ಮಾಡುತ್ತಿದ್ದರು. ಅಂದರೆ 'ಹೆಗಲ ಮೇಲೆ ಟವಲ್' ಎಂದು.

ಮಿನಿ ಬಸ್ಸುಗಳಿಗೆ ಜನ ಹತ್ತುವ, ಇಳಿಯುವ ಭರಾಟೆ ನಡೆಯುತ್ತಿತ್ತು. ಅವನ ಸುತ್ತ ಬಸ್ಸಿಗೆ ಹತ್ತುವ ಜನರ ದಾವಂತವಿತ್ತು. ಆ ಜನರ ಮೈನಿಂದ ಬರೀ ಬೆವರ ವಾಸನೆ ಮಾತ್ರ ಬರುತ್ತಿರಲಿಲ್ಲ. ಸುರೆಯ ವಾಸನೆ ಕೂಡ ಧಾರಾಳವಾಗಿ ಬರುತ್ತಿತ್ತು. ಬೆಳಿಗ್ಗೆಯೋ ಮಧ್ಯಾಹ್ನವೋ ತಮ್ಮ ಊರುಗಳಿಂದ ಕೆಲಸ ವಿರಲಿ, ಇಲ್ಲದಿರಲಿ ಒಂದು ಪಂಚೆ ಸುತ್ತಿ ಹೆಗಲ ಮೇಲೊಂದು ಟವಲ್ ಹಾಕಿಕೊಂಡು ರಾಮನಗರಕ್ಕೆ ಬಂದು, ಒಂದು ಸುತ್ತು ಪೇಟೆಬೀದಿಯಲ್ಲಿ ಅಲೆದು, ಕಾಕನ ಅಂಗಡಿಯಲ್ಲಿ ಟೀ ಕುಡಿದು ಹರಟೆ ಕೊಚ್ಚುತ್ತಿದ್ದರು. ಸಂಜೆ ಆಗುತ್ತಿದಂತೆ ಅವರ ಶಕ್ತ್ಯಾನುಸಾರ ಮಧಿರೆಯನ್ನು ಸೇವಿಸುತ್ತಿದ್ದರು. ಅವರ ಶಕ್ತಿಯನ್ನು ಗುರುತಿಸಿದ್ದೇವೆಂಬಂತೆ ವಿವಿಧ ಅಂತಸ್ತಿನ ಹೋಟೆಲ್ಲುಗಳು ಇದ್ದವು. ಕೆಲವರು ಬಾರ್‌ಗಳಲ್ಲಿ ಕೂತು ಕುಡಿದರೆ, ಮತ್ತೆ ಕೆಲವರು ಮಧ್ಯದಂಗಡಿಗಳಲ್ಲಿ ನಿಂತೇ ಕುಡಿಯುತ್ತಾರೆ. ಕೆಲವರು ಜೊತೆಗೆ ಚಿಕನ್ ಮಟನ್ ಪ್ರೈ ಕಬಾಬ್‌ಗಳನ್ನು ತಿಂದರೆ ಮತ್ತೆ ಕೆಲವರಿಗೆ ಉಪ್ಪಿನ ಕಾಯಿಯೇ ಗತಿ!

ಈ ಸುರೆಯ ವಾಸನೆ ತನ್ನ ಮೂಗಿಗೆ ಬಡಿದಾಕ್ಷಣ ಅವನಿಗೆ ರಾಮನಗರದಲ್ಲಿ ಬಹಳ ವರ್ಷಗಳಿಂದ ಅರ್ರ್ಯಾಕ್ ಅಂಗಡಿ ನಡೆಸುತ್ತಿರುವ ಅವನ ಬಾಲ್ಯದ ಗೆಳೆಯ ಗುರುಸ್ವಾಮಿ ಹೇಳಿದ ಮಾತೊಂದು ನೆನಪಿಗೆ ಬಂತು. ಗುರುಸ್ವಾಮಿ ವಂಶಪಾರಂಪರ್ಯವಾಗಿ ಹೆಂಡ ಮಾರುವ ದಂದೆಯಲ್ಲಿದ್ದವರು. ಅವರ ಅಪ್ಪ ತಾತ ಮುತ್ತಾಂದಿರು ಈಚಲು ಹೆಂಡ, ತೆಂಗಿನ ಮರದ ಹೆಂಡ ಮಾರುತ್ತಿದ್ದರು. ಅರ್ರ್ಯಾಕ್ ಎಂಬ ಸರ್ಕಾರಿ ಹೆಂಡ ಬಂದ ಮೇಲೆ ಅದರ ಗುತ್ತಿಗೆ ತೆಗೆದುಕೊಂಡಿದ್ದರು. ಗುರುಸ್ವಾಮಿ ಪಿಯೂಸಿಗೆ ಓದುನಿಲ್ಲಿಸಿ ಅರ್ರ್ಯಾಕ್ ಅಂಗಡಿಯ ಗಲ್ಲದ ಮೇಲೆ ಕೂತಿದ್ದ. ಹೆಂಡ ಅವನಿಗೆ ದೇವತೆ! ಎಂದೂ ತುಟಿಗೆ ಸೋಕಿಸಿದವನಲ್ಲ. ಅದು ಅವನ ವೃತ್ತಿ; ಬದುಕು! ಅವನು ನೋಡುತ್ತಿದ್ದುದ್ದು ಬರೀ ಬಡವರನ್ನೇ. ಅವನ ಬಳಿ ಶ್ರೀಮಂತರು ಬರುತ್ತಿರಲಿಲ್ಲ. ಅವರಿಗೆ ಸಂಗೀತದ ಮೋಜು ನೀಡಿ ಕತ್ತಲೆಯಲ್ಲೇ ಮತ್ತೇರಿಸುವ ಬಾರ್‌ಗಳಿದ್ದವು.

ಗುರುಸ್ವಾಮಿ ಬಡವರ ಕುಡಿತದ ಚಟದಿಂದ ರೋಸಿ ಹೋಗಿದ್ದ, ನೊಂದು ಕೊಂಡಿದ್ದ. ಒಂದು ಮಧ್ಯಾಹ್ನ ಅವನೊಡನೆ ಹೇಳಿದ್ದ :

"ಮೊದಲೆಲ್ಲಾ ನಾವು ಅಂಗಡಿ ಬಾಗಿಲು ತೆಗೀತಾ ಇದ್ದದ್ದು ಸಂಜೆ ನಾಲ್ಕು ಗಂಟೆಗೆ. ಗಲ್ಲ ತೆರೆದು, ಪೂಜೆ ಮಾಡಿ ಕೂತು, ಗಿರಾಕಿಗಳಿಗೆ ನಾವು ಕಾಯುತ್ತಿದ್ದೆವು. ಗಿರಾಕಿಗಳು ಮಾತ್ರ ಕತ್ತಲಾಗುವವರೆಗೂ ಇತ್ತ ಬರುತ್ತಿರಲಿಲ್ಲ. ತಾವು ಕುಡಿಯುವುದು ಇತರರಿಗೆ ತಿಳಿಯಬಾರದು ಎಂಬ ಕನಿಷ್ಟ ನೈತಿಕ ಪ್ರಜ್ಞೆಯಾದರೂ ಇತ್ತು. ನಮಗೆ ಬೋಣಿ ಆಗುತ್ತಿದ್ದುದೇ ಕತ್ತಲಾದ ಮೇಲೆ ; ಈಗ ಕಾಲ ಬದಲಾಗಿದೆ. ಈಗ ನಾವು ಬೆಳಿಗ್ಗೆ ಹತ್ತಕ್ಕೇ ಬಾಗಿಲು ತೆಗೆಯುತ್ತೇವೆ. ನಮಗಿಂತಾ ಮೊದಲೇ ಗಿರಾಕಿಗಳು ಕಾದಿರುತ್ತಾರೆ. 'ಯಾಕಣ್ಣಾ ಲೇಟು' ಎಂದು ನಮ್ಮನ್ನೇ ಪ್ರಶ್ನಿಸುತ್ತಾರೆ. ಹಾಡು ಹಗಲೇ ಕುಡಿದು ತೂರಾಡುತ್ತಾರೆ. ಯಾರಾದರೂ ನೋಡಾರು ಅಂದಾರು ಎಂಬ ಪ್ರಜ್ಞೆಯೇ ಇಲ್ಲ. ಹಿಂದೆ ಹೊಲೇರು ಮಾದಿಗರು ಕತ್ತಲಾದ ಮೇಲೆ ಬರುತ್ತಿದ್ದರು. ಈಗ ಹಂಗೇನಿಲ್ಲ. ಒಕ್ಕಲಿಗರು. ಲಿಂಗಾಯಿತರು, ಕುರುಬರು- ಎಲ್ಲಾ ಜಾತಿಯೋರು ಬರ್‍ತಾರೆ. ಈಗಲೂ ಹೊಲೆ ಮಾದಿಗರೇ ವಾಸಿ. ಅವರು ಅಭ್ಯಾಸದಂತೆ ಕತ್ತಲಾದ ಮೇಲೆ ಬರ್‍ತಾರೆ."

ಅವನಿಗೆ ತಲೆ ತಿರುಗಿದಂತೆ ಭಾಸವಾಯಿತು. ನಾಲ್ಕುವರೆಗಂಟೆಯಿಂದ ಬಸ್ಸಿಗೆ ಕಾದದ್ದಕ್ಕೆ ಇರಬಹುದು; ಬಸ್ಸುಗಳನ್ನು ಹತ್ತಿ ಇಳಿಯುತ್ತಿದ್ದ ಜನರ ಸುರೆಯ ವಾಸನೆಯಿಂದ ಇರಬಹುದು. ಜನರ ಒತ್ತಡದಿಂದ ಹಿಂದೆ ಸರಿದು ನಿಡಿದಾಗಿ ಉಸಿರೆಳೆದು ಬಿಟ್ಟ. ಸ್ವಲ್ಪ ಆರಾಮ ಅನ್ನಿಸಿತು.

ಏಪ್ರಿಲ್ ತಿಂಗಳ ಎರಡನೆಯದಿನ, ಕಡು ಬೇಸಿಗೆ. ಮಳೆರಾಯನ ದರ್ಶನವಾಗಿ ಆರು ತಿಂಗಳ ಮೇಲೇ ಆಗಿರಬಹುದು. ಆದರೂ ಈ ಸೀಮೆಯ ಮರಗಿಡಗಳಿಗೆ ವಸಂತನ ಆಗಮನವಾಗಿದೆ. ಬಿರುಬೇಸಿಗೆಯಲ್ಲೂ ಮರಗಿಡಗಳು ಚಿಗುರಿ ನಿಂತಿವೆ; ಕೆಲವಂತೂ ಹೂವಿನಿಂದ ಶೃಂಗಾರಗೊಂಡಿವೆ. ಅವನಿಗೆ ಯಾವಾಗಲೂ ಅಚ್ಚರಿ! ಈ ಸುಡುಬೇಸಿಗೆಯಲ್ಲೂ ಈ ರೀತಿ ಹಸುರಿನಿಂದ ನಳನಳಿಸುವ ಶಕ್ತಿ ಮರಗಿಡಗಳಿಗೆ ಎಲ್ಲಿಂದ ಬಂತು ? ಪ್ರಕೃತಿ ನಿಗೂಢವಾಗುತ್ತದೆ. ಅವನಿಗೆ ಅದರ ಮೇಲಿನ ಪ್ರೀತಿ ಮತ್ತೆ ಮತ್ತೆ ಗಟ್ಟಿಯಾಗಿದೆ.

ಮತ್ತೆ ಗಡಿಯಾರ ನೋಡಿ ಕೊಂಡ. ಸಂಜೆ ಆರಾಯ್ತಾ ಬಂತು. ಯಾಕೆ ಮೈಸೂರಿನ ಕಡೆ ಬಸ್ಸು ಬಂದಿಲ್ಲ. ಬೆಂಗಳೂರಿನಲ್ಲಿ ಸ್ಟ್ರೈಕ್ ಆಗಿದೆಯೆ ? ಅಥವಾ ಮಾರ್ಗಮಧ್ಯ ದಲ್ಲೆಲ್ಲಾದರೂ ರಸ್ತೆ ಚಳುವಳಿ ನಡೆಯುತ್ತಿದೆಯೇ ? ಆಗಿರಲಾರದು. ಹಾಗಾದರೆ ಯಾವ ವಾಹನಗಳೂ ಬರುವಂತಿಲ್ಲ. ಬೇರೆ ವಾಹನಗಳು ಬರುತ್ತಿವೆಯಲ್ಲಾ ? ಮತ್ತೆ ಅಣ್ಣನ ಮಗನ ಮಾತು ನೆನಪಾಯಿತು. ಇರಬಹುದು. ಇದು ಅವೇಳೆಯೇ ಇರಬೇಕು. ಅದಕ್ಕೆ ಬಸ್ಸು ಬರುತ್ತಿಲ್ಲ.

ಬಸ್ಸು ಲಾರಿ ಕಾರು ಮತ್ತಿತರ ವಾಹನಗಳ ವೇಗಕ್ಕೆ ರಸ್ತೆಯಲ್ಲಿ ಧೂಳು ಮೇಲಕ್ಕೆದ್ದು ಸುತ್ತ ಆವರಿಸುತ್ತಿತ್ತು. ಆ ಧೂಳು ಮರಗಿಡ ಮನೆ ಅಂಗಡಿ ಎನ್ನದೆ ಎಲ್ಲೆಂದರಲ್ಲಿ

ಆವರಿಸಿ, ಎಲ್ಲದರ ಮೇಲೂ ಒಂದು ಪದರವನ್ನು ಮೂಡಿಸಿತ್ತು. ಸಂಜೆಯ ಮುಳುಗು ಸೂರ್ಯನ ಕಿರಣಗಳು ಧೂಳಿನಿಂದಾಗಿ ಹೊಂಬಣ್ಣವನ್ನು ಹೊರಸೂಸುತ್ತಿದ್ದವು. ಅವನು ಮರಗಿಡಗಳ ಎಲೆಗಳ ಲಾಸ್ಯವನ್ನೂ ಸೂರ್ಯನ ಹೊಂಬಣ್ಣವನ್ನು ನೋಡಲು ಆರಂಭಿಸಿದ.

ಬೆಂಗಳೂರಿನ ಕಡೆಯಿಂದ ವೇಗವಾಗಿ ಬಂದ ಕಡುನೀಲಿ ಬಣ್ಣದ ಟಾಟಾ ಸುಮೊ ಅವನಿಂದ ಹತ್ತು ಅಡಿ ಮುಂದಕ್ಕೆ ಹೋಗಿ ನಿಂತಿತು. ಬಸ್ಸಿನ ನಿರೀಕ್ಷೆಯಲ್ಲಿದ್ದ ಅವನು ಟಾಟಾ ಸುಮೊವನ್ನು ಗಮನಿಸಲಿಲ್ಲ. ಅವನ ಗಮನವೆಲ್ಲ ಬೆಂಗಳೂರಿನ ಕಡೆಯಿಂದ ಬರುವ ಬಸ್ಸಿನ ಕಡೆಯೇ.

"ಹಲೋ ಭೂಮಿಗೌಡ, ಯಾಕೆ ಇಲ್ಲಿ ನಿಂತಿದ್ದೀರಾ ? ಮೈಸೂರಿಗಾ?" ಎಂದು ತನ್ನ ಭುಜಮುಟ್ಟಿ ಮಾತನಾಡಿಸಿದ ವ್ಯಕ್ತಿಯನ್ನು ಆಶ್ಚರ್ಯದಿಂದ ನೋಡಿದ.

## ಅಧ್ಯಾಯ : ಎರಡು

ಭೂಮಿಗೌಡ ಮತ್ತೊಮ್ಮೆ ತನ್ನ ಭುಜ ಮುಟ್ಟಿ ಮಾತನಾಡಿಸಿದ ವ್ಯಕ್ತಿಯನ್ನು ನೋಡಿದ. ಹೌದು, ಬಸಂತಕುಮಾರ್ ಆಲಿಯಾಸ್ ಬೂಸೇಗೌಡ. ಎಷ್ಟು ವರ್ಷಗಳಾಗಿತ್ತು, ಈತನನ್ನು ನೋಡಿ. ಹತ್ತು ವರ್ಷಗಳ ಮೇಲಾಗಿರಬಹುದು. ಒಂದು ಕಾಲದ ಒಡನಾಡಿ. ಎದೆಯಲ್ಲಿ ಬರೀ ಆದರ್ಶ ತುಂಬಿಸಿಕೊಂಡು ಓಡಾಡುತ್ತಿದ್ದ ಬಿಸಿ ರಕ್ತದ ತರುಣ. ಸದಾ ಒಂದು ಬಿಳಿ ಶರ್ಟು, ಅದರ ಕೆಳಗೊಂದು ಕಡುವರ್ಣದ ಪ್ಯಾಂಟು. ಅದು ಅವನಿಗೆ ಇಷ್ಟವಾದ ಧಿರಿಸು. ಬಡತನ ತುಂಬಿದ ಕುಟುಂಬ ಅವನಿಗೆ ನೀಡುತ್ತಿದ್ದುದು ಬರೀ ಬಡತನದ ಭರವಸೆಗಳನ್ನು ಮಾತ್ರ. ಮೈಸೂರಿನಲ್ಲಿ ಆತ ಎಂ. ಎ. ಮಾಡುತ್ತಿದ್ದಾಗ ತನಗೆ ಹತ್ತಿರವಾದವನು. 'ಭೂಮಿಗೌಡ್ರೆ, ನೀವು ನಮ್ಮ ಆದರ್ಶ' ಎಂದು ಸ್ವಲ್ಪ ಹೊಗಳಿ ಅವನಲ್ಲಿದ್ದ ಪುಸ್ತಕಗಳನ್ನೆಲ್ಲ ಪಡೆದು ಓದುತ್ತಿದ್ದ. ಓದುವುದರಲ್ಲಿ, ಕಷ್ಟ ಪಡುವುದರಲ್ಲಿ ಎತ್ತಿದ ಕೈ. ದೈಹಿಕ ಶ್ರಮ ಎಷ್ಟೇ ಕಠಿಣವಾದರೂ ಮಾಡಲು ಹಿಂದೆ ಬಿದ್ದವನಲ್ಲ. ಪ್ರೆಸ್ಸುಗಳಲ್ಲಿ ಮೊಳೆ ಜೋಡಿಸುವ ಅರೆಕಾಲಿಕ ಕೆಲಸ ಮಾಡಿ, ಅದರ ಮಾಲೀಕನ ಮನವೊಲಿಸಿ ರಾತ್ರಿ ಅಲ್ಲೇ ವಾಸ್ತವ್ಯಮಾಡಿ ಎರಡು ವರ್ಷದ ಎಂ.ಎ ಮುಗಿಸಿದ್ದ.

ಅವನಿಗೆ ಆದರ್ಶದ ಕನಸುಗಳಿದ್ದವು. ಬಡತನ ನಿರ್ಮೂಲನೆಯಾಗಬೇಕು. ಸಮಾನತೆ ಬರಬೇಕು, ಸಾಮಾಜಿಕ ನ್ಯಾಯ ದೊರೆಯಬೇಕು, ಅಧಿಕಾರ ಮತ್ತು ಹಣದ ವಿಕೇಂದ್ರಿಕರಣವಾಗಬೇಕು. ಹೀಗೆ ಹೀಗೆ ಅವನ ವಾದ ಸರಣಿ ಬೆಳೆಯುತ್ತಿತ್ತು. "ನೋಡಿ ಗೌಡ್ರೆ, ನಿಮ್ಮ ಹಾಗೆ ಕಾಲೇಜಲ್ಲಿ ಪಾಠ ಮಾಡುವ ಮೇಷ್ಟ್ರಾದ್ರೆ ಏನೂ ಆಗೋಲ್ಲ. ಜನರಿಗೆ ಅನುಕೂಲ ಮಾಡಲು ಸಾಧ್ಯವಾಗುವ ಹುದ್ದೆಗೆ ಹೋಗಬೇಕು. ಅಧಿಕಾರಬೇಕು. ಅಧಿಕಾರದಿಂದ ಮಾತ್ರ ಸಮಾಜಕ್ಕೆ ಏನನ್ನಾದರೂ ಮಾಡಲು ಸಾಧ್ಯ, ನಿಮ್ಮನ್ನೇ ನೋಡಿ, ಐದು ವರ್ಷದಿಂದ ಯುವಕರಿಗೆ ಪಾಠ ಮಾಡುತ್ತಿದ್ದೀರಿ, ಅಷ್ಟೇ. ಅವರಿಗೆ ಆದರ್ಶ ತುಂಬುತ್ತೀರಿ, ಕನಸು ಕಟ್ಟಿಸುತ್ತೀರಿ. ನಾನು ನಿಮ್ಮಂಥವರಿಂದಲೇ ಕನಸು ಕಟ್ಟಿದ್ದೇನೆ, ಆದರ್ಶ ಕಂಡಿದ್ದೇನೆ. ಆದರೆ ಅವು ನಿಮಗಿಂತ ಭಿನ್ನ. ಮೋರ್ ಪ್ರಾಕ್ಟಿಕಲ್. ಆದರ್ಶಗಳನ್ನು ಸಾಕಾರಗೊಳಿಸುವ ಕನಸು. ಅದಕ್ಕೆ ಅಧಿಕಾರ ಬೇಕು. ನಿಮ್ಮ ಹಾಗೆ ಮೇಷ್ಟ್ರಾದರೆ ಏನೂ ಆಗೋಲ್ಲ". ಭೂಮಿಗೌಡ ಅವನ ಮಾತುಗಳನ್ನು ಮೌನವಾಗೇ ಕೇಳುತ್ತಿದ್ದ. ಚರ್ಚೆ ಮಾಡಲು ಅವನಿಗೆ ಮನಸ್ಸಾಗುತ್ತಿರಲಿಲ್ಲ.

ಇದಾದ ಸ್ವಲ್ಪ ದಿನದಲ್ಲಿ ಬೂಸೇಗೌಡ ಮೈಸೂರಿನ ಸ್ಥಳೀಯ ದಿನ ಪತ್ರಿಕೆಯೊಂದನ್ನು ಕೈಯಲ್ಲಿಡಿದು ಬಂದ. "ಗೌಡ್ರೆ, ಮೊನ್ನೆ ನಾನು ನನ್ನ ಹೆಸರನ್ನು ಬದಲಾಯಿಸಿಕೊಂಡೆ, ನ್ಯಾಯಾಲಯದಲ್ಲಿ . ಅದು ಇಂದಿನ ಪತ್ರಿಕೆಯಲ್ಲಿ ಬಂದಿದೆ. ನೋಡಿ" ಎಂದು ಪತ್ರಿಕೆ ಕೈಗಿತ್ತನು. ಪತ್ರಿಕೆಯ ಹಿಂಬದಿ ಪುಟದಲ್ಲಿ ಕೆಂಪುಶಾಹಿಯಿಂದ ಗುರುತು ಹಾಕಿದ್ದ ಒಂದು ಕಾಲಂxಆರು

ಎಂ. ಎಂ. ನ ಜಾಹಿರಾತು! ' ಬೂಸೇಗೌಡನಾದ ನಾನು ನನ್ನ ಸ್ವಂತ ಇಚ್ಛೆಯಿಂದ ಮೈಸೂರು ನಗರ ಜಿಲ್ಲಾ ನ್ಯಾಯದೀಶರ ಮುಂದೆ ಬಸಂತ್‌ಕುಮಾರ್ ಎಂದು ಹೆಸರು ಬದಲಾಯಿಸಿಕೊಂಡಿದ್ದೇನೆ. ಇನ್ನು ಮುಂದೆ ನಾನು ಬಸಂತ್‌ಕುಮಾರ್ ಎಂಬ ಹೆಸರಿನ ಮೂಲಕ ವ್ಯವಹರಿಸುತ್ತೇನೆಂದು ಸ್ಪಷ್ಟಪಡಿಸುತ್ತೇನೆ'.

ಭೂಮಿಗೌಡ ತಲೆ ಎತ್ತಿ ಬೂಸೇಗೌಡನನ್ನು ಒಮ್ಮೆ ನೋಡಿದ. ಈಗ ಇವನನ್ನು ಏನೆಂದು ಕರೆಯುವುದು? ಬೂಸೇಗೌಡನೆಂದೇ? ಬಸಂತ ಕುಮಾರನೆಂದೇ ? "ಏಕೆ ಹೆಸರು ಬದಲಿಸಿ ಕೊಂಡಿರಿ" ಎಂದು ಕೇಳಿದ.

"ಬಡ್ಡಿ ಮಕ್ಕಳು, ಎಲ್ಲರೂ ಆಡಿಕೊಳ್ಳುತ್ತಿದ್ದರು 'ಬೂಸ ಬೂಸ' ಎಂದು . ಇನ್ ಕೆಲನನ್ಮಕ್ಕಳು 'ಬೂಸಿ ಬೂಸಿ' ಅಂತ ಕರೀತಿದ್ದರು. ಏನು, ನಾನು ಬೂಸಾನೆ ? ಅಥವಾ ಬೂಸೀನೇ ? ನನಗೂ ರೋಸೋಗಿತ್ತು. ಹೆಸರು ಚೇಂಜ್ ಮಾಡ್ಕೊಂಡ್ ಬುಟ್ಟೆ" ಎಂದು ಆವೇಶದಿಂದ ನುಡಿದ.

ಭೂಮಿಗೌಡ "ಇದು ನಿಮ್ಮ ಅಪ್ಪ ಅಮ್ಮ ಇಟ್ಟ ಹೆಸರು. ಅದರಲ್ಲೇನೋ ವಿಶೇಷ ಇರುತ್ತೆ. ಸ್ಥಳೀಯತೆಯನ್ನು, ಸಂಸ್ಕೃತಿಯನ್ನು ಅಭಿವ್ಯಕ್ತಿಸುತ್ತಿರುತ್ತೆ. ನೀವು ಅದನ್ನೆಲ್ಲಾ ಚಿಂತೆ ಮಾಡಬೇಕಿತ್ತು. ಯಾರೋ ಏನೋ ಅಂತಾರೆ ಏಂತ ನೀವು ಹೆಸರನ್ನು ಬೇರೆ ಇಟ್ಟುಕೊಳ್ಳಬಾರದಿತ್ತು. ಇಂದೊಂಥರಾ ಕೀಳರಿಮೆಯ ಕಾಂಪ್ಲೆಕ್ಸ್ ಅಲ್ಲವೆ? ಈ ಕಾಂಪ್ಲೆಕ್ಸ್‌ನಿಂದ ನರಳುವಷ್ಟು ನೀವು ದುರ್ಬಲರೆ ? ನನಗೇನೋ ನಿಮ್ಮ ಈ ನಡೆ ಇಷ್ಟವಾಗಲಿಲ್ಲ" ಎಂದು ಸ್ಪಷ್ಟವಾಗಿ ಹೇಳಿದ.

ಭೂಮಿಗೌಡನ ಮಾತಿಗೆ ಒಂದು ಹಿನ್ನೆಲೆಯಿತ್ತು. ದೇಶಕ್ಕೆ ಸ್ವಾತಂತ್ರ್ಯ ಬಂದ ನಂತರ ಹಳ್ಳಿಗಾಡಿನಿಂದ ನಗರಗಳಿಗೆ ಶಿಕ್ಷಣ ಕಲಿಯಲು ಬಂದ ತರುಣರು ಈ ಬಗೆಯ ಕಾಂಪ್ಲೆಕ್ಸ್‌ನಿಂದ ನರಳುತ್ತಿದ್ದರು. 'ಸ'ಕಾರ 'ಶ'ಕಾರ ಸರಿಯಾಗಿ ಉಚ್ಚಾರ ಮಾಡಲು ಬರುವುದಿಲ್ಲ, ಸರಿಯಾಗಿ ಡ್ರೆಸ್ ಮಾಡಲು ಬರುವುದಿಲ್ಲ. ಇಂಗ್ಲಿಷ್ ಬರುವುದಿಲ್ಲ-ಮುಂತಾದ ಮೇಲ್ಜಾತಿಯವರ ಬೆನ್ನ ಹಿಂದಿನ ಟೀಕೆಗಳಿಂದ ಅವರು ಬಹಳ ನೊಂದುಕೊಳ್ಳುತ್ತಿದ್ದರು. ತಮ್ಮ ಮನೆದೇವರ, ಊರ ದೇವರ ಅಥವಾ ಹಿರೀಕರ ಹೆಸರುಗಳನ್ನು ಇಟ್ಟುಕೊಂಡಿದ್ದ ಅವರು, ಬ್ರಾಹ್ಮಣರ ಹೆಸರುಗಳನ್ನು ಕೇಳಿ 'ಒಂದು ಹೆಸರನ್ನು ಇಡಲು ಬಾರದ ಗುಗ್ಗುಗಳು' ಎಂದು ಅಪ್ಪ ಅಮ್ಮಂದಿರನ್ನು ಮನಸ್ಸಿನಲ್ಲೇ ಬಯ್ದುಕೊಳ್ಳುತ್ತಿದ್ದರು.

ಅಂಥ ಸಮಯದಲ್ಲೇ ಅನೇಕ ಒಕ್ಕಲಿಗ, ಲಿಂಗಾಯ್ತ. ಕುರುಬ, ದಲಿತ ಮುಂತಾದ ರೈತಾಪಿ ಸಮುದಾಯದ ಅಕ್ಷರ ಕಲಿತ ಯುವಕರು ತಮ್ಮ ಹೆಸರನ್ನು ಸಂಸ್ಕೃತೀಕರಣಗೊಳಿಸಿಕೊಂಡರು. ಸುಂದರವಾದ ಸಂಸ್ಕೃತ ನಾಮಪದಗಳನ್ನು ಧರಿಸಿ ಬ್ರಾಹ್ಮಣರಿಗೆ ಈಗ ನಾವು ಸಮಾನರಾದವೆಂದು ಬೀಗಿದರು.

ಕಾಲಬದಲಾಯಿತು. ಹಳ್ಳಿಗಾಡಿನ ಯುವಕರು ಅಕ್ಷರ ಕಲಿತಂತೆಲ್ಲಾ ಅರಿವು ವಿಕಾಸವಾಗತೊಡಗಿತು. ಅವರ ಮೇಲೆ ಹೊಸ ಹೊಸ ವಿಚಾರಧಾರೆಗಳು, ಚಳವಳಿಗಳು

ಪ್ರಭಾವ ಮಾಡತೊಡಗಿದವು. 'ನಮ್ಮ ಅಪ್ಪ ಅಮ್ಮ ಇಟ್ಟ ಹೆಸರು ನಮ್ಮ ಸ್ವಂತಿಕೆಯ ಸಂಕೇತ, ನಮ್ಮ ಸ್ವಾಭಿಮಾನದ ಸಂಕೇತ. ಅದರಲ್ಲಿ ನನ್ನ ಮಣ್ಣಿನ, ಮನೆತನದ ವಾಸನೆ ಇದೆ. ಅದು ನನ್ನದೇ ಆದ ಸ್ವಂತದ್ದು. ಕೀಳರಿಮೆ ಬೇಕಿಲ್ಲ. ನನ್ನ ಸ್ಥಳೀಯ ಸಂಸ್ಕೃತಿಯು ಕೂಡ ನಗರ ಸಂಸ್ಕೃತಿಯಷ್ಟು ಗಟ್ಟಿಯಾದುದು' ಎಂಬ ವಿಚಾರ ಲಹರಿ ಯುವಕರಲ್ಲಿ ಗಟ್ಟಿಯಾಗ ತೊಡಗಿತು. ಅದರಿಂದಾಗಿ ಅಪ್ಪ ಅಮ್ಮ ಇಟ್ಟ ಹೆಸರನ್ನು ಬದಲಾಯಿಸಿಕೊಳ್ಳುವ ಪರಿಪಾಠ ಕಡಿಮೆಯಾಗತೊಡಗಿತ್ತು. ಆದರೂ ಅಲ್ಲೊಂದು ಇಲ್ಲೊಂದು ಹೆಸರು ಬದಲಾಯಿಸಿಕೊಳ್ಳುವ ಪ್ರಕ್ರಿಯೆ ನಡೆಯುತ್ತಲೆ ಇತ್ತು. ಜೊತೆಗೆ ಅಕ್ಷರ ಕಲಿತ ಅಪ್ಪ ಅಮ್ಮಂದಿರು ತಮಗೆ ಹುಟ್ಟಿದ ಮಕ್ಕಳಿಗೆ ಹೆಸರು ಇಡುವಾಗಲೇ ಆಧುನಿಕವಾದ ಹೆಸರುಗಳನ್ನಿಡುತ್ತಿದ್ದರು.

ತಾನು ಹೆಸರು ಬದಲಿಸಿಕೊಂಡಿದ್ದು ಭೂಮಿಗೌಡನಿಗೆ ಇಷ್ಟವಾಗಲಿಲ್ಲವೆಂಬುದು ಬೂಸೇಗೌಡನಿಗೆ ನಿರಾಶೆ ತಂದಿತ್ತು. ಅಂದಿನಿಂದ ಅವರಿಬ್ಬರ ನಡುವೆ ಒಂದು ಹೇಳಲಾಗದ ತೆರೆಯೊಂದು ಮೂಡಿ ಹೋಗಿತ್ತು. ಬೂಸೇಗೌಡ ಕಷ್ಟಪಡುವುದರಲ್ಲಿ ನಿಸ್ಸೀಮ, ಓದುವುದರಲ್ಲೂ ಅಷ್ಟೇ. ಸ್ಪರ್ಧಾತ್ಮಕ ಪರೀಕ್ಷೆ ತೆಗೆದುಕೊಂಡು ಅವನಾಸೆಯಂತೆ ಕೆ. ಎ. ಎಸ್. ಪಾಸು ಮಾಡಿಯೇ ಬಿಟ್ಟ! ತಹಸೀಲ್ದಾರ್ ಆಗಿ ನೇಮಕಗೊಂಡು ರಾಯಚೂರಿನ ಮಾನ್ವಿ ತಾಲ್ಲೂಕಿಗೆ ಹೋಗಿಯೇ ಬಿಟ್ಟ. ರಾಯಚೂರಿನ ಒಂದೆರಡು ತಾಲ್ಲೂಕುಗಳಲ್ಲಿ ಸೇವೆ ಸಲ್ಲಿಸಿದ ನಂತರ, ಅವನು ತನ್ನ ಸ್ವಂತ ತಾಲ್ಲೂಕಿಗೆ ತಹಸೀಲ್ದಾರನಾಗಿ ವರ್ಗಮಾಡಿಸಿಕೊಂಡು ಬಂದಿದ್ದ.

ಬೂಸೇಗೌಡ ಬೆಂಗಳೂರಿಗೆ ಕಾರ್ಯಾರ್ಥ ಹೋಗಿದ್ದ. ಕಾರ್ಯ ಮುಗಿದ ನಂತರ ತನ್ನ ಸ್ನೇಹಿತರೊಂದಿಗೆ ವಾಪಸ್ಸು ರಾಮನಗರಕ್ಕೆ ಬಂದಿದ್ದ. ಬೆಂಗಳೂರಿಗೆ ಹೋಗುವುದು ಯಾವಾಗಲೂ ತನ್ನ ಸ್ವಂತ ಕಾರಿನಲ್ಲೇ. ಆದರೆ ಆ ಬಾರಿ ಸ್ನೇಹಿತರೇ ಬಂದು ಮುಖ್ಯ ಕೆಲಸವೊಂದಕ್ಕೆ ಕರೆದದ್ದರಿಂದ ಅವರ ಸುಮೊದಲ್ಲಿ ಹೋಗಿದ್ದ. ಅದೇ ಸುಮೊದಲ್ಲಿ ವಾಪಸ್ಸು ಮರಳುತ್ತಿದ್ದಾಗ ಅವನ ಕಣ್ಣಿಗೆ ಮುಸ್ಸಂಜೆಯಲ್ಲಿ ಬಸ್ಸಿಗಾಗಿ ಕಾದು ನಿಂತಿದ್ದ ಭೂಮಿಗೌಡ ಬಿದ್ದಿದ್ದ.

ಇಂಥ ಸಮಯದಲ್ಲೇ ಮತ್ತೆ ಧುತ್ತೆಂದು ಇವನನ್ನು ಯಾವ ಹೆಸರಿನಿಂದ ಕರೆಯುವುದು ಎಂಬ ಪ್ರಶ್ನೆ ಎದುರಾಯಿತು. ಬೂಸೇಗೌಡನನ್ನು ನೋಡಿ ಅವನಿಗೆ ನಿಜಕ್ಕೂ ಸಂತೋಷವಾಯಿತು. ಒಂದು ಕಾಲದ ಒಡನಾಡಿ. ಅವನ ಕನಸಿನಂತೆ ಅಧಿಕಾರಿಯಾಗಿದ್ದಾನೆ. ಅವನ ಕನಸುಗಳನ್ನು ಸಾಕಾರಗೊಳಿಸಲು ಈಗ ಸಾಧ್ಯವಾಗಿದೆ.

"ಹೇಗಿದ್ದೀರಾ ಬೂಸೇಗೌಡ, ಏಷ್ಟು ದಿನ ಆಯ್ತು ನಿಮ್ಮನ್ನು ನೋಡಿ. ನೀವು ರಾಮನಗರಕ್ಕೆ ಬಂದದ್ದು ಗೊತ್ತಾಯ್ತು. ನಮ್ಮಣ್ಣ ಹೇಳಿದ್ದರು."

"ಚೆನ್ನಾಗಿದ್ದೀನಿ ಗೌಡ್ರೆ, ಹೇಗಿದ್ದೀರಾ ? ಮದುವೇ ಆಗಿಲ್ಲವಂತೆ ಏಕೆ ? ನಿಮ್ಮ ವಯಸ್ಸು ಚಿಕ್ಕದಾಗುತ್ತಿದೆಯೇ ? ನನ್ನೇ ನೋಡಿ ಮದುವೆಯಾಗಿದ್ದೀನಿ, ಎರಡು ಮಕ್ಕಳಿವೆ. ಈಗ ನಾನು ತುಂಬಾ ಸುಖವಾಗಿದ್ದೇನೆ" ಎಂದು ಭೂಮಿಗೌಡರನ್ನು ದಿಟ್ಟಿಸಿ "ಏನ್ರೀ ಹಾಗೇ

ಇದ್ದೀರಲ್ರಿ, ಹತ್ತುವರ್ಷದ ಹಿಂದೆ ನೋಡಿದ ಹಾಗೇನೆ ? ಗುಡ್ ಗುಡ್, ಬಾಡಿ ಚನ್ನಾಗಿ ಮೇಂಟೇನ್ ಮಾಡಿದ್ದೀರಿ" ಎಂದು ಮೆಚ್ಚುಗೆ ಸೂಚಿಸಿದ.

ಭೂಮಿಗೌಡ ಬೂಸೇಗೌಡನನ್ನು ಗಮನಿಸಿದ. ಎತ್ತರವಾದ ಆಳು. ಹತ್ತಿರ ಹತ್ತಿರ ಆರು ಅಡಿ. ಗೌರವ ವರ್ಣ. ನೆರಳಲ್ಲಿ, ಫ್ಯಾನಿನ ತಂಪಿನಲ್ಲಿ ಕೂತು ಅವನ ಚರ್ಮ ಅಸಹಜ ಮೃದುತ್ವವನ್ನು ಪಡೆದಿತ್ತು. ಮೊದಲಿಗಿಂತ ಬೆಳ್ಳಗೆಕಾಣುತ್ತಿದ್ದ. ಅವನ ದೇಹದಲ್ಲಿ ಅವನ ಹೊಟ್ಟೆ ಬಾನಿಯಾಕಾರದಲ್ಲಿ ಅಸಹಜವಾಗಿ ಎದ್ದು ಕಾಣುತ್ತಿತ್ತು.

ಬೂಸೇಗೌಡ ಅವನ ಹೆಗಲ ಮೇಲೆ ಕೈಯಿಟ್ಟು "ನಿಮ್ಮನ್ನು ನೋಡಿ ತುಂಬಾ ಸಂತೋಷವಾಯಿತು. ಬನ್ನಿ ಸುಮೊದಲ್ಲಿ ನನ್ನ ಸ್ನೇಹಿತರಿದ್ದಾರೆ. ಅವರನ್ನು ಪರಿಚಯಿಸುತ್ತೇನೆ"- ಎಂದನು.

ಭೂಮಿಗೌಡ ಸಂಕೋಚದಿಂದ "ಬೇಡ ಗೌಡ್ರೆ,ನನಗೆ ಅದೆಲ್ಲಾ ಯಾಕೆ ? ನಾನು ಮೈಸೂರಿನ ಬಸ್ಸಿಗಾಗಿ ಕಾದಿದ್ದೇನೆ. ಈಗ ನಿಮ್ಮನ್ನು ಕಂಡೆನಲ್ಲಾ ಸಂತೋಷವಾಯಿತು. ಇನ್ನೊಮ್ಮೆ ರಾಮನಗರಕ್ಕೆ ಬಂದಾಗ ನಿಮ್ಮನ್ನು ಭೇಟಿಯಾಗುತ್ತೇನೆ. ನೀವು ಮೈಸೂರಿಗೆ ಬಂದಾಗ ಮರೆಯದೆ ನಮ್ಮ ಮನೆಗೆ ಬನ್ನಿ" ಎಂದು ತನ್ನ ಜೇಬಿನಿಂದ ಪರ್ಸು ತೆಗೆದು ತನ್ನ ವಿಳಾಸದ ಕಾರ್ಡನ್ನು ಬೂಸೇಗೌಡನಿಗೆ ನೀಡಿ "ನನ್ನ ಮನೆ ವಿಳಾಸ, ದೂರವಾಣಿ ಸಂಖ್ಯೆಗಳೆಲ್ಲವೂ ಇವೆ" ಎಂದನು.

ವಿಸಿಟಿಂಗ್ ಕಾರ್ಡನ್ನು ದಿಟ್ಟಿಸಿ ನೋಡಿ "ನೀವು ಮಾತ್ರ ಮೇಷ್ಟ್ರಾಗಿಯೇ ಉಳಿದು ಬುಟ್ರಿ. ಬುಡಿ, ಅದು ನಿಮ್ಮ ಆಸಕ್ತಿ, ಕನಸು. ಅದಿರಲಿ. ಆ ಬಗ್ಗೆ ನಿಮ್ಮೊಡನೆ ಸಾಕಷ್ಟು ಮಾತನಾಡುವುದಿದೆ. ಈಗ ನೀವು ಮೈಸೂರಿಗೆ ಹೋಗಬೇಕು ತಾನೆ ? ಬನ್ನಿ, ನಮ್ಮ ಸ್ನೇಹಿತರು ಮೈಸೂರಿಗೆ ಹೋಗುತ್ತಿದ್ದಾರೆ. ಅವರ ಸುಮೊ ಸಾಕಷ್ಟು ಖಾಲಿ ಇದೆ. ಅದರಲ್ಲೇ ನೀವು ಹೋಗಬಹುದು. ನಾನು ನಿಮ್ಮನ್ನು ಅವರಿಗೆ ಪರಿಚಯಿಸಿ, ಮನೆಗೆ ಹೋಗುತ್ತೇನೆ" ಎಂದನು.

"ಬೇಡ ಗೌಡ್ರೆ, ಅವರಿಗೇಕೆ ತೊಂದರೆ. ಬಸ್ಸು ಬರುತ್ತದೆ. ಹೋಗುತ್ತೇನೆ" ಎಂದನು ಮತ್ತಷ್ಟು ಸಂಕೋಚದಿಂದ.

"ಬನ್ನಿ ಅಂದ್ರೆ ಬರಬೇಕು. ಅವರೇನು ನಿಮ್ಮನ್ನು ತಲೆಯ ಮೇಲೆ ಹೊತ್ತುಕೊಂಡು ಹೋಗಬೇಕೆ ?" ಎಂದು ಭೂಮಿಗೌಡನ ಕೈಹಿಡಿದು ಎಳೆದುಕೊಂಡು ಸುಮೋದ ಕಡೆ ನಡೆದ. ನಾಲ್ಕು ಹೆಜ್ಜೆ ನಡೆದವನೆ ಗಕ್ಕನೆ ನಿಂತು "ಗೌಡ್ರೆ ಒಂದ್ವಿಷಯ, ನೀವು ನನ್ನ ಸ್ನೇಹಿತರ ಎದುರಿಗೆ ನನ್ನ ಹಳೇ ಹೆಸರಿನಿಂದ ಕರೆಯ ಬೇಡಿ. ಅವರ್ಯಾರಿಗೂ ನನ್ನ ಹಳೇ ಹೆಸರುಗೊತ್ತಿಲ್ಲ. ನನ್ನ ಹೊಸ ಹೆಸರಿಂದಲೇ ಕರೆಯಬೇಕು" ಎಂದ. ಅವನ ಕಣ್ಣಿನಲ್ಲಿ ಬೇಡಿಕೆಯಿತ್ತು. ಈಗ ಅವನ ಹುಟ್ಟು ಹೆಸರು ಅವನ ಮಾನ ತೆಗೆಯುವ ವಸ್ತುವಾಗುವ ಹಂತಕ್ಕೆ ಮುಟ್ಟಿತು.

ಭೂಮಿಗೌಡ ಆಗಲಿ ಎಂಬಂತೆ ತಲೆಯಾಡಿಸಿದ. ಇಬ್ಬರೂ ಸುಮೊ ಬಳಿ ಬಂದರು. ಬೂಸೇಗೌಡ "ಮಿ. ರೆಡ್ಡಿ, ಇವರನ್ನು ಭೇಟಿಯಾಗಿ. ಡಾ. ಭೂಮಿಗೌಡ ಅಂತ. ಕಾಲೇಜಿನಲ್ಲಿ ಪ್ರೊಫೆಸರ್. ನನ್ನ ಆತ್ಮೀಯರು. ನನ್ನ ಬದುಕಿನಲ್ಲಿ ತುಂಬಾ ಸಹಾಯಮಾಡಿದ್ದಾರೆ. ನನಗೆ ನೇರವಾಗಿ ಗುರುಗಳಲ್ಲದಿದ್ದರೂ ಗುರುಸಮಾನರು. ಇವರು ಮೈಸೂರಿಗೆ ಹೋಗಬೇಕು. ಇವರನ್ನು

ನೀವು ಕರೆದುಕೊಂಡು ಹೋಗಿ. ಇವರನ್ನು ನೇರವಾಗಿ ಮನೆಗೇ ತಲುಪಿಸಬೇಕು, ಆಯ್ತಾ" ಎಂದನು. ಒಂದು ಬಗೆಯ ಆದೇಶದ ಧ್ವನಿಯಿತ್ತು. ನನ್ನ ಜೊತೆ ಮಾತನಾಡುತ್ತಿದ್ದ ಬೂಸೇಗೌಡನ ಧ್ವನಿ, ಆಂಗಿಕ ಭಾಷೆ ಬದಲಾಗಿದ್ದವು. ಭೂಮಿಗೌಡ ಅಚ್ಚರಿಗೊಂಡ. ಈ ಬೂಸೇಗೌಡ, ಇಲ್ಲ ಇಲ್ಲ, ಈ ಬಸಂತ್‌ಕುಮಾರ್ ಈಗ ನಿಜಕ್ಕೂ ಅಧಿಕಾರಿಯಾಗಿದ್ದಾನೆ !

ರೆಡ್ಡಿ ಡ್ರೈವಿಂಗ್ ಸೀಟಿನಿಂದ ಇಳಿದು ಇವರ ಬಳಿ ಬಂದ. ಭೂಮಿಗೌಡನ ಕೈ ಕುಲುಕಿದ. ಅದರಲ್ಲಿ ಒಂದು ದೃಢತೆಯಿತ್ತು. ಅವನ ಕಣ್ಣುಗಳು ಮಿಂಚುತ್ತಿದ್ದವು. ಶ್ರೀಮಂತಿಕೆ ಅವನ ಅಂಗಾಂಗಗಳಲ್ಲಿ ಎದ್ದು ಕಾಣುತ್ತಿತ್ತು. ಬೆಲೆಬಾಳುವ ಬಟ್ಟೆ. ಇನ್ ಷರ್ಟ್ ಮಾಡಿದ್ದ. ಎಡಕಿವಿಯಲ್ಲಿ ಚಿನ್ನದ ರಿಂಗು. ಕುತ್ತಿಗೆಯಲ್ಲಿ ಕಿರುಬೆರಳು ಗಾತ್ರದ ಚಿನ್ನದ ಸರ. ಬಲಕೈನ ಮಣಿಕಟ್ಟಿನಲ್ಲಿ ಚಿನ್ನದ ಜೋತಾಡುವ ಕಪ್ಪ. ಎಡಕೈಯಲ್ಲಿ ಚಿನ್ನದ ಚೈನಿನ ವಾಚು. ಎರಡೂ ಕೈಗೆ ಎರಡೆರಡು ಬೆರಳಲ್ಲಿ ದಪ್ಪ ದಪ್ಪ ಉಂಗುರಗಳು. ಮಾತನಾಡುವಾಗ ಎಡಗೈ ಬೆರಳುಗಳು ಬಲಗೈ ಬೆರಳಿನ ಉಂಗುರಗಳನ್ನು ತಿರುಗಿಸುವ ಅಭ್ಯಾಸ. ಆ ದಪ್ಪ ಉಂಗುರಗಳೇ ಇರಬೇಕು ಕೈ ಕುಲುಕಿದಾಗ ನನ್ನ ಬೆರಳುಗಳನ್ನು ಒತ್ತರಿಸಿದ್ದು ಎಂದು ಭೂಮಿಗೌಡ ಅಂದುಕೊಂಡ.

ಅವನು ಬೂಸೇಗೌಡನ ಕೈ ಹಿಡಿದು "ಏನ್ಸಾರ್, ನಿಮ್ಮವರು ಅಂತ ಹೇಳ್ತಿದ್ದಿರಿ. ಮುಗೀತು ಬುಡಿ. ಅವರು ಇನ್ನು ನಮ್ಮವರಾದ ಹಾಗೆಯೇ. ಅವರನ್ನು ಜೋಪಾನವಾಗಿ ಮನೆಗೆ ಮುಟ್ಟಿಸುವ ಜವಾಬ್ದಾರಿ ನನ್ನದು" ಎಂದ.

ಬೂಸೇಗೌಡ ಸುಮೊದ ಕಿಟಕಿಯಲ್ಲಿ ಬಗ್ಗಿ ಒಳಗಿದ್ದವರಿಗೆ "ಮತ್ತೆ ಸಿಗುತ್ತೇನೆ, ನಮ್ಮ ಸ್ನೇಹಿತರು ಮೈಸೂರಿಗೆ ಬರುತ್ತಾರೆ. ಅವರನ್ನು ಚೆನ್ನಾಗಿ ನೋಡಿ ಕೊಳ್ಳಿ. ರೆಡ್ಡಿ ಅವರನ್ನು ನಿಮಗೆ ಪರಿಚಯಿಸುತ್ತಾರೆ" ಎಂದು ಹೇಳಿ "ಗೌಡ್ರೆ, ನಾನು ಹೊರಡುತ್ತೇನೆ. ನನ್ನ ಡ್ರೈವರ್ ಜೀಪುತಂದು ಅಲ್ಲಿ ಕಾಯ್ತಿದ್ದಾನೆ. ಏಳುಗಂಟೆಗೆ ಶಾಸಕರು ಮೀಟಿಂಗ್ ಕರೆದಿದ್ದಾರೆ. ಅಲ್ಲಿಗೆ ಬೇರೆ ಹೋಗ್ಬೇಕು. ನಾನು ನಿಮಗೆ ಫೋನ್ ಮಾಡುತ್ತೇನೆ" ಎಂದು ಹೇಳಿ ಮತ್ತೊಮ್ಮೆ ಕೈ ಕುಲುಕಿ ಸರಸರನೆ ಜನರ ನಡುವೆ ನಡೆದು ಹೋದ.

ಭೂಮಿಗೌಡನಿಗೆ ರೆಡ್ಡಿ ಸುಮೊದ ಹಿಂದಿನ ಬಾಗಿಲನ್ನು ತೆರೆದು "ಬನ್ನಿ ಸಾರ್" ಎಂದ. ಭೂಮಿಗೌಡ ಸುಮೊದ ಒಳಗೆ ಕಾಲಿಟ್ಟು, ಸೀಟಿನ ಮೇಲೆ ಕೂತು ನಿಡಿದಾಗಿ ಉಸಿರುಬಿಟ್ಟ.

## ಅಧ್ಯಾಯ : ಮೂರು

ಸುಮೊ ಒಳಗೆ ಕೂತ ಗೌಡನಿಗೆ ಅದರ ಎಸಿ ತಂಪನ್ನೆರಚಿತು. ಸುಮಾರು ಒಂದೂವರೆ ಗಂಟೆಗೂ ಹೆಚ್ಚುಕಾಲ ಧೂಳು ಮತ್ತು ಬಿಸಿಲಿನ ಬೇಗೆಯಲ್ಲಿ ಅವನು ಬೆಂದಿದ್ದ. ತುಂಬಾ ಶ್ರೀಮಂತವಾಗಿದ್ದ ಸುಮೊವಿನ ತಂಪಾದ ಅನುಭವದಿಂದ ಅವನಿಗೆ ಹಾಯೆನಿಸಿತು. ಅವನು ಸುಮೊ ಒಳಗೆ ಕೂತಿರುವ ಇತರ ಪ್ರಯಾಣಿಕರನ್ನು ಗಮನಿಸಿದ. ಮುಂದಿನ ಸೀಟಿನಲ್ಲಿ ಒಬ್ಬ ದಢೂತಿ ಆಸಾಮಿ; ಮಧ್ಯದ ಸೀಟಿಮಲ್ಲಿ ಸರಿಸುಮಾರು ತನ್ನ ವಯಸ್ಸಿನ ವ್ಯಕ್ತಿ, ಆ ವ್ಯಕ್ತಿ ಮಗ್ಗುಲಲ್ಲಿ ಒಬ್ಬಳು ಹೆಂಗಸು. ಹಿಂದೆ ಕುಳಿತ್ತಿದ್ದ ಅವನಿಗೆ ಅವರ ಮುಖಗಳಾಗಲಿ, ಸ್ಪಷ್ಟವಾದ ಆಕಾರವಾಗಲಿ ಕಾಣುತ್ತಿರಲಿಲ್ಲ. ಅವರ ಕುತ್ತಿಗೆಯ ಮೇಲ್ಭಾಗ ಮಾತ್ರ ಗೋಚರಿಸುತ್ತಿತ್ತು.

ರೆಡ್ಡಿ ಹಿಂದಿನ ಬಾಗಿಲನ್ನು ಹಾಕಿದವನೆ, ಡ್ರೈವರ್ ಸೀಟಿನಲ್ಲಿ ಬಂದು ಕುಳಿತ. ತನ್ನ ಕತ್ತನ್ನು ಹಿಂದಕ್ಕೆ ತಿರುಗಿಸಿ "ಫ್ರೆಂಡ್ಸ್, ನಮ್ಮ ಹೊಸ ಸಹ ಪ್ರಯಾಣಿಕರನ್ನು ತಮಗೆ ಪರಿಚಯ ಮಾಡಿಸುತ್ತೇನೆ. ಇವರು ಡಾ. ಭೂಮಿಗೌಡ. ನಮ್ಮ ಮಿತ್ರರಾದ ಬಸಂತ ಕುಮಾರ್ ಅವರಿಗೆ ತುಂಬಾ ಬೇಕಾದವರು. ಇವರು ಮೈಸೂರಿನ ಕಾಲೇಜೊಂದರಲ್ಲಿ ಪ್ರಾಧ್ಯಾಪಕರು. ಇವರನ್ನು ಇವರ ಮನೆಗೆ ಮುಟ್ಟಿಸುವ ಜವಾಬ್ದಾರಿ ನಮ್ಮದು. ಅಲ್ಲಿಯವರೆಗೆ ಇವರು ನಮ್ಮ ಅತಿಥಿ" ಎಂದು ಹೇಳಿ, ತನ್ನ ಪಕ್ಕದ ಸೀಟಿನಲ್ಲಿ ಕುಳಿತ ದಢೂತಿ ಆಸಾಮಿಯನ್ನು ತೋರಿಸಿ "ಇವರು ನನ್ನ ಸನ್ಮಿತ್ರ ಮಹೇಶ್‌ಚಂದ್ರ. ಗಣಿ ಉದ್ಯಮಿ" ಎಂದು ಪರಿಚಯಿಸಿದಾಗ, ಆತ ಕಷ್ಟಪಟ್ಟು ಕುತ್ತಿಗೆಯನ್ನು ಹಿಂದಕ್ಕೆ ತಿರುಗಿಸಿ ಮಂದಹಾಸ ಬೀರಿದ. ರೆಡ್ಡಿ ಮುಂದುವರಿದು ನಡುವಿನ ಸೀಟಿನಲ್ಲಿ ಕುಳಿತ ಪುರುಷ ವ್ಯಕ್ತಿಯನ್ನು "ಇವರು ಶರಣ್, ಗಣಿ ಮತ್ತು ಭೂವಿಜ್ಞಾನ ಇಲಾಖೆಯಲ್ಲಿ ಫೀಲ್ಡ್ ಆಫೀಸರ್" ಎಂದಾಗ ಆತ ಭೂಮಿಗೌಡನತ್ತ ತಿರುಗಿ "ಹಲೋ" ಎಂದ. ಶರಣ ಪಕ್ಕದಲ್ಲಿ ಕುಳಿತ ಹೆಂಗಸನ್ನು ಪರಿಚಯಿಸುತ್ತಾ ಇವರು "ಚಂದ್ರಿಕಾ ಚಂದ್ರಶೇಖರ್, ನಮ್ಮ ಶರಣ್‌ರವರ ತಂಗಿ. ಇವರ ಪತಿ ಕನಕಪುರ ತಾಲ್ಲೂಕಿನ ತಹಸೀಲ್ದಾರ್ ಆಗಿದ್ದಾರೆ." ಎಂದನು. ಮೊತ್ತ ಮೊದಲ ಬಾರಿಗೆ ಆ ಹೆಂಗಸು ಭೂಮಿಗೌಡನ ಕಡೆ ಕತ್ತು ತಿರುಗಿಸಿ "ನಮಸ್ತೆ" ಎಂದಳು. ಭೂಮಿಗೌಡ ಪ್ರತಿಯಾಗಿ "ನಮಸ್ಕಾರ" ಎಂದ.

ಭೂಮಿಗೌಡನಿಗೆ ಆಯಾಸವಾಗಿತ್ತು. ಸುಮೊ ತಂಪು ಹಿತವಾಗಿತ್ತು. ಹಳ್ಳ ತಟ್ಟುಗಳಿಲ್ಲದ ಸಮನಾದ ರಸ್ತೆಯ ಮೇಲೆ ಸುಮೊ ಮಂದಗತಿಯಲ್ಲಿ ಚಲಿಸುತ್ತಿತ್ತು. ಇಲ್ಲಿ ಎಲ್ಲರೂ ಅಪರಿಚಿತರು. ಅವರೊಡನೆ ಹೇಗೆ ಬೆರೆಯುವುದು ? ಏನು ಮಾತನಾಡುವುದು ? ಎಲ್ಲರೂ ವಿದ್ಯಾವಂತರೇ ! ಬೂಸೇಗೌಡನ ಮಿತ್ರರು. ಗಡಿಯಾರ ನೋಡಿಕೊಂಡ. ಆಗಲೇ ಆರೂಕಾಲಾಗಿತ್ತು. ಆ ಸುಮೊ ಇದೇ ವೇಗದಲ್ಲಿ ಹೋದರೆ ಇನ್ನು ಎರಡು ಗಂಟೆಗಳಲ್ಲಿ ಮೈಸೂರಿನಲ್ಲಿರಬಹುದು. ಎಂಟೂವರೆ-ಒಂಬತ್ತಕ್ಕೆಲ್ಲ ಮನೆಯಲ್ಲಿರಬಹುದು. ಮನಸ್ಸಿನಲ್ಲೇ

ಲೆಕ್ಕಾಚಾರ ಹಾಕಿದ. ನಾಳಿನ ತರಗತಿಗಳಿಗೆ ತಯಾರಿ ನಡೆಸಬೇಕು. ಅಂತಿಮ ಪದವಿ ತರಗತಿ ವಿದ್ಯಾರ್ಥಿಗಳಿಗೆ ಟೆಸ್ಟ್ ಕೊಡಬೇಕು. ಅವನ ಮನಸ್ಸು ನಾಳಿನ ಆಲೋಚನೆಯಲ್ಲಿರಬೇಕಾದರೆ ಅವನ ಕಣ್ಣುಗಳು ತಂತಾನೆ ಮುಚ್ಚಿಕೊಂಡವು. ಅಭ್ಯಾಸ ಬಲದಿಂದ ಸುಮೊ ಕೆಂಗಲ್ ಹತ್ತಿರ ಬರುತ್ತಿದೆಯೆಂದು ಊಹಿಸಿದ. ಅವನ ತಲೆ ಅವನಿಗರಿವಿಲ್ಲದಂತೆ ಹಿಂಬದಿಯ ಸೀಟಿನ ಮೆತ್ತೆಗೆ ಒರಗಿತು. ಕ್ಷಣ ಮಾತ್ರದಲ್ಲಿ ಅವನು ನಿದ್ರೆಯಲ್ಲಿ ಲೀನವಾದ.

ಅವನಿಗೆ ಇದ್ದಕ್ಕಿದಂತೆ ಎಚ್ಚರವಾಯಿತು. ಅವನ ಕೈಯನ್ನು ಏನೋ ಮೃದುವಾಗಿ ನೆಕ್ಕುತ್ತಿರುವಂತೆ ಅನಿಸಿತು. ಅವನು ಜಾಗೃತಗೊಂಡ. ಅವನ ಕೈಗೆ ಮೃದುವಾದ ತುಪ್ಪಳದ ಸ್ಪರ್ಶವಾಗುತ್ತಿತ್ತು. ಸ್ವಲ್ಪ ಗಾಬರಿಯಾಯಿತು. ಕಣ್ಣು ತೆರೆದ ಒಂದು ಬಿಳಿ ಪೊಮೇರಿಯನ್ ನಾಯಿ ! ಅವನು ಕಣ್ಣು ತೆರೆದದ್ದು ಅದರ ಗಮನಕ್ಕೆ ಬಂತು ಅಥವಾ ಅವನನ್ನು ಎಚ್ಚರ ಗೊಳಿಸುವುದೇ ಅದರ ಗುರಿಯಾಗಿತ್ತೋ ಏನೋ ? ಅವನ ಎಚ್ಚರ ಅದಕ್ಕೆ ಸಂತೋಷವನ್ನುಂಟು ಮಾಡಿತ್ತು. ಬಾಲವನ್ನು ಅತ್ತಿತ್ತ ಅಲ್ಲಾಡಿಸಿ ಚಂಗನೆ ಅವನ ತೊಡೆಯನ್ನೇರಿ, ತಲೆ ಎತ್ತಿ ಒಮ್ಮೆ ಅವನನ್ನು ತನ್ನ ಸ್ನಿಗ್ಧ ಕಣ್ಣುಗಳಿಂದ ನೋಡಿ, ಅವನನ್ನು ಮೂಸಿ ಮೂಸಿ ಅಕ್ಕರೆ ತೋರಿತು.

ಅವನಿಗೆ ಸ್ವಲ್ಪ ಭಯವಾಯಿತು. ಅಪರಿಚಿತ ನಾಯಿ. ಅದರ ಮೂಡನ್ನು ಅರಿಯಲಾಗದು. ಮುಖ ನೋಡಿದರೆ ಸ್ನೇಹ ಬಯಸುವಂತಿದೆ. ನಾನು ಭಯಗೊಂಡು ದೂರ ತಳ್ಳಲು ಹೋದರೆ ಕಚ್ಚಲೂ ಬಹುದು. ಪ್ರೀತಿಗೆ ಪ್ರೀತಿಯೇ ಉತ್ತರ. ಅವನ ಕೈ ಅದರ ತಲೆಯನ್ನು ನೇವರಿಸಿ, ಮೆಲ್ಲನೆ ಕುತ್ತಿಗೆಯಿಂದ ಬೆನ್ನಿನ ಮೂಲಕ ಬಾಲದವರೆಗೆ ಮೃದುವಾಗಿ ಹರಿದಾಡಿತು. ನಾಯಿಗೆ ತುಂಬಾ ಸಂತೋಷವಾಯಿತು. ಅದು ತನ್ನ ಪ್ರೀತಿಯನ್ನು ಮತ್ತಷ್ಟು ತೋರುವ ಸಲುವಾಗಿ ಕುತ್ತಿಗೆಯನ್ನು ನಿಡಿದು ಮಾಡಿ ಅವನ ಗಲ್ಲವನ್ನು ತೆಳುವಾದ ನಾಲಿಗೆಯಿಂದ ನೆಕ್ಕಿತು.

ಅದಕ್ಕೆ ಪುಟ್ಟ ಕಣ್ಣುಗಳು. ವಿಪುಲವಾಗಿ ಬೆಳೆದಿದ್ದ ಅದರ ಕೂದಲಿನಿಂದಾಗಿ ಅದರ ಕಿವಿಗಳು ಕಾಣುತ್ತಿರಲಿಲ್ಲ. ಭೂಮಿಗೌಡ ಅದರ ತಲೆಯನ್ನು ಸವರಿ ಅದರ ಕಿವಿಗಳನ್ನು ಮೃದುವಾಗಿ ಅಲುಗಿಸಿದ. ಅದರ ಬಾಯಿ ಕೂಡ ಚಿಕ್ಕದೇ. ಸಾಮಾನ್ಯವಾಗಿ ನಾಯಿಗಳು ಅಪರಿಚಿತರ ಜೊತೆ ಸ್ನೇಹ ಬೆಳೆಸಲು ಬಯಸುವುದಿಲ್ಲ. ಮಾತನಾಡಿಸಲು ಅಥವಾ ಮುಟ್ಟಲು ಮುಂದಾದರೆ ಗುರ್‍ರ್‍ರ್ ಎಂದು ಬೆದರಿಸುತ್ತವೆ. ಮತ್ತೆ ಮುಂದುವರೆದರೆ ಕಚ್ಚಲೂಬಹುದು.

ಆದರೆ ಈ ಪುಟ್ಟ ನಾಯಿ ಪ್ರೀತಿಯ ಮತ್ತೊಂದು ರೂಪದಂತೆ ಅವನ ತೊಡೆಯ ಮೇಲೆ ನಿಂತು, ಮುಂದಿನ ಎರಡು ಕಾಲುಗಳನ್ನು ಅವನ ಎದೆಯ ಮೇಲೆ ಮೃದುವಾಗಿಟ್ಟು, ತನ್ನದೇ ಆದ ವಿಚಿತ್ರ ಶಬ್ದಗಳಿಂದ ಅವನೊಡನೆ ಕುಯ್‍ಗುಡಲು ಆರಂಭಿಸಿತು.

ನಾಯಿಯ ಶಬ್ದ ಕೇಳಿದ ತಕ್ಷಣ ಅವನ ಮುಂದಿನ ಸೀಟಿನಲ್ಲಿ ಕುಳಿತಿದ್ದ ಹೆಂಗಸು- ಆಕೆಯ ಹೆಸರು ಚಂದ್ರಿಕಾ ಚಂದ್ರಶೇಖರ್- ಅವನ ಮೇಲಿದ್ದ ನಾಯಿಗೆ ಗದರಿದಳು : "ಬೆಳ್ಳಿ, ಏನೇ ಇದು ನಿನ್ನ ಚೇಷ್ಟೆ, ಮಾಮನ ಬಟ್ಟೆ ಗಲೀಜಾಗೊಲ್ವೆ ? ಬಾ ಇಲ್ಲಿ". ನಾಯಿ ಅವನನ್ನು ಬಿಟ್ಟು ಇಳಿಯಲಿಲ್ಲ. "ಸಾರಿ ಸಾರ್, ನಮ್ಮ ಬೆಳ್ಳಿ ನಿಮ್ಮ ನಿದ್ದೆಯನ್ನು ಕೆಡಿಸಿದೆ. ಈಗ

ನೋಡಿದರೆ ನಿಮ್ಮನ್ನು ಬಿಟ್ಟು ಬರಲಾರೆ ಎನ್ನುತ್ತಿದೆ" ಎಂದು ತುಸು ಮೇಲಕ್ಕೆದ್ದು ನಿಂತು, ಹಿಂದೆ ಬಾಗಿ ಬಗ್ಗಿ ತನ್ನ ಎರಡೂ ಕೈಗಳಿಂದ ಅದನ್ನು ಹಿಡಿಯಲು ಯತ್ನಿಸಿದಳು. ಆದರೆ ನಾಯಿ ಚೆಂಗನೆ ಭೂಮಿಗೌಡನ ತೊಡೆಯಿಂದ ನೆಗೆದು ಅವನ ಸೀಟಿನ ಕೆಳಗೆ ಸೇರಿತು.

"ಪರವಾಗಿಲ್ಲ ಬಿಡಿ ಮೇಡಂ. ನಾಯಿಗಳನ್ನು ಕಂಡರೆ ನನಗೂ ಇಷ್ಟ. ನಮ್ಮ ಮನೆಯಲ್ಲಿ ನಾವೂ ನಾಯಿ ಸಾಕುವವರೇ, ಬಹುಶಃ ನನ್ನಲ್ಲಿರುವ ನಾಯಿ ವಾಸನೆಯನ್ನು ನಿಮ್ಮ ನಾಯಿ ಗುರುತಿಸಿರಬೇಕು. ಅದಕ್ಕೆ ಅದು ನನ್ನ ಬಳಿ ಬಂದಿದೆ. ಎನಿ ಹೌವ್, ನಿಮ್ಮ ನಾಯಿಗೆ ನೀವು ತುಂಬಾ ಒಳ್ಳೆಯ ಹೆಸರು ಇಟ್ಟಿದ್ದೀರಿ." ಭೂಮಿಗೌಡನ ಈ ಮಾತುಗಳು ಅವಳಲ್ಲಿ ಸಂತೋಷವನ್ನುಂಟು ಮಾಡಿದ್ದವು. ಪ್ರಾಣಿ ಪಕ್ಷಿ ಗಿಡ ಮರಗಳನ್ನು ಕಂಡರೆ ಅವಳಿಗೆ ಮೊದಲಿಂದಲೂ ಪ್ರೀತಿ. ಅವುಗಳನ್ನು ಇಷ್ಟಪಡುವವರು ಅವಳಿಗೆ ಬಹುಬೇಗ ಸ್ನೇಹಿತರಾಗುತ್ತಿದ್ದರು. ಸಮಾನಗುಣ, ಸಮಾನ ಮನುಷ್ಯರು ಅಂತಾರಲ್ಲ, ಹಾಗೆ. ಭೂಮಿಗೌಡನಿಗೆ ಏನು ಉತ್ತರ ಕೊಡಬೇಕೆಂದು ತಕ್ಷಣದಲ್ಲಿ ಅವಳಿಗೆ ಏನೂ ಹೊಳೆಯಲಿಲ್ಲ.

'ಹೌದಾ, ಥ್ಯಾಂಕ್ಸ್' ಎಂದವಳೆ ತನ್ನ ಸೀಟಿನಲ್ಲಿ ಕುಳಿತಳು. ಪಕ್ಕದಲ್ಲಿ ಕತ್ತನ್ನು ಬಗ್ಗಿಸಿ ತೂಕಡಿಸುತ್ತಿದ್ದ ತನ್ನಣ್ಣನನ್ನು ಒಮ್ಮೆ ನೋಡಿದಳು. ಮುಂದಿನ ಸೀಟಿನ ಮಹೇಶ್ ನೇರವಾಗಿ ರಸ್ತೆಯನ್ನು ನೋಡುತ್ತಿದ್ದ. ಅವನ ದಢೂತಿ ದೇಹದಿಂದ ದೀರ್ಘವಾಗಿ ನಡೆಯುತ್ತಿದ್ದ ಉಸಿರಾಟ ಅವಳಿಗೂ ಕೇಳಿಸುತ್ತಿತ್ತು. ರೆಡ್ಡಿ ಡ್ರೈವಿಂಗ್‌ನಲ್ಲಿ ತಲ್ಲೀನನಾಗಿದ್ದ.

ಭೂಮಿಗೌಡ ಚಂದ್ರಿಕಾಳನ್ನು ಮೊದಲ ಸಲಕ್ಕೆ ಸರಿಯಾಗಿ ಕಂಡಿದ್ದ. ಸುಮಾರು ಇಪ್ಪತ್ತೆಂಟು-ಮೂವತ್ತರ ಪ್ರಾಯ. ಮುಖದಲ್ಲಿ ಗೃಹಿಣಿಗಿರಬೇಕಾದ ಪ್ರೌಢಕಳೆಯಿದ್ದರೂ ಅವಳಲ್ಲಿ ಒಂದು ಬಗೆಯ ಮುಗ್ಧತೆ ಇತ್ತು. ಅದು ಅವಳ ಕಣ್ಣುಗಳಲ್ಲಿ ವ್ಯಕ್ತವಾಗುತ್ತಿತ್ತು. ದುಂಡನೆಯ ಮುಖ. ಹೆಸರಿಗೆ ತಕ್ಕಂತೆ ನಕ್ಕಾಗ ಬೆಳದಿಂಗಳಂಥ ನಗೆ, ಅದೂ ಅತ್ಯಂತ ಮೃದುವಾಗಿ. ವರ್ತಮಾನದ ಎಲ್ಲ ಹೆಂಗಸರಂತೆ ತನ್ನ ದೇಹಕ್ಕೊಪ್ಪುವ ಚೂಡಿದಾರ್ ಧರಿಸಿದ್ದಳು. ತೆಳು ಹಸಿರುವರ್ಣ ಎಲೆಗಳುಳ್ಳ ಗುಲಾಬಿ ವರ್ಣದ ಹೂವುಗಳುಳ್ಳ ಹಿನ್ನೆಲೆಯಲ್ಲಿ ಚೂಡಿದಾರ್ ಅವಳನ್ನು ಅಲಂಕರಿಸಿತ್ತು. ಅವಳು ಕಡುಬಣ್ಣಗಳನ್ನು ಇಷ್ಟಪಡುವುದಿಲ್ಲವೆಂದು ಅವಳ ಧಿರಿಸೇ ಹೇಳುತ್ತಿತ್ತು. ಅವಳ ಎದೆಯ ಭಾಗವನ್ನು ತೆಳು ಹಸಿರು ಎಲೆಗಳುಳ್ಳ ವೇಲ್ ಮುಚ್ಚಿತ್ತು. ಮೃದುವಾದ ಅವಳ ತಲೆಕೂದಲು ಅವಳ ಕುತ್ತಿಗೆಯಿಂದ ಸ್ವಲ್ಪ ಕೆಳಗೆ ನೀಟಾಗಿ ಓಲಾಡುತ್ತಿತ್ತು. ಕಿಟಕಿಯ ಪಕ್ಕದಲ್ಲಿ ಅವಳು ಕೂತದ್ದರಿಂದ ನುಗ್ಗಿ ಬರುವ ಗಾಳಿ ಅವಳ ಕೂದಲನ್ನು ಕೆಣಕುತ್ತಿತ್ತು. ಅವಳಿಗರಿವಿಲ್ಲದೆಯೇ ಅವಳ ಕೈ ಮತ್ತೆ ಮತ್ತೆ ಕೂದಲನ್ನು ಸರಿಪಡಿಸಿಕೊಳ್ಳುತ್ತಿತ್ತು.

ಭೂಮಿಗೌಡ ಅವಳ ಕಡೆಯಿಂದ ತನ್ನ ಮನಸ್ಸನ್ನೂ ದೃಷ್ಟಿಯನ್ನೂ ಬದಲಿಸಿದ. ಅವನಿಗೆ ಮೂವತ್ತೈದರ ಪ್ರಾಯ. ಯೌವ್ವನ ಕೂಡಿದ ಪ್ರೌಢ ವಯಸ್ಸು. ಊರಿನಲ್ಲಿ ತಂದೆ ತಾಯಿ ಇದ್ದಾರೆ. ಒಡಹುಟ್ಟಿದ ಅಣ್ಣ, ಮದುವೆಯಾಗಿರುವ ಒಬ್ಬ ತಂಗಿ - ಎಲ್ಲರೂ ಇದ್ದಾರೆ. ಅವರೆಲ್ಲರೂ ಅವರವರ ಮಟ್ಟಿಗೆ ಸುಖವಾಗಿಯೇ ಇದ್ದಾರೆ. ಆದರೆ ಅವ್ವನಿಗೆ ಮಾತ್ರ ಒಂದೇ ಕೊರಗು. ಮಗನಿಗೆ ವಯಸ್ಸಾಗುತ್ತಾ ಬಂದಿದೆ. ಆದರೆ ಅವನಿಗೆ ಮದುವೆಯಲ್ಲಿ ಮನಸ್ಸಿಲ್ಲ.

ಹಾಗಂತ ಮದುವೆಯಾಗದೆಯೇ ಹಾಗೇ ಉಳಿಯುತ್ತೇನೆ ಎಂದು ಪ್ರತಿಜ್ಞೆಮಾಡಿರಲಿಲ್ಲ. ಸ್ವಾಮಿ ವಿವೇಕಾನಂದರು ಅವನಿಗೆ ಪ್ರಿಯವಾದ ತತ್ವ ಚಿಂತಕರಾದರೂ ಅವರ ಹಾಗೆ ಬ್ರಹ್ಮಚಾರಿಯಾಗಿರಬೇಕೆಂದು ಒಪ್ಪುತ್ತಿರಲಿಲ್ಲ. ಅವನಿಗೆ ಅವನದೇ ಆದ ಜೀವನದ ಆದರ್ಶಗಳಿದ್ದವು.

ಅಪ್ಪನಿಗೆ ಗೊತ್ತು. ಮನೆಯವರಿಗೆಲ್ಲರಿಗೂ ಗೊತ್ತು. ಅವನು ಪ್ರೀತಿಸಿದ್ದ ಹುಡುಗಿ ಆಕಸ್ಮಿಕ ಮರಣಕ್ಕೆ ತುತ್ತಾಗಿದ್ದಳು. ಅದರ ಶಾಕ್‌ನಿಂದ ಅವನು ಬಹಳ ದಿನ ಹೊರ ಬಂದಿರಲಿಲ್ಲ. ಆದರೆ ಅವನು ತನ್ನ ಮನಸ್ಸನ್ನು ಬೇರೆ ಕಡೆ ತಿರುಗಿಸಿದ್ದ. ಓದು ಅವನಿಗೆ ಪ್ರಿಯವಾದ ಹವ್ಯಾಸ. ಸಾಹಿತ್ಯ, ತತ್ವಶಾಸ್ತ್ರ ಮತ್ತು ಭೂವಿಜ್ಞಾನ ; ಪರಿಸರ ಅಧ್ಯಯನ ಅವನಿಗೆ ವಿಶೇಷ ಆಸಕ್ತಿಯ ಕ್ಷೇತ್ರವಾಗಿದ್ದವು. ಅವನು ಹೇಳಿ ಕೇಳಿ ಭೂವಿಜ್ಞಾನದ ವಿದ್ಯಾರ್ಥಿಯಾಗಿದ್ದ. ಭೂ ವಿಜ್ಞಾನದಲ್ಲಿ ಸ್ನಾತಕೋತ್ತರ ಪದವಿ ಪಡೆದು ಅಧ್ಯಾಪಕನಾದ ಮೇಲೆ, ಅಧ್ಯಾಪನದ ಜೊತೆ ಅಧ್ಯಯನವನ್ನು ಗಂಭೀರವಾಗಿ ತಗೆದುಕೊಂಡಿದ್ದ . "ಕ್ಲೋಸ್‌ಪೇಟ್ ರಾಕ್ಸ್ : ಎ ಸ್ಟಡಿ"ಎಂಬ ವಿಷಯದ ಮೇಲೆ ಅಧ್ಯಯನ ಮಾಡಿ ಡಾಕ್ಟರೇಟ್ ಪಡೆದಿದ್ದ. ಅನೇಕ ರಾಷ್ಟ್ರೀಯ - ಅಂತರ ರಾಷ್ಟ್ರೀಯ ಪತ್ರಿಕೆಗಳಲ್ಲಿ ಭೂವಿಜ್ಞಾನದ ಬಗ್ಗೆ ಲೇಖನಗಳ್ನು ಪ್ರಕಟಿಸಿದ್ದ. ಆ ಕ್ಷೇತ್ರದಲ್ಲಿ ಅವನಿಗೆ ಒಳ್ಳೆಯ ಹೆಸರಿದ್ದು, ದೇಶದ ಭರವಸೆಯ ತರುಣ ಭೂ ವಿಜ್ಞಾನಿಯೆಂದು ಕರೆಸಿಕೊಂಡಿದ್ದ.

ಅವನ ಶೈಕ್ಷಣಿಕ ಶಕ್ತಿಯ ಕಾರಣದಿಂದ ವೃತ್ತಿಯಲ್ಲಿ ಬಲುಬೇಗ ಮೇಲೇರಿದ್ದ. ಅಧ್ಯಾಪಕನಾದ ಐದು ವರ್ಷಕ್ಕೆ ರೀಡರ್ ಆಗಿ ಭಡ್ತಿ ಸಿಕ್ಕಿತ್ತು. ಕಳೆದ ವರ್ಷ ತಾನೇ ಪ್ರಾಧ್ಯಾಪಕನಾಗಿ ನೇಮಕಗೊಂಡಿದ್ದ. ಅವನ ಸರಳ ಜೀವನ ಶೈಲಿಯಿಂದಾಗಿ ಎಲ್ಲರೊಡನೆ ಬಹುಬೇಗ ಮಿಳಿತವಾಗುತ್ತಿದ್ದ. ಅವನ ಅಕಾಡೆಮಿಕ್ ಶಕ್ತಿಯನ್ನು ಗುರುತಿಸಿದ್ದ ಅನೇಕ ಶಿಕ್ಷಣ ಸಂಸ್ಥೆಗಳು ಅವನಿಗೆ ವಿಶೇಷ ಸವಲತ್ತುಗಳೊಡನೆ ಕೆಲಸ ನೀಡಿ ಆಹ್ವಾನಿಸಿದ್ದವು. ಆದರೆ ಅವನ್ನು ಅವನು ನಯವಾಗಿ ನಿರಾಕರಿಸಿದ್ದನು.

ಅದಕ್ಕೆ ಮುಖ್ಯವಾದ ಕಾರಣ-ಮೈಸೂರು. ಮೈಸೂರು ಅವನಿಗೆ ಅತ್ಯಂತ ಪ್ರಿಯವಾದ ತಾಣವಾಗಿತ್ತು. ಮತ್ತೊಂದು ಕಾರಣ- ಅದು ಅವನ ಬದುಕಿನ ಮಧುರವಾದ ನೆನಪಿನ ಕೇಂದ್ರವಾಗಿತ್ತು. ಅಲ್ಲಿ ಅವನ ಪ್ರೀತಿ ಅರಳಿತ್ತು ಮತ್ತು ಅಲ್ಲಿಯೇ ಅದು ಅಂತ್ಯ ಕಂಡಿತ್ತು. ಆ ನೆನಪುಗಳು ಇಂದು ಅವನನ್ನು ದುಃಖಿಯನ್ನಾಗಿರಲು ಬಿಡುತ್ತಿರಲಿಲ್ಲ. ಕಳೆದುಹೋದ ಆ ದಿನಗಳು ತಿರುಗಾಡುವ ಸ್ಥಳಗಳಲ್ಲಿ, ಗ್ರಂಥಾಲಯಗಳಲ್ಲಿ, ಬೆಟ್ಟಗುಡ್ಡ ಪ್ರದೇಶಗಳಲ್ಲಿ ಮತ್ತೆ ಮತ್ತೆ ಜೀವಂತವಾಗಿ ವರ್ತಮಾನದಲ್ಲಿ ಜೊತೆಯಲ್ಲಿರುವಂತೆ ಅನಿಸುತ್ತಿತ್ತು. ಮೈಸೂರು ಮತ್ತು ಅದರ ಸುತ್ತ ಮುತ್ತಲ ಪ್ರದೇಶಗಳು ಅವನಿಗೆ ಭೂತಕಾಲವನ್ನು ಕಣ್ಣೆದುರಿಗೆ ತಂದು ಜೀವಂತವಾಗಿಸುತ್ತಿದ್ದವು. ಅಲ್ಲಿ ಅವನ ಪ್ರೀತಿಯ ಸುಳಿಗಾಳಿಯ ಸ್ಪರ್ಶವಾಗುತ್ತಿತ್ತು. ಹಳೆಯ ನೆನಪುಗಳಲ್ಲಿಯೇ ತಪಿಸಿ ತಪಿಸಿ ದೇವದಾಸನಾಗದೆ, ಆ ನೆನಪುಗಳನ್ನು ಎದೆಗೂಡಿನ ಮೂಲೆಯೊಂದರಲ್ಲಿ ಜೋಪಾನವಾಗಿ ಭದ್ರಗೊಳಿಸಿ, ವರ್ತಮಾನದ ಬದುಕನ್ನು ರೂಪಿಸಿಕೊಳ್ಳಲು ಯತ್ನಿಸಿದ್ದ. ಅದರಲ್ಲಿ ಅವನು ಯಶಸ್ವಿಯೂ ಆಗಿದ್ದ.

ಅವನ ದಿನಚರಿಯೂ ಅಷ್ಟೆ. ಬೆಳಿಗ್ಗೆ ಐದು ಗಂಟೆಗೆ ಎದ್ದು ನಾಲ್ಕು ಮೈಲಿ ಜಾಗಿಂಗ್ ಮಾಡುವುದು; ಜಾಗಿಂಗ್‌ನಲ್ಲಿ ನಿಡಿದಾಗಿ ಉಸಿರೆಳೆದು ಬಿಡುವ ಅಭ್ಯಾಸ ಮಾಡುವುದು; ಮುಂಜಾನೆಯ ಆಕಾಶದ ಚಿತ್ತಾರಗಳನ್ನು ಗಮನಿಸುವುದು; ಆ ಚಿತ್ತಾರದ ಹಿನ್ನೆಲೆಯಲ್ಲಿ ಲಯಬದ್ಧವಾಗಿ ಹಾರಾಡುತ್ತಿರುವ ಬಾನಕ್ಕಿಗಳನ್ನು ನೋಡುವುದು; ಮರಗಿಡ ಸಸ್ಯಗಳು ಗಾಳಿಗೆ ಲಾಸ್ಯವಾಡುವ ಪರಿಯನ್ನು ಅನುಭವಿಸುವುದು. ಈ ಪ್ರಕೃತಿ ಸೊಬಗಿನಲ್ಲಿ ಅವನ ಎದೆಯಾಳದಲ್ಲಿರುವ ನೆನಪು ಎಲ್ಲೆಡೆ ಕಂಡಂತಾಗಿ ಮನಸ್ಸು ಸಂತೋಷಗೊಳ್ಳುತ್ತಿತ್ತು.

ಜಾಗಿಂಗ್ ಮುಗಿಸಿ ಮನೆಗೆ ಬಂದವನೆ ಆ ದಿನದ ಪತ್ರಿಕೆಯ ಮುಖ್ಯಾಂಶಗಳನ್ನು ಓದುವುದು. ಅನಂತರ ಸ್ನಾನ ; ಉಪಹಾರ. ಉಪಹಾರವನ್ನು ಅವನೇ ತಯಾರಿಸುತ್ತಿದ್ದ. ಕೆಲಸದ ಒತ್ತಡವಿದ್ದರೆ ಹಾಲು ಬ್ರೆಡ್ಡು ಅಥವಾ ಮೊಟ್ಟೆ ಬ್ರೆಡ್ಡು ಆದೀತು. ಮಧ್ಯಾಹ್ನ ಕಾಲೇಜಿನ ಕ್ಯಾಂಟೀನಿನ ಮಿತ ಭೋಜನ. ಒಂದೆರಡು ಸಾರಿ ಗೆಳೆಯರ ಜೊತೆ ಟೀ ಸೇವನೆಯೂ ಇರುತ್ತಿತ್ತು. ಮತ್ತೆ ಸಂಜೆ ಮಾನಸಗಂಗೋತ್ರಿ ತಂಪಿನಲ್ಲಿ ವಾಯುಸಂಚಾರ. ಏಳರ ಹೊತ್ತಿಗೆ ಮನೆ ಸೇರಿದ ನಂತರ ಟೀವಿ ನೋಡುವುದು. ವರ್ತಮಾನದ ಸಂಗತಿಗಳನ್ನು ಅರಿಯುವುದು, ಸಂಗೀತ ಕೇಳುವುದು, ರಾತ್ರಿ ಊಟಕ್ಕಾಗಿ ಅಡಿಗೆ ಮನೆ ಸೇರುವುದು; ಅಡುಗೆ ತಯಾರಿಯಲ್ಲೂ ಒಂದು ಆನಂದವನ್ನು ಅನುಭವಿಸುವುದು.

ರಾತ್ರಿ ಹತ್ತು ಗಂಟೆಗೆ ಓದು, ಬರೆಹ ಪ್ರಾರಂಭ, ಸಾಮಾನ್ಯವಾಗಿ ರಾತ್ರಿ ಒಂದು ಗಂಟೆ-ಎರಡು ಗಂಟೆಯವರೆಗೆ ಅದು ಸಾಗುತ್ತಿತ್ತು. ನಂತರ ನಿರುಮ್ಮಳವಾದ ನಿದ್ರೆ.

ಅವನಿಗೆ ಒಂಟಿ ಜೀವನ ಎಂದೂ ಬೇಸರ ತಂದಿರಲಿಲ್ಲ. ಏಕಾಂತ ಆತ್ಮ ಸಂಗಾತಕ್ಕೆ ಉತ್ತಮ ಮಾರ್ಗವೆಂದು ಅವನು ತಿಳಿದಿದ್ದ. ಅಷ್ಟಕ್ಕೂ ಅವನು ಏಕಾಂತವನ್ನು ಏಕಾಂತವೆಂದು ಬಗೆಯುತ್ತಲೇ ಇರಲಿಲ್ಲ. ಭೂಮಿ-ಆಕಾಶಗಳ ಅನಂತತೆಯಲ್ಲಿ ಒಂದು ಭಾಗವಾದ ಮನುಷ್ಯ ಎಂದೂ ಒಂಟಿಯಲ್ಲವೆಂಬುದು ಅವನ ತಿಳಿವಳಿಕೆಯಾಗಿತ್ತು. ಹಳೆಯ ನೆನಪುಗಳು ಮತ್ತು ಪುಸ್ತಕಗಳು ಅವನ ಜೊತೆಗಾರರಾಗಿರುತ್ತಿದ್ದವು.

ರಜಾ ದಿನಗಳಲ್ಲಿ ಮೈಸೂರಿನ ಸುತ್ತ ಮುತ್ತಲ ಅರಣ್ಯ ಪ್ರದೇಶಗಳಿಗೆ, ಕೆರೆಕಟ್ಟೆಗಳಿಗೆ, ಹೊಲಗದ್ದೆಗಳಿಗೆ ಭೇಟಿ ನೀಡುತ್ತಿದ್ದ. ಅದಕ್ಕೆ ಮುಖ್ಯವಾದ ಎರಡು ಕಾರಣಗಳಿದ್ದವು : ಅವುಗಳ ಸೊಗಸನ್ನು ನೋಡಿ ಆನಂದಿಸುವುದು ಒಂದಾದರೆ, ಅವುಗಳ ಭೂರಚನೆ ಇತ್ಯಾದಿಗಳನ್ನು ಅಧ್ಯಯನ ಮಾಡುವ ತನ್ನ ಸಂಶೋಧನಾ ಪ್ರವೃತ್ತಿಯನ್ನು ತಣಿಸುವುದು ಮತ್ತೊಂದು. ಮೈಸೂರಿನ ತನ್ನ ಇಪ್ಪತ್ತು ವರ್ಷಗಳ ವಾಸ್ತವ್ಯದಲ್ಲಿ ಮೈಸೂರು ಸೀಮೆಯ ಎಲ್ಲಾ ಹಳ್ಳಿಗಳನ್ನು ಅವುಗಳ ಮೇಲ್ಮೈ ಲಕ್ಷಣಗಳನ್ನು, ಭೂ ರಚನೆಯ ಸಾಧ್ಯತೆಗಳನ್ನು ತಕ್ಕಮಟ್ಟಿಗೆ ತಿಳಿದಿದ್ದ. ಅವನೊಳಗೆ ಏಕ ಕಾಲದಲ್ಲಿ ಕವಿ ಪ್ರಿಯ ಸಹೃದಯ ಮನಸ್ಸೂ ವಿಜ್ಞಾನಿಯ ವಿಸ್ಮಯದ ಮನಸ್ಸೂ ಕೆಲಸ ಮಾಡುತ್ತಿದ್ದವು.

ವರ್ಷಕ್ಕೊಮ್ಮೆ ಅವನು ಸಹ್ಯಾದ್ರಿಯ ಬೆಟ್ಟಗಳಿಗೆ ಚಾರಣ ಹೋಗುತ್ತಿದ್ದ. 'ಮೈಸೂರ್ ಟ್ರಕ್ಕಿಂಗ್ ಅಸೋಸಿಯೇಶನ್'ನ ಸಕ್ರಿಯ ಸದಸ್ಯನಾಗಿದ್ದ ಅವನು ಚಾರಣವನ್ನು ಸಾಹಸ

ಕ್ರೀಡೆಯನ್ನಾಗಿ ಮಾತ್ರ ಕಂಡಿರಲಿಲ್ಲ. ಜೊತೆಗೆ ಅವನು ತನ್ನ ಅಧ್ಯಯನಕ್ಕೂ ಅದನ್ನು ಬಳಸಿ ಕೊಳ್ಳುತ್ತಿದ್ದ. ವಿವಿಧ ಬಗೆಯ ಅವನು ತನ್ನ ಅಧ್ಯಯನಕ್ಕೂ ಅದನ್ನು ಬಳಸಿಕೊಳ್ಳುತ್ತಿದ್ದ. ವಿವಿಧ ಬಗೆಯ ಕಲ್ಲುಗಳು, ಅವುಗಳ ರಚನೆ, ಅವುಗಳ ಅಂತರಾಳದ ಸಂಯೋಜಕ ಶಕ್ತಿ, ಮಾರುಕಟ್ಟೆಯಲ್ಲಿ ಅವುಗಳ ಬೆಲೆ, ಅವುಗಳ ಹಿಂದೆ ಬಿದ್ದಿರುವ ಮಾನವ ದಾಹ-ಈ ಅಂಶಗಳೆಲ್ಲವೂ ಅವನ ಅಧ್ಯಯನ ವಸ್ತುಗಳಾಗಿದ್ದವು.

ಭೂಮಿ ಮತ್ತು ಅದರ ಅಂತರಾಳ; ಭೂಮಿ ಮತ್ತು ಅದರ ಕಣ್ಣಿಗೆ ಕಾಣುವ ನೋಟಸತ್ಯಗಳು ಸದಾ ಅವನ ಸೆಳೆತದ ಅಂಶಗಳಾಗಿದ್ದವು. ತಾನೂ ಅದರ ಒಂದು ಭಾಗಮಾತ್ರವೆಂದು ಅವನು ಬಗೆದಿದ್ದನು. ಈ ಭೂಮಿಯ ಒಂದು ಭಾಗ ತಾನೆಂದುಕೊಳ್ಳುವುದಕ್ಕೆ ಅವನು ಹೆಮ್ಮೆ ಪಡುತ್ತಿದ್ದನು.

ಬೆಳ್ಳಿ-ಪೊಮೇರಿಯನ್ ನಾಯಿ- ಅವನ ಮುಂಗೈಯನ್ನು ನೆಕ್ಕಿತು. ವಾಸ್ತವಕ್ಕೆ ಬಂದ. ಕಿಟಕಿಯಲ್ಲಿ ಹೊರಗೆ ನೋಡಬೇಕೆನ್ನಿಸಿತು. ತಲೆಎತ್ತಿನೋಡಿದ. ಸುಮೊ ಶಿಂಷಾ ನದಿಯ ಹತ್ತಿರ ಹತ್ತಿರ ಬರುತ್ತಿತ್ತು. ಸೋಮನಹಳ್ಳಿ ಬಿಟ್ಟು ಮುಂದೆ ಬಂದಿತ್ತು. ಶಿಂಷಾ ನದಿಯ ಹೊಸ ಸೇತುವೆಯ ಮೇಲೆ ಸುಮೊ ರಭಸವಾಗಿ ಮುನ್ನುಗ್ಗಿತ್ತು. ಅವನ ಕಣ್ಣುಗಳು ನದಿಯನ್ನು ಹುಡುಕಿದವು. ನಿರಾಶೆಯಾಯಿತು. ನದಿ ಹರಿಯುವುದೇ ನಿಂತು ಹೋಗಿತ್ತು. ನದಿಯ ತುಂಬ ಬರೀ ಗುಂಡಿಗಳು, ಗುಂಡಿಗಳು. ನದಿಯ ಮರಳನ್ನು ತುಂಬಿಕೊಂಡು ಸಾಲಾಗಿ ಸಾಗುತ್ತಿರುವ ಲಾರಿಗಳು. ನಿಜ, ಶಿಂಷಾ ಜೀವಂತ ನದಿಯಲ್ಲ. ಬಹಳ ಕಡಿಮೆ ದೂರ ಕ್ರಮಿಸುವ ನದಿ. ಶಿಂಷಾದಲ್ಲಿ ಕಾವೇರಿಯನ್ನು ಕೂಡಿಕೊಳ್ಳುವ ಸಾಮಾನ್ಯ ಉಪನದಿ. ಹಾಗಂತ ಅದಕ್ಕೆ ತನ್ನದೇ ಆದ ಸ್ವಂತಿಕೆಯಿಲ್ಲವೆ ? ಅದರ ದೇಹವನ್ನು ಹೀಗೆ ಉದ್ದಕ್ಕೂ ಅಗೆದು ಅಗೆದು ಅದರ ಮರಳನ್ನು ಬಾಚಿ ತನ್ನ ದಾಹ ಹಿಂಗಿಸಿ ಕೊಳ್ಳಲು ಯತ್ನಿಸುತ್ತಿರುವ ಮಾನವನಿಗೆ ತಾನುಂಟು ಮಾಡುತ್ತಿರುವ ಅನಾಹುತದ ಪರಿವೆ ಇದೆಯೇ ? ಭೂಮಿಗೌಡನಿಗೆ ಮರುಗುವಂತಾಯಿತು. ಅವನು ಕೈಚಾಚಿ ತನ್ನ ಕಾಲ ಬಳಿಯಿದ್ದ ಬೆಳ್ಳಿಯನ್ನು ಎತ್ತಿ ತನ್ನ ತೊಡೆಯ ಮೇಲೆ ಕೂರಿಸಿ ಕೊಂಡ. ಅದರ ನಿರ್ಮಲ ಕಣ್ಣುಗಳನ್ನು ನೋಡಿದ. ಶಿಂಷೆ ಅದರಲ್ಲಿ ಮಿನುಗಿದಂತೆ ಭಾಸವಾಯಿತು.

ಮೊನ್ನೆ ತಾನೆ ಮದ್ದೂರಿನ ರೈತರೊಬ್ಬರು ಟೀವಿಯಲ್ಲಿ ತಮ್ಮ ನೋವನ್ನು ತೋಡಿಕೊಳ್ಳುತ್ತಿದ್ದರು : "ಇತ್ತೀಚೆಗೆ ನಮ್ಮ ಬಾವಿಗಳಲ್ಲಿ ನೀರು ಸುಂಡಿ ಹೋಗಿದೆ. ಕೊಳವೆ ಬಾವಿಗಳು ಬತ್ತಿಹೋಗಿವೆ. ಮೊದಲು ಹಿಂಗಿರಲಿಲ್ಲ. ಶಿಂಷಾದಲ್ಲಿ ಅಲ್ಪ ಸ್ವಲ್ಪ ನೀರು ಹರಿಯುತ್ತಿತ್ತು. ನಮ್ಮ ಬಾವಿಗಳಲ್ಲಿ ಸದಾ ನೀರು. ನಮ್ಮ ಬೆಳೆಗಳಿಗೆ ಎಂದೂ ತೊಂದರೆಯಾಗುತ್ತಿರಲಿಲ್ಲ. ಆದರೆ ಈಗ ಶಿಂಷಾದಲ್ಲಿ ಮರಳಿನ ದಂದೆ ಜಾಸ್ತಿಯಾಗಿದೆ. ಹತ್ತಾರು ಅಡಿಗಳ ಗುಂಡಿಗಳನ್ನು ತೊಡಲಾಗಿದೆ. ಮರಳು ಖಾಲಿಯಾಗ್ತಿದೆ. ಭೂಮಿಯ ಅಂತರ್ಜಲ ಬತ್ತಿಹೋಗಿದೆ. ಇನ್ನು ಹೆಂಗೆ ತಾನೆ ನಮ್ಮ ಬಾವಿಗಳಲ್ಲಿ ನೀರು ಬರ್ತದೆ ? ಆ ರೈತನಿಗಿರುವ ಭೂಮಿ ಪ್ರಜ್ಞೆಯನ್ನು ಕಂಡು ಭೂಮಿಗೌಡನಿಗೆ ಆಶ್ಚರ್ಯವಾಗಿತ್ತು. ಆತ ಸತ್ಯವನ್ನೇ ಕಂಡು ಅದನ್ನೇ ಆಡುತ್ತಿದ್ದ.

ಸುಮೊ ತನ್ನ ವೇಗವನ್ನು ಕಡಿಮೆಮಾಡಿ ಶಿವಪುರಕ್ಕೆ ಮುಂಚೆ ಸಿಗುವ 'ಮದ್ದೂರು ಟಿಫಾನೀಸ್' ಮುಂದೆ ನಿಂತಿತು. ಭೂಮಿಗೌಡನಿಗೆ ಇನ್ನು ಅರ್ಧಗಂಟೆ ವೇಸ್ಟ್ ಆಗುವುದು ನಿಶ್ಚಿತವೆನ್ನಿಸಿತು.

ರೆಡ್ಡಿ ಕೆಳಗಿಳಿದವನೆ "ಬನ್ರೀ ಶರಣ್, ಸಿಸ್ಟರ್‌ನ ಕರ್‍ಕೊಂಡು" ಎಂದನು. ನಿದ್ರೆಯಿಂದ ಎಚ್ಚರಗೊಂಡಿದ್ದ ಶರಣ್‌ರ ಕಣ್ಣುಗಳ ಕೆಂಪಾಗಿದ್ದವು. ಅವನು ತನ್ನತಂಗಿಯ ಕಡೆ ತಿರುಗಿ 'ಟೀ ಕುಡಿಯೋಣ' ಎಂದ.

ಚಂದ್ರಿಕಾ "ನೀವು ಕುಡಿದು ಬನ್ನಿ, ನನಗೆ ಬೇಡ" ಎಂದಳು. ಶರಣ್ ತಲೆ ಅಲ್ಲಾಡಿಸಿ ಕೆಳಗಿಳಿದ. ದಡೂತಿ ಮಹೇಶ ಆಗಲೇ ಸುಮೊದಿಂದ ಕೆಳಗಿಳಿದು, ತನ್ನ ದಪ್ಪ ಸೊಂಟದಿಂದ ಕೆಳೆಗೆ ಜಾರುತ್ತಿದ್ದ ಪ್ಯಾಂಟನ್ನು ಪದೆ ಪದೆ ಮೇಲಕ್ಕೆಳೆದು ಕೊಳ್ಳುತ್ತಾ ಹೋಟಲ್ಲನ್ನು ಪ್ರವೇಶಿಸಿದ್ದ. ರೆಡ್ಡಿ ಚಂದ್ರಿಕಾಳ ಕಿಟಕಿಯ ಬಳಿ ಬಂದು "ಬನ್ನಿ ಸಿಸ್ಟರ್, ಸ್ವಲ್ಪ ಕಾಲು ಆಡಿಸಿ. ಸ್ವಲ್ಪ ಟೀ ಕುಡಿದು ರಿಲ್ಯಾಕ್ಸ್ ಆಗಿ" ಎಂದು ಒತ್ತಾಯಿಸುವ ಧ್ವನಿಯಲ್ಲಿ ಹೇಳಿದನು.

ರೆಡ್ಡಿ ಹೋಟೆಲ್ಲಿನ ಕಡೆ ನಾಲ್ಕು ಹೆಜ್ಜೆ ಇಟ್ಟವನು ಏನನ್ನೋ ಮರೆತವನಂತೆ ಸಡನ್ನಾಗಿ ಹಿಂತಿರುಗಿ ಸುಮೊದ ಹಿಂಭಾಗಿಲನ್ನು ತೆರೆದ. "ಬನ್ನಿ ಪ್ರೊಫೆಸರ್, ಟೀ ಕುಡಿಯೋಣ" ಎಂದ. ಭೂಮಿಗೌಡ "ಇಲ್ಲ ರೆಡ್ಡಿಯವರೆ, ನೀವು ಹೋಗಿ ಬನ್ನಿ, ನಾನು ಟೀ ಕುಡಿದೇ ಬಸ್ ನಿಲ್ದಾಣಕ್ಕೆ ಬಂದಿದ್ದೆ" ಎಂದನು.

"ಕುಡಿದಿರಬಹುದು, ಈಗ ನೀವು ನಮ್ಮ ಅತಿಥಿ. ನಮಗೆ ಸ್ವಲ್ಪ ಕಂಪನಿ ಕೊಡಿ. ನಿಮ್ಮನ್ನು ಬಿಟ್ಟು ಕುಡಿಯಲು ನಮಗೆ ಮುಜುಗರ. ನಿಮಗೆ ಸಂಕೋಚ ಬೇಡ" ಎಂದ ರೆಡ್ಡಿ.

ಭೂಮಿಗೋಡನಿಗೆ ರೆಡ್ಡಿಗೆ ಮುಜುಗರ ಮಾಡುವುದು ಬೇಡವೆನ್ನಿಸಿತು. ರಾಮನಗರದ ಬಸ್ ನಿಲ್ದಾಣದಲ್ಲಿ ಒಂದು ಗಂಟೆಗಿಂತಲೂ ಹೆಚ್ಚು ಕಾಲ ಬಿಸಿಲಿನಲ್ಲಿ ಗಂಟಲು ಒಣಗಿದ್ದು ನಿಜ. ಟೀ ಕುಡಿಯಲು ಮನಸ್ಸಾಯಿತು. "ಆಯ್ತು ರೆಡ್ಡಿಯವರೆ, ಬರುತ್ತೇನೆ" ಎಂದು ಉತ್ತರಿಸಿದನು.

ರೆಡ್ಡಿ ಹೋಟೆಲ್ಲಿನ ಕಡೆ ಹೆಜ್ಜೆ ಹಾಕಿದ. ಭೂಮಿಗೌಡ ಚಂದ್ರಿಕಾಳತ್ತ ನೋಡಿದ. ಅವಳು ಎದ್ದು ನಿಂತು "ಬನ್ನಿ ಹೋಗೋಣ ಸಾರ್" ಎಂದಳು.

ಭೂಮಿಗೌಡ ತನ್ನ ತೊಡೆಯ ಮೇಲಿದ್ದ ನಾಯಿಯನ್ನು ತೋರಿ "ಈ ನಿಮ್ಮ ಬೆಳ್ಳಿ ?" ಎಂದು ಏನು ಮಾಡುವುದು ಎಂಬಂತೆ ಕೇಳಿದ.

ಚಂದ್ರಿಕಾ "ಬಂದೆ" ಎಂದವಳೆ ಸುಮೊದಿಂದ ಕೆಳಗಿಳಿದು ಗಾಡಿಯ ಹಿಂಬಾಗಿಲ ಬಳಿ ಬಂದಳು. ಬಾಗಿಲ ಬಳಿ ನಿಂತ ಚಂದ್ರಿಕಾಳ ಪೂರ್ಣ ನಿಲುವನ್ನು ಭೂಮಿಗೌಡ ಗಮನಿಸಿದ. ಆಕರ್ಷವಾದ ಅಂಗ ಸೌಷ್ಟವ ಎನ್ನಿಸಿತು. ಸುಮಾರು ಐದು ಅಡಿ ಐದು ಅಂಗುಲ ಎತ್ತರವಿರಬಹುದು. ಅವಳು ಭೂಮಿಗೌಡನ್ನು ಕುರಿತು "ಬೆಳ್ಳಿ ಇಲ್ಲೆ ಒಳಗಿರಲಿ, ನಾವು ಬಾಗಿಲು ಹಾಕಿಕೊಂಡು ಹೋಗೋಣ" ಎಂದು ಹೇಳಿ, ಭೂಮಿಗೌಡನ ಜೊತೆಯಲ್ಲೇ ಹೊರಗೆ ನೆಗೆಯಲು ಯತ್ನಿಸುತ್ತಿದ್ದ ಬೆಳ್ಳಿಯನ್ನು ಅಲ್ಲೇ ತಡೆದು ಅವನು ಹೊರ ಬಂದ ತಕ್ಷಣ ಬಾಗಿಲನ್ನು ಮುಚ್ಚಿದಳು.

## ಅಧ್ಯಾಯ : ನಾಲ್ಕು

ಭೂಮಿಗೌಡ ಕಾರಿನಿಂದ ಹೊರಬಂದವನೆ ಎರಡೂ ಸೊಂಟದ ಮೇಲೆ ತನ್ನ ಕೈಗಳನ್ನಿಟ್ಟು ಒಮ್ಮೆ ಹಿಂದಕ್ಕೆ ಒಮ್ಮೆ ಮುಂದಕ್ಕೆ ಮೈ ಬಗ್ಗಿಸಿದ. ನಂತರ ನೆಟ್ಟಗೆ ನಿಂತು ಒಮ್ಮೆ ಎಡಕ್ಕೆ ಒಮ್ಮೆ ಬಲಕ್ಕೆ ಬಗ್ಗಿದ. ಹಾಯ್ ಎನಿಸಿತು. ಆಗಲೇ ಕತ್ತಲೆ ಆವರಿಸುತ್ತಾ ಬಂದಿತ್ತು. ಪೂರ್ವದಲ್ಲಿ ಚಂದ್ರಮೂಡಿ, ಆಗಲೇ ಒಂದು ಮಾರು ಮೇಲೆ ಬಂದಾಗಿತ್ತು. ಚಂದ್ರನ ಬೆಳಕು ರಸ್ತೆಗಳ ಬೆಳಕಿನೊಡನೆ ಮಿಳಿತವಾಗಿ ತನ್ನ ಸಹಜ ಸೌಂದರ್ಯವನ್ನು ಪ್ರದರ್ಶಿಸಲು ವಿಫಲವಾಗಿತ್ತು. ಅವನು ಚಂದ್ರನನ್ನೇ ತದೇಕಸಾಗಿ ಸ್ವಲ್ಪ ಹೊತ್ತು ನೋಡಿ ತನ್ನಷ್ಟಕ್ಕೆ ತಾನು "ಇಂದು ಹುಣ್ಣಿಮೆ" ಎಂದನು.

"ಹೌದು, ಇಂದು ಹುಣ್ಣಿಮೆ. ಚಂದ್ರ ತುಂಬ ಸುಂದರವಾಗಿದ್ದಾನಲ್ಲವೇ ಸಾರ್" ಎಂದಳು ಚಂದ್ರಿಕಾ.

ಭೂಮಿಗೌಡ ಒಂದು ಕ್ಷಣ ತಬ್ಬಿಬ್ಬಾದ. ಒಂದು ಕ್ಷಣ ತನ್ನ ಇರವನ್ನು ಮರೆತಿದ್ದು ಕಾರಣ ಅವನು ತನ್ನ ಪಕ್ಕವೇ ಇದ್ದ ಚಂದ್ರಿಕಾಳನ್ನು ಮರೆತಿದ್ದ. ಅವನು ಅವಳ ಕಡೆ ತಿರುಗಿದ. ಅವಳು ಚಂದ್ರನನ್ನು ನೋಡುತ್ತಿದ್ದಳು. ಅವಳ ಮುಖ ಚಂದ್ರನನ್ನೆ ಹೋಲುತ್ತಿರುವಂತೆ ಅವನಿಗೆ ಭಾಸವಾಯಿತು. ತುಸು ಮೇಲಕ್ಕೆತ್ತಿರುವಂತೆ ತೋರುತ್ತಿದ್ದ ಅವಳ ಮುಖದಲ್ಲಿ ಕಂಡರೂ ಕಾಣದಂತಹ ಮಂದಹಾಸ. ಅವಳ ಹಣೆಯ ಮೇಲೆ, ಕಪೋಲದ ಮೇಲೆ ಸುಳಿದಾಡುತ್ತಿದ್ದ ಮುಂಗುರುಳುಗಳು. ಅವಳಿಗೆ ಅವಳ ಅಪ್ಪ ಅಮ್ಮ ಸೂಕ್ತ ಹೆಸರಿನ್ನಿಟ್ಟಿದ್ದಾರೆ ಅನಿಸಿತು.

ತಕ್ಷಣ ಅವನಿಗೆ ತನ್ನ ವರ್ತನೆ ಸರಿಯಲ್ಲ ಎನ್ನಿಸಿತು. ನಡು ರಸ್ತೆಯ ಪಕ್ಕದಲ್ಲಿ, ತನಗೆ ಸ್ವಲ್ಪ ಹೊತ್ತಿನ ಹಿಂದೆ ತಾನೆ ಪರಿಚಿತವಾದ ಮದುವೆಯಾಗಿರುವ ಹೆಣ್ಣನ್ನು ಈ ರೀತಿ ದಿಟ್ಟಿಸುವುದು ಸರಿಯಲ್ಲ ಅನ್ನಿಸಿತು. ಸ್ವಲ್ಪ ನಾಚಿಕೆಯಾಯಿತು. ತನ್ನ ದೃಷ್ಟಿಯನ್ನು ಬದಲಿಸಿ ಹೋಟೆಲ್ಲಿನ ಕಡೆ ತಿರುಗಿ, "ಹೋಗೋಣವೇ ?" ಎಂದನು. ಅವಳು ಅವನನ್ನೊಮ್ಮೆ ನೋಡಿ ಆಯ್ತೆಂಬಂತೆ ತಲೆಯಾಡಿಸಿ ಅವನೊಡನೆ ಹೆಜ್ಜೆ ಹಾಕಿದಳು.

ಸಂಜೆಯ ಸಮಯವಾದುದರಿಂದ ಹೋಟೆಲ್ಲು ಗಜಿಬಿಜಿ ಗುಡುತ್ತಿತ್ತು. ಪ್ರಯಾಣಿಕರ ಜೊತೆ ಅಲ್ಲಿ ಸ್ಥಳೀಕರು ಸೇರಿಕೊಂಡಿದ್ದರು. ಭೂಮಿಗೌಡ ನಾಲ್ಕು ಹೆಜ್ಜೆ ಒಳಗೆ ಪ್ರವೇಶಿಸಿ, ರೆಡ್ಡಿ ಮತ್ತು ಅವನ ಗೆಳೆಯರನ್ನು ಕಣ್ಣಿನಿಂದಲೇ ಹುಡುಕಿದ. ವಿಸ್ತಾರವಾದ ಆ ಹೋಟೆಲ್ಲಿನ ಹಾಲಿನಲ್ಲಿ ಅವರು ಕಾಣಲಿಲ್ಲ. ಎಲ್ಲಿ ಕೂತಿದ್ದಾರೆ ? ಹಾಲ್‌ಅನ್ನು ಮತ್ತೊಮ್ಮೆ ಪರೀಕ್ಷಿಸಿದ. ತನ್ನ ಪಕ್ಕಲ್ಲೇ ನಿಂತಿದ್ದ ಚಂದ್ರಿಕಾಳನ್ನು ಪ್ರಶ್ನಾರ್ಥಕವಾಗಿ ನೋಡಿದ. ಅವಳ ಕಣ್ಣುಗಳು ಕೂಡ ತನ್ನ ಅಣ್ಣ ಮತ್ತು ಅವನ ಸ್ನೇಹಿತರನ್ನು ಕಾಣಲು ಯತ್ನಿಸುತ್ತಿದ್ದವು.

ಅಷ್ಟರಲ್ಲಿ ಶೌಚಾಲಯದಿಂದ ಹೊರಬರುತ್ತಿದ್ದ ರೆಡ್ಡಿ ಕಾಣಿಸಿದ. ಅವನು ಮುಖಕ್ಕೆ ನೀರು ಹಾಕಿಕೊಂಡಿರಬೇಕು. ತನ್ನ ಕರ್ಚೀಪಿನಿಂದ ಮುಖವನ್ನು ಒರೆಸಿಕೊಳ್ಳುತ್ತಿದ್ದ. ಬಾಗಿಲಲ್ಲಿ

ಚಂದ್ರಿಕಾಳನ್ನು ಮೊದಲು ಗುರುತಿಸಿದವು ಅವನ ಕಣ್ಣುಗಳು. ಅವನು ಸರಸರನೆ ಅವರಲ್ಲಿಗೆ ಬಂದು "ಬನ್ನಿ, ಫ್ಯಾಮಿಲಿ ರೂಂ ನಲ್ಲಿ ಕೂತಿದ್ದೇವೆ" ಎಂದು ಹೋಟೆಲ್ಲಿನ ಒಳಭಾಗದ ಎಡಭಾಗದಲ್ಲಿದ್ದ ಮೆಟ್ಟಲುಗಳನ್ನೇರಿದ. ಭೂಮಿಗೌಡ ಮತ್ತು ಚಂದ್ರಿಕಾ ಅವನನ್ನು ಹಿಂಬಾಲಿಸಿದರು. ಹೋಟೆಲ್ಲಿನ ಮೊದಲ ಅಂತಸ್ತು ವಿಶಾಲವಾಗೇ ಇತ್ತು. ಅದರ ಬಲಭಾಗದಲ್ಲಿ ಅಲ್ಯುಮಿನಿಯಂ ವಿಭಜಕಗಳಿಂದ ಕೊಠಡಿಯಾಗಿ ಪರಿವರ್ತಿತವಾಗಿದ್ದ "ಫ್ಯಾಮಿಲಿ ರೂಂ" ಕಣ್ಣಿಗೆ ಕಾಣಿಸಿತು.

ಅವರು ಒಳ ಪ್ರವೇಶಿಸಿದರು. ಅಂಥ ವಿಶಾಲವಾದ ಕೊಠಡಿಯೇನಾಗಿರಲಿಲ್ಲ. ಆರು ಅಡಿ ಉದ್ದ, ಮೂರು ಅಡಿ ಅಗಲದ ಗ್ರಾನೈಟ್ ಚಪ್ಪಡಿಯ ಟೇಬಲ್, ಟ್ಯೂಬ್‌ಲೈಟಿನ ಬೆಳಕು ಕಲ್ಲಿನಲ್ಲಿ ಪ್ರತಿಫಲಿಸುತ್ತಿತ್ತು. ಟೇಬಲ್ಲಿನ ಎರಡೂ ಮಗ್ಗುಲಿಗೆ ಎರೆಡೆರಡು ಮೆತ್ತೆ ಇರುವ ಚೇರುಗಳು. ಅದರ ಎರಡೂ ತಲೆಯ ಕಡ ತಲಾ ಒಂದೊಂದು ಚೇರು. ದಡೂತಿ ಮಹೇಶ್ ಮತ್ತು ಶರಣ್ ಟೇಬಲ್ಲಿನ ದಕ್ಷಿಣ ಭಾಗದಲ್ಲಿ ಅಕ್ಕ ಪಕ್ಕ ಕುಳಿದ್ದರು. ರೆಡ್ಡಿ ತಾನು ಗುಂಪಿನ ಯಜಮಾನನೋ ಎಂಬಂತೆ ಸಿಂಗಲ್ ಸೀಟಿನಲ್ಲಿ ಕುಳಿತ.

ಭೂಮಿಗೌಡ ಕ್ಷಣ ಯೋಚಿಸಿದ. ಎಲ್ಲಿ ಕೂರುವುದು ? ಖಾಲಿ ಇರುವ ಮತ್ತೊಂದು ಸೀಟಿನಲ್ಲಿ ಕೂರುವುದೋ ಅಥವಾ ಉತ್ತರಭಾಗದ ಎರಡು ಸೀಟುಗಳಲ್ಲಿ ಒಂದರಲ್ಲಿ ಕೂರುವುದೋ ? ಚಂದ್ರಿಕಾ ಅವನ ಧ್ವಂಧ್ವಕ್ಕೆ ತಕ್ಷಣ ಉತ್ತರ ನೀಡಿದಳು. ಎರಡು ಸೀಟಿರುವ ಒಂದರಲ್ಲಿ ಅವರ ಅಣ್ಣನ ಎದುರಿಗೆ ಕುಳಿತು ಅವನ ಕಡೆ ತಿರುಗಿ ತನ್ನ ಪಕ್ಕದ ಖಾಲಿ ಸೀಟಿನಲ್ಲಿ ಕೂರುವಂತೆ ಕೈ ತೋರಿದಳು. ಅವನು ಅವಳ ಪಕ್ಕದ ಚೇರಿನಲ್ಲಿ ಕುಳಿತ.

ಭೂಮಿಗೌಡ ತನ್ನ ಜೊತೆ ಪ್ರಯಾಣಿಕರನ್ನು ಮತ್ತೊಮ್ಮೆ ನಿಕಟವಾಗಿ ನೋಡಿದ. ರೆಡ್ಡಿ ಮತ್ತು ಚಂದ್ರಿಕಾರನ್ನು ಹತ್ತಿರದಿಂದ ಕಂಡಿದ್ದ, ಮಾತನಾಡಿದ್ದ. ಈಗ ತನ್ನ ಎದುರಿಗೆ ಕುಳಿತ ಶರಣ್ ಮತ್ತು ದಡೂತಿ ಮಹೇಶ್‌ರನ್ನು ಮುಂಭಾಗದಿಂದ ನೋಡುವ ಅವಕಾಶ ಲಭಿಸುತ್ತು. ಸುಮೊದಲ್ಲಿ ಅವನಿಗೆ ಅವರ ಬೆನ್ನು ಮತ್ತು ಹಿಂಭಾಗದ ತಲೆಗಳು ಮಾತ್ರ ಕಂಡಿದ್ದವು.

ಮಹೇಶ್ ದಡೂತಿಯಾಗಿಯೇ ಇದ್ದ. ಸುಮಾರು ಒಂದು ಕ್ವಿಂಟಾಲ್ ತೂಗಬಹುದು. ಹೆಗಲ ಮೇಲೆ ನೇರವಾಗಿ ತಲೆ ಕೂತಿರುವಂತೆ ಭಾಸ. ದೇಹದ ಗಾತ್ರದ ಪರಿಣಾಮವಾಗಿ ಕುತ್ತಿಗೆ ಸರಿಯಾಗಿ ಕಾಣುತ್ತಿರಲಿಲ್ಲ. ಅವನ ಗಾತ್ರಕ್ಕೆ ಅವನ ಮುಖ ಚಿಕ್ಕದಾಗಿ ತೋರುತ್ತಿತ್ತು. ನುಣ್ಣಗೆ ಶೇವ್ ಮಾಡಿದ ಮೀಸೆಯಿಲ್ಲದ ಮುಖ. ಕಿರಿದಾದ ಕಣ್ಣುಗಳು. ಅವನ ಹುಬ್ಬುಗಳು ಸ್ವಲ್ಪ ಜಾಸ್ತಿ ಪೊದೆಯಂತಿದೆಯೇನೋ ಅನ್ನಿಸಿತು. ಆಗಲೇ ಅರ್ಧ ಬೋಳಾಗಿದ್ದ ತಲೆಯಲ್ಲಿ ಅಲ್ಲೊಂದು ಇಲ್ಲೊಂದು ಬಿಳಿಗೂದಲು. ಅಂಥ ವಯಸ್ಸೇನೂ ಆಗಿಲ್ಲ. ಬಹುಶಃ ಹತ್ತಿರ ಹತ್ತಿರ ನಲವತ್ತು.

ಅವನ ಪರೀಕ್ಷಿಸುವ ದೃಷ್ಟಿ ಶರಣ್ ಕಡೆ ತಿರುಗಿತ್ತು. ಚಂದ್ರಿಕಾಳ ತರಾನೆ ಗುಂಡನೆಯ ಮುಖ. ತನ್ನ ವೃತ್ತಿಯಿಂದಾಗಿ ಬಿಸಿಲಲ್ಲಿ ತಿರುಗಾಡಬೇಕಾದ್ದರಿಂದ ಮುಖ ಸ್ವಲ್ಪ ಗೋದುವೆ ಬಣ್ಣಕ್ಕೆ ತಿರುಗಿತ್ತು. ಸ್ಥೂಲಕಾಯವೇನಲ್ಲ ; ಆದರೆ ಸಣಕಲನೂ ಅಲ್ಲ. ತಕ್ಕಮಟ್ಟಿಗೆ ಸರಿಯಾದ

ಆಳು. ತಲೆತುಂಬಾ ನೀಟಾಗಿ ಕೂತಿದ್ದ ಕೂದಲು, ತುಟಿಯ ಮೇಲೆ ಟ್ರಿಮ್ ಮಾಡಿದ್ದ ಮೀಸೆ. ಆಕರ್ಷವಾದ ವ್ಯಕ್ತಿತ್ವ. ಆದರೆ ಕಣ್ಣುಗಳು ? ಕಣ್ಣ ಕೆಳಗಿನ ಚರ್ಮದ ಮೇಲೆ ಸ್ಲೀಪಿಂಗ್ ಬ್ಯಾಗುಗಳು ? ಬಹುಶಃ ಮದ್ಯವ್ಯಸನಿಯಿರಬೇಕು... ಸುಮಾರು ಮೂವತ್ತು-ಮೂವತ್ತೂರು ವಯಸ್ಸಾಗಿರಬಹುದು. ಈತನನ್ನು ರೆಡ್ಡಿ ಗಣಿ ಮತ್ತು ಭೂವಿಜ್ಞಾನ ಇಲಾಖೆಯಲ್ಲಿ ಫೀಲ್ಡ್ ಆಫೀಸರ್ ಎಂದು ಪರಿಚಯಿಸಿದ್ದಾನೆ. ಅಂದರೆ ನನ್ನದೇ ಕ್ಷೇತ್ರ. ಭೂಮಿಯ ಒಳ ತಿಳವು ಮತ್ತು ಅದರ ರಕ್ಷಣೆ. ಆ ಬಗ್ಗೆ ಈತನೊಡನೆ ಮಾತನಾಡಬಹುದು, ಸಮಯ ಸಿಕ್ಕಿದರೆ.

ಮತ್ತೆ ಅವನ ದೃಷ್ಟಿ ಮಹೇಶನಲ್ಲಿ ನೆಟ್ಟಿತು, ಏನೋ ಕಂಡವನಂತೆ ! ಏನು ? ಅವನಿಗೆ ಅರ್ಥವಾಗಲಿಲ್ಲ. ಹೌದು, ತನ್ನ ಒಳ ಪ್ರಜ್ಞೆ ಏನನ್ನೋ ಗುರುತಿಸಿದೆ. ಅದು ಏನೆಂದು ಸ್ಪಷ್ಟವಾಗುತ್ತಿಲ್ಲ. ಅಷ್ಟೆ.

ವೈಯ್‌ಟರ್ ಬಂದ. ಏನು ಬೇಕು ಎಂಬಂತೆ ಅವನ ದೃಷ್ಟಿ ರೆಡ್ಡಿಯನ್ನು ಕೇಳಿತು. ವೈಯಟರ್‌ಗೂ ಕೂಡ ಗ್ರೂಪ್ ಲೀಡರ್ ರೆಡ್ಡಿಯೆಂದೇ ಅನ್ನಿಸಿರಬೇಕು. ರೆಡ್ಡಿ ತನ್ನ ಇಕ್ಕೆಲಗಳಲ್ಲಿ ಕುಳಿತಿದ್ದವರಿಗೆ "ಏನು ಬೇಕು ಆರ್ಡರ್ ಮಾಡಿ" ಎಂದ. ಮೊದಲಿಗೆ ಬಾಯಿಬಿಟ್ಟ ಶರಣ್ "ನನಗೊಂದು ಮಸಾಲೆ ದೋಸೆ" ಎಂದ. ಮಹೇಶ "ನನಗೆ ಬೆಣ್ಣೆ ಈರುಳ್ಳಿ ದೋಸೆ" ಎಂದ. ಚಂದ್ರಿಕಾ "ನನಗೆ ಟೀ ಸಾಕು" ಎಂದಳು. ರೆಡ್ಡಿ ಭೂಮಿಗೌಡನನ್ನು ಉದ್ದೇಶಿಸಿ "ಸಂಕೋಚ ಬೇಡ ಸಾರ್, ನಿಮಗೆ ಏನು ಬೇಕು, ಹೇಳಿ" ಎಂದನು. ಭೂಮಿಗೌಡ "ಇಲ್ಲ, ನನಗೆ ಹಸಿವಿಲ್ಲ. ನನಗೆ ಟೀ ಸಾಕು" ಎಂದನು.

ರೆಡ್ಡಿ ವೈಯ್‌ಟರ್‌ನಿಗೆ "ಒಂದು ಮಸಾಲೆ, ಒಂದು ಬೆಣ್ಣೆ ಈರುಳ್ಳಿ, ನನಗೊಂದು ಬೆಣ್ಣೆ ರವೆ ದೋಸೆ ತನ್ನಿ" ಎಂದವನೇ "ವೈಯ್‌ಟರ್ ದೋಸೆ ಬರುವವರೆಗೂ ತಿನ್ನಲು ಬಿಸಿ ಏನಿದೆ ?" ಎಂದು ಕೇಳಿದನು.

"ಮಂಗಳೂರು ಬಜ್ಜಿ ಬಿಸಿ ಇದೆ ಸಾರ್, ತರಲಾ?" ಎಂದನು.

"ಆಯ್ತು, ಮೂರು ಪ್ಲೇಟ್ ಮಂಗಳೂರು ಬಜ್ಜಿ ತನ್ನಿ" ಎಂದ ರೆಡ್ಡಿ. ವೈಟರ್ ಆರ್ಡರ್ ತೆಗೆದು ಕೊಂಡು ಹೋದ,

ರೆಡ್ಡಿ ಭೂಮಿಗೌಡನ ಕಡೆ ತಿರುಗಿ "ಪ್ರೊಫೆಸರ್, ನೀವು ಯಾವ ಸಬ್ಜೆಕ್ಟ್ ಪಾಠ ಮಾಡ್ತೀರಿ" ಎಂದು ಕೇಳಿದ.

ಭೂಮಿಗೌಡ ಉತ್ತರಿಸಲು ಸ್ವಲ್ಪ ನಿಧಾನ ಮಾಡಿದ. ತಲೆ ಎತ್ತಿ ಮೂವರನ್ನು ಒಮ್ಮೆ ನೋಡಿದ. ಅವರೆಲ್ಲರಿಗೂ ತನಗೂ ಒಂದು ಸಾಮಾನ್ಯ ತಂತುವೊಂದು ಬಂಧಿಸಿರುವಂತೆ ಅವನಿಗೆ ತೋರಿತು. ಅದೇ ಭೂಮಿ! ಭೂಮಿಯ ಗರ್ಭ ! ನಾವೆಲ್ಲರೂ ಅದರ ಬೆನ್ನು ಬಿದ್ದವರೇ. ಉದ್ದೇಶ ಬೇರೆ ಇರಬಹುದು. ಆದರೆ ಅದೇ ನಮ್ಮ ಬದುಕಿನ ಜೀವಾಳ.

ಅವನ ತುಟಿಯ ಮೇಲೆ ತೆಳುವಾದ ನಗುವೊಂದು ಮೂಡಿತು. "ನಾನು ಒಂಥರಾ ನಿಮ್ಮಂಥವನೇ ? ನಿಮ್ಮ ಆಸಕ್ತಿ ಕ್ಷೇತ್ರವೇ ನನ್ನದೂ ಕೂಡ. ನಾನು ಜಿಯಾಲಜಿಯನ್ನು ಕುರಿತು ಪಾಠಮಾಡುತ್ತೇನೆ , ಅಧ್ಯಯನ ಮಾಡುತ್ತೇನೆ." ಎಂದನು.

ಶರಣ್ "ಸಾರ್, ನಾನು ನಿಮ್ಮ ಬಗ್ಗೆ ಕೇಳಿದ್ದೇನೆ, ನಿಮ್ಮ ಕೆಲವು ಲೇಖನಗಳನ್ನು ಓದಿದ್ದೇನೆ. ನೀವು ಕ್ಲೋಸ್‌ಪೇಟ್ ರಾಕ್ಸ್ ಬಗ್ಗೆ ನಡೆಸಿರುವ ಅಧ್ಯಯನ ತುಂಬಾ ಕುತೂಹಲಕಾರಿಯಾದದ್ದು. ನಾನು ಕೂಡ ಜಿಯಾಲಜಿಯಲ್ಲಿ ಎಂ ಎಸ್ಸಿ ಮಾಡಿದ್ದೇನೆ. ನಿಮ್ಮನ್ನು ನಾನು ನೋಡಿರಲಿಲ್ಲ. ನಿಮ್ಮನ್ನು ಭೇಟಿ ಮಾಡಿದ್ದು ನನಗೆ ಸಂತೋಷವಾಯಿತು" ಎಂದು ಹೇಳಿ ಎದ್ದು ನಿಂತವನೆ ಭೂಮಿಗೌಡನ ಕೈ ಕುಲುಕಿದ. ಭೂಮಿಗೌಡನಿಗೆ ತನ್ನ ಆಸಕ್ತಿಯನ್ನು ಗುರುತಿಸಿದ್ದ ವ್ಯಕ್ತಿಯೊರ್ವನನ್ನು ಕಂಡು ಸಂತೋಷವಾಯಿತು.

ರೆಡ್ಡಿ ಮತ್ತು ಮಹೇಶ ಇಬ್ಬರೂ ಭೂಮಿಗೌಡನನ್ನು ಕುತೂಹಲದಿಂದ ನೋಡಿದರು. ಅಕಾಡೆಮಿಕ್ ಆಸಕ್ತಿಗಳು ಅವರಿಗೆ ಗೊತ್ತಿರಲಿಲ್ಲ; ಅವೂ ಬೇಕೂ ಆಗಿರಲಿಲ್ಲ. ಈ ರೀತಿಯ ಅಕಾಡೆಮಿಕ್ ವ್ಯಕ್ತಿಗಳು ಕೆಲಸಕ್ಕೂ ಬಾರದ ಪ್ರಯೋಜನಕ್ಕೂ ಬಾರದ ತಿಕ್ಕಲು ಆಸಾಮಿಗಳೆಂದೇ ಅವರು ಭಾವಿಸಿದ್ದರು. ಮಣ್ಣು ಕಲ್ಲುಗಳನ್ನು, ಗಿಡ ಮರ ಬಳ್ಳಿಹುಲ್ಲುಗಳನ್ನು ಮನುಷ್ಯನಿಗಿಂತಲೂ ಉತ್ತಮವೆಂತಲೂ, ಅವುಗಳ ಉಳಿವಿನಲ್ಲಿ ಅವನ ಉಳಿವಿದೆಯೆಂತಲೂ, ಅವನ್ನು ರಕ್ಷಿಸುವುದು ಮನುಷ್ಯರ ಆದ್ಯ ಕರ್ತವ್ಯವೆಂತಲೂ ಭಾಷಣ ಮಾಡುವ, ಲೇಖನ ಬರೆಯುವ ಮಂದಿಯನ್ನು ಅವರು ಕಂಡಿದ್ದರು. ಅವರನ್ನು ತಮ್ಮ ವೃತ್ತಿಯನ್ನು ವಿರೋಧಿಸುವ ಶತ್ರುಗಳೆಂದೂ, ತಮ್ಮ ದಂದೆಯನ್ನು ನಿಲ್ಲಿಸುವ ಅನೇಕ ಹುನ್ನಾರಗಳನ್ನು ಹುಡುಕುವ ತಂತ್ರಗಾರರೆಂದೂ ಗುರುತಿಸಿದ್ದರು.

ಅಂಥ ಗುಣಗಳುಳ್ಳ ವ್ಯಕ್ತಿಯೊಬ್ಬ ಇಂದು ನಮ್ಮೊಂದಿಗಿದ್ದಾನೆ, ಅವನ ಮುಖದ ಮೇಲಿರುವ ನಗುವೇ ಅರ್ಥವಾಗದು. ರೆಡ್ಡಿ ಭೂಮಿಗೌಡನನ್ನು "ನೀವು ಪರಿಸರ ಗಿರಿಸರ ಅಂತ ಚಳವಳಿ ಮಾಡ್ತೀರೋ" ಎಂದು ಕೇಳಿದ.

ಭೂಮಿಗೌಡ ಒಮ್ಮೆ ರೆಡ್ಡಿಯನ್ನೂ ಮತ್ತೊಮ್ಮೆ ಮಹೇಶನನ್ನು ದೃಷ್ಟಿಸಿ ನೋಡಿದ. ಅವನ ತುಟಿಯ ಮೇಲಿದ್ದ ಮಂದಹಾಸ ಬದಲಾಗಲಿಲ್ಲ. "ನಾನು ಆಕ್ಟಿವಿಸ್ಟ್ ಅಲ್ಲ ರೆಡ್ಡಿಯವರೆ, ನಾನೊಬ್ಬ ಅಕಾಡೆಮಿಷಿಯನ್: ಕಾಲೇಜುಗಳಲ್ಲಿ ಪಾಠ ಮಾಡುವುದು ನನ್ನ ಮುಖ್ಯ ಕೆಲಸ. ಚಳವಳಿಗಾರರಿಗೆ ಬೇಕಾದ ಪೂರಕ ಮಾಹಿತಿಗಳನ್ನು ನನ್ನಂಥವರು ನೀಡುತ್ತೇವೆ. ಸಭೆ-ವಿಚಾರಗೋಷ್ಠಿಗಳಿಗೆ ಕರೆದರೆ ಹೋಗಿ ವಿಚಾರ ತಿಳಿಸುತ್ತೇವೆ. ಅವರ ಬೆನ್ನ ಹಿಂದಿನ ನೈತಿಕ ಶಕ್ತಿ ಮತ್ತು ಮಾಹಿತಿ ಶಕ್ತಿಯಾಗಿ ಕೆಲಸ ಮಾಡುತ್ತೇವೆ. ಪರಿಸರವಾದವನ್ನು ಸಮರ್ಥಿಸುವವರಲ್ಲಿ ನಾನೂ ಒಬ್ಬ." ಎಂದ.

ರೆಡ್ಡಿ ಮತ್ತು ಮಹೇಶ ಪರಸ್ಪರ ನೋಡಿದರು. ಅವರ ಕಣ್ಣುಗಳು ಏನನ್ನೋ ಮಾತನಾಡಿಕೊಂಡಂತೆ, ವಿನಿಮಯ ಮಾಡಿಕೊಂಡಂತೆ ಅನ್ನಿಸಿತು.

ಅಷ್ಟರಲ್ಲಿ ವೈಯ್‌ಟರ್ ಒಂದು ತಟ್ಟೆಯಲ್ಲಿ ನೀರಿನ ಲೋಟಗಳನ್ನು ಮಂಗಳೂರು ಬಜ್ಜಿಯನ್ನು ತಂದು ಟೇಬಲ್ಲಿನ ಮೇಲಿಟ್ಟ. ರೆಡ್ಡಿ "ಅಯ್ಯಾ ವೈಯ್‌ಟರ್, ಈ ಲೋಟದ ನೀರು ಬೇಡ. ಬಿಸ್ಲೇರಿ ಬಾಟಲ್ ತಾ. ನಾಲ್ಕು ಬಾಟಲ್ ಬೇಕು" ಎಂದನು. ಅವನು ಹೊರ ಹೋದ.

ರೆಡ್ಡಿ ಒಂದು ಪ್ಲೇಟನ್ನು ತನ್ನ ಮುಂದೆ ಇಟ್ಟುಕೊಂಡು, ಉಳಿದೆರಡು ಪ್ಲೇಟುಗಳಲ್ಲಿ ಒಂದನ್ನು ಮಹೇಶ್ ಶರಣರ ಮುಂದೆಯೂ ಮತ್ತೊಂದನ್ನು ಭೂಮಿಗೌಡ ಚಂದ್ರಿಕಾರ ಮುಂದೆಯೂ ಜರುಗಿಸಿದ. ಬಿಸಿ ಬಿಸಿ ಬಜ್ಜಿಯನ್ನು ಬಾಯಿಗೆ ಹಾಕಿಕೊಂಡು ಚೆನ್ನಾಗಿದೆ ಚೆನ್ನಾಗಿದೆಯೆಂದು ಬಜ್ಜಿಯನ್ನು ಶ್ಲಾಘನೆ ಮಾಡಿದ. ಮಹೇಶ್ ಮತ್ತು ಶರಣ್ ತಲಾ ಒಂದೊಂದು ಬಜ್ಜಿತೆಗೆದುಕೊಂಡು ಬಾಯಿಗಿಟ್ಟುಕೊಂಡರು. ಚಂದ್ರಿಕಾ ಭೂಮಿಗೌಡನ ಮೊಗವನ್ನೊಮ್ಮೆ ನೋಡಿದಳು. "ತಿನ್ನಿರಿ"ಎಂಬ ನೋಟವಿತ್ತು. ಪ್ರತಿಯಾಗಿ ಅವನು "ನೀವು ತೆಗೆದುಕೊಳ್ಳಿ" ಎಂದನು. ಆಗ ಅವಳು ಅವನ ಮುಖವನ್ನು ದಿಟ್ಟಿಸಿ "ನೀವು ಒಂದು ತೆಗೆದು ಕೊಂಡರೆ ನಾನು ಒಂದನ್ನು ತಿನ್ನುತ್ತೇನೆ" ಎಂದುತ್ತರಿಸಿದಳು.

ಅವಳ ನೋಟವನ್ನು ಎದುರಿಸಲಾರದವನಂತೆ ಆಗಲಿ ಎಂಬಂತೆ ತಲೆಯಾಡಿಸಿ ಒಂದು ಬಜ್ಜಿಯನ್ನು ತೆಗೆದು ಚಟ್ನಿಗೆ ಅದ್ದಿ ತನ್ನ ಬಾಯಿಗಿಟ್ಟುಕೊಂಡು ಅರ್ಧ ಕಡಿದು ಜಗಿದನು. ಅವಳು ಎರಡು ಬಜ್ಜಿಗಳನ್ನು ತನ್ನ ಅಣ್ಣನ ಎದುರಿಗಿದ್ದ ಪ್ಲೇಟಿಗೆ ಹಾಕಿದಳು. ಉಳಿದ ಒಂದು ಬಜ್ಜಿಯನ್ನು ಬೆರಳ ತುದಿಯಲ್ಲಿ ನಯವಾಗಿ ಹಿಡಿದು ಚಟ್ನಿಯಲ್ಲಿ ಅದ್ದಿ ತುಟಿಯ ಮಧ್ಯೆ ಮೆಲ್ಲಗೆ ತಂದು ಅರ್ಧ ಭಾಗವನ್ನು ಕಡಿದಳು. ಭೂಮಿಗೌಡ ಅವಳನ್ನೆ ಗಮನಿಸುತ್ತದ್ದ. ಅವಳು ಅವನು ಬಳಸಿದ ಚಟ್ನಿಯನ್ನೇ ಬಳಸಿದ್ದಳು. ಏಕೆ ? ಬೇರೆ ಮತ್ತೊಂದು ಬಟ್ಟಲಲ್ಲಿ ಚಟ್ನಿ ಇತ್ತಲ್ಲ! ಅದನ್ನು ಬಳಸಬಹುದಿತ್ತಲ್ಲ! ಅವನು ಮತ್ತೆ ಉಳಿದರ್ಧ ಬಜ್ಜಿಯನ್ನು ಚಟ್ನಿ ಬಳಸದೆ ತಿಂದು ಮುಗಿಸಿದ. ಅವಳು ಉಳಿದ ಬಜ್ಜಿಯನ್ನು ಚಟ್ನಿಯಲ್ಲಿ ತಿನ್ನುತ್ತಾ "ಬಜ್ಜಿ ಚೆನ್ನಾಗಿದೆ" ಎಂದಳು.

ರೆಡ್ಡಿ ತಲೆ ಎತ್ತದೆ ಬಜ್ಜಿಗಳನ್ನು ಗಬಗಬನೆ ತಿನ್ನತೊಡಗಿದ. ಬಟ್ಟಲಲ್ಲಿದ್ದ ಚಟ್ನಿಯನ್ನು ತಟ್ಟೆಗೆ ಸುರಿದುಕೊಂಡು ಬಜ್ಜಿಯಿಂದ ಬಳಿದುಕೊಳ್ಳುತ್ತಿದ್ದ. ಅವನು ಬಜ್ಜಿಯನ್ನು ಆಸ್ವಾಧಿಸುತ್ತಿದ್ದಾನೋ ಅಥವಾ ಯಾವುದೋ ಗಹನವಾದ ಚಿಂತನೆಯಲ್ಲಿದ್ದಾನೋ ಭೂಮಿಗೌಡನಿಗೆ ಅರ್ಥ ವಾಗಲಿಲ್ಲ.

ಅಷ್ಟರಲ್ಲಿ ವೈಯ್‌ಟರ್ ದೋಸೆಗಳನ್ನು ತಂದು ಅವರವರು ಕೇಳಿದ್ದ ದೋಸೆಗಳನ್ನು ಅವರವರ ಮುಂದೆ ಇಟ್ಟ. ನಾಲ್ಕು ಬಸ್ಲೇರಿ ಬಾಟಲ್‌ಗಳನ್ನು ಟೇಬಲ್ಲಿನ ಮೇಲೆ ಇಟ್ಟು, ಮುಚ್ಚಳಗಳನ್ನು ತೆಗೆದು ಮತ್ತೆ ಅಲ್ಲೇ ಅವನ್ನು ಸೇರಿಸಿದ. ಶರಣ್ ರೆಡ್ಡಿಮುಂದೆ ಒಂದು ಬಾಟಲ್, ಮಹೇಶ್ ಮುಂದೆ ಒಂದು ಬಾಟಲ್‌ನ್ನು ಇಟ್ಟು, ಒಂದನ್ನು ತಾನು ತೆಗೆದುಕೊಂಡು ಸ್ವಲ್ಪ ನೀರು ಕುಡಿದು, ದೋಸೆಯನ್ನು ತಿನ್ನತೊಡಗಿದ. ರೆಡ್ಡಿ ಮತ್ತು ಮಹೇಶ ತಿನ್ನತೊಡಗಿದರು.

ಚಂದ್ರಿಕಾ ಬಿಸ್ಲೇರಿ ಬಾಟಲನ್ನು ಭೂಮಿಗೌಡನ ಮುಂದಿಟ್ಟಳು. ಅವನು ಬಾಟಲಿನಿಂದ ಸ್ವಲ್ಪ ನೀರನ್ನು ಕುಡಿದು, ಟೇಬಲ್ಲಿನ ಮೇಲಿಟ್ಟ. ಅವಳು ಬಾಟಲಿನಿಂದ ನೀರನ್ನು ಕುಡಿದು, ಮುಚ್ಚಳವನ್ನು ಬಿಗಿಯಾಗುವವರೆಗೂ ತಿರುವಿದಳು.

ತಿಂಡಿ ತಿನ್ನುತ್ತಿರುವ ಈ ವಾತಾವರಣ ಸ್ವಲ್ಪ ಅಸಹಜವೆನ್ನಿಸತೊಡಗಿತು. ಏಕೆಂದರೆ ಮೂರು ಜನ ಪರಿಚಿತರು - ಬಹುಶಃ ಸ್ನೇಹಿತರು - ಮಾತನ್ನಾಡದೆಯೇ ಮೌನವಾಗಿ ತಿಂಡಿ

ತಿನ್ನುವುದು ಅಸಹಜವಲ್ಲದೆ ಮತ್ತೇನು ? ಭೂಮಿಗೌಡ ಚಿಂತಿಸಿದ. ಮತ್ತೆ ಅವನು ಮಹೇಶನನ್ನು ಗಮನಿಸಿದ.

ಈತ ನನಗೆ ಪರಿಚಿತ. ಈತನನ್ನು ಎಲ್ಲೋ ನೋಡಿರುವ, ಒಡನಾಡಿರುವ ನೆನಪು. ಎಲ್ಲಿ ? ಎಂದು ? ಭೂಮಿಗೌಡನಿಗೆ ಅವನು ಒಗಟಿನಂತೆ ತೋರಿದ.

ಅಲ್ಲದೆ, ಆತ ಬಿಡುವ ದೀರ್ಘ ಉಸಿರು, ಕೂರಲಾಗದ ಅವನ ಚಡಪಡಿಕೆ, ಪದೆ ಪದೆ ಕರ್ಚೀಪಿನಿಂದ ಮುಖ ಒರೆಸಿಕೊಳ್ಳುವ ರೀತಿ- ಅವನು ಸಹಜವಾಗಿಲ್ಲವೆಂದು ತೋರುತ್ತಿತ್ತು. ತಣ್ಣಗಿರಲು ಯತ್ನಿಸಿದರೂ ಅವನಿಗೆ ಸಾಧ್ಯವಾಗುತ್ತಿರಲಿಲ್ಲ. ಏನೋ ಒಳಕುದಿತ ಅವನನ್ನು ಕಾಡುತ್ತಿರುವಂತೆ ಭಾಸವಾಗುತ್ತಿತ್ತು.

ಮೂರು ಜನರೂ ದೋಸೆ ತಿಂದು ಮುಗಿಸಿದರು. ವೇಯ್ಟರ್ ಟ್ರೇನಲ್ಲಿ ಎಲ್ಲರಿಗೂ ಒಂದೊಂದು ಕಪ್ ಟೀ ತಂದು ಇಟ್ಟ. ಐದೂ ಜನರು ಟೀ ಕುಡಿಯಲಾರಂಭಸಿದರು. ರೆಡ್ಡಿ ಮಹೇಶನನ್ನು ಕುರಿತು "ನಿಮ್ಮ ಮಾಲು ನಮಗೆ ಎಂದು ತಲುಪುತ್ತದೆ ?" ಎಂದು ಕೇಳಿದನು.

"ಸ್ವಲ್ಪ ತಡವಾಗಬಹುದು. ನಿನಗೇ ಗೊತ್ತಿದೆ. ಗಣಿಗಾರಿಕೆಯನ್ನು ಈಗ ಬ್ಯಾನ್ ಮಾಡಿದ್ದಾರೆ. ಗ್ರಾನೈಟ್ ಕಲ್ಲನ್ನು ಕೊರೆಯುವಂತಿಲ್ಲ." ಎಂದ ಮಹೇಶ.

"ಹಾಗೆಂದರೆ ಹೇಗೆ ಮಹೇಶ. ನಾನು ಪಾರ್ಟಿಗಳ ಜೊತೆಯಲ್ಲಿ ಅಗ್ರಿಮೆಂಟ್ ಮಾಡಿಕೊಂಡಿದ್ದೇನೆ. ಮಾಲು ಸಪ್ಲೈ ಮಾಡದಿದ್ದರೆ ನನಗೆ ತುಂಬ ತೊಂದರೆಯಾಗುತ್ತದೆ. ಇದು ಕೋಟ್ಯಾಂತರ ರೂಪಾಯಿಗಳ ವ್ಯವಹಾರ. ಕೆಲಸ ಕೂಡಲೆ ಆಗಬೇಕು." ರೆಡ್ಡಿಯ ಮಾತಿನಲ್ಲಿ ಒತ್ತಾಯವಿತ್ತು.

ಮಹೇಶ ಟೀಯನ್ನು ಗುಟುಕಿಸುತ್ತಾ "ಸ್ವಲ್ಪ ಅರ್ಥಮಾಡಿಕೋ ರೆಡ್ಡಿ. ಮೊದಲು ನಮ್ಮದೇ ಸರ್ಕಾರ ಇತ್ತು. ಎಲ್ಲವೂ ನಾವೆಂದು ಕೊಂಡಂತೆಯೇ ನಡೆಯುತ್ತಿತ್ತು. ಲೋಕಾಯುಕ್ತರ ಹದ್ದಿನ ಕಣ್ಣು ಒಂದು ಕಡೆಯಾದರೆ ನ್ಯಾಯಾಲಯದ ಅಡೆತಡೆಗಳು ಮತ್ತೊಂದು ಕಡೆ. ಉಸಿರು ಬಿಡುವುದೇ ಕಷ್ಟವಾಗುತ್ತಿದೆ." ಎಂದು ಹೇಳಿದನು.

"ನನಗೆ ಈಗ ಗಲ್ಫ್‌ನಿಂದ ಬೇಡಿಕೆ ಬಂದಿದೆ. ಹಳೆಯ ಒಪ್ಪಂದವನ್ನು ಪೂರೈಸದಿದ್ದರೆ ಹೊಸ ಆಪರ್‌ಸಿಗುವುದು ಕಷ್ಟ. ನಾನು ಈಗ ಮಾಲು ಪೂರೈಸದಿದ್ದರೆ ಅವರೆಲ್ಲರೂ ರಾಜಾಸ್ಥಾನದ ವ್ಯಾಪಾರಿಗಳ ಬಳಿ ಹೋಗುವುದು ನಿಶ್ಚಿತ. ಈ ಬಗ್ಗೆ ಗಲ್ಫ್‌ನ ನನ್ನ ಕಾಂಟಾಕ್ಟ್‌ನಿಂದ ಮಾಹಿತಿ ಬಂದಿದೆ". ಸ್ವಲ್ಪ ಗಡುಸಾಗಿ ರೆಡ್ಡಿ ಮಾತನಾಡಿದ.

ಇಬ್ಬರ ಮಾತುಗಳನ್ನು ಆಲಿಸುತ್ತಿದ್ದ ಶರಣ್ ರೆಡ್ಡಿಯನ್ನು ಕುರಿತು "ಕಷ್ಟವಿದೆ ರೆಡ್ಡಿ. ಸಿಕ್ಕಾಪಟ್ಟೆ ವಿಜಿಲೆಂಟ್ ಆಗಿದೆ ನಮ್ಮ ಇಲಾಖೆ. ಬಳ್ಳಾರಿಯಲ್ಲಿ ಗಲಾಟೆಯಾದ ಮೇಲಂತೂ ನಮ್ಮ ನಿರ್ದೇಶಕರು ಈಗ ತುಂಬಾ ಹುಷಾರಾಗಿದ್ದಾರೆ. ನಮಗೂ ಹುಷಾರಾಗಿರುವಂತೆ ಸೂಚನೆ ನೀಡಿದ್ದಾರೆ" ಎಂದನು.

"ಅಷ್ಟೇ ಅಲ್ಲ ರೆಡ್ಡಿ. ನಮ್ಮ ವಿರೋಧಿಗಳು ಹಳ್ಳಿಹಳ್ಳಿಗಳಲ್ಲಿ ಈಗ ನಮ್ಮ ಮೇಲೆ ನಿಗ ಇಟ್ಟಿದ್ದಾರೆ. ಅಧಿಕಾರಿಗಳ ಪೊಲೀಸರ ಭಯ ನಮಗೆ ಅಷ್ಟಿಲ್ಲ. ಈ ರಾಜಕೀಯ ವಿರೋಧಿಗಳದ್ದೇ

ಭಯ. ಅದು ಸಾಲದು ಎಂಬಂತೆ ಮಾಧ್ಯಮದವರ ಕಾಟ ಬೇರೆ. ಸ್ವಲ್ಪ ಗುಮಾನಿ ಬಂದರೆ ಸಾಕು, ಕ್ಯಾಮರಾ ಸಮೇತ ಹಾಜರಾಗ್ತಾರೆ. ಇರೋದು ಇಲ್ದೆ ಇರೋದು ಎಲ್ಲಾ ಸೇರಿಸಿ ಬರೀತಾರೆ. ಆ ಟೀವಿಯವರು ದಿನದ ಇಪ್ಪಾತ್ನಾಕು ಗಂಟೆ ಒಂದೇ ವಿಷಯವನ್ನು ತುತ್ತೂರಿ ಊದುತ್ತಾರೆ."

"ಎಂಥ ಮಾತು ಅಂಥ ಆಡ್ತೀಯಾ ಮಹೇಶ. ನಿಮಗಿರುವ ಇನ್‌ಫ್ಲ್ಯೂಯನ್ಸ್, ಜನಬೆಂಬಲ ಯಾರಿಗಿದೆ ? ರಾಮನಗರ, ಕನಕಪುರ ತಾಲ್ಲೂಕುಗಳನ್ನು ಆಳಿದವರು ನೀವು! ನೀವು ಹೇಳಿದಂಗೆ ಅಲ್ಲಿನ ಅಧಿಕಾರಿಗಳು, ಜನ ಕುಣೀತ್ತಾರೆ. ನನಗೆ ಗೊತ್ತಿಲ್ಲ ಅಂದ್ಕೊಂಡಿದಿಯಾ? ಅವೆಲ್ಲಾ ಆಗೋಲ್ಲಾಪ್ಪ, ಈ ತಿಂಗಳ ಒಳಗೆ ಮಾಲು ನನಗೆ ಸಪ್ಲೈ ಆಗಲೇಬೇಕು" ರೆಡ್ಡಿ ನಿಷ್ಠುರವಾಗಿ ನುಡಿದ.

ಮಹೇಶ ಎರಡೂ ಕೈಗಳ ನಡುವೆ ಟೀ ಕಪ್ಪನ್ನು ಹಿಡಿದು ಶರಣ್‌ನ ಕಡೆ ನೋಡಿದ. ಶರಣ್ ಏನೂ ಮಾತನಾಡದೆ ಪಿಳ ಪಿಳನೆ ಕಣ್ಣು ಬಿಟ್ಟ. ಮೆಲ್ಲಗೆ ಎದುರಿಗಿದ್ದ ತಂಗಿಯ ಕಡೆ ಒಮ್ಮೆ, ಭೂಮಿಗೌಡನ ಕಡೆ ಒಮ್ಮೆ ನೋಡಿದ.

ಇದು ಯಾವುದನ್ನು ಲಕ್ಷ್ಯಮಾಡದ ರೆಡ್ಡಿ "ಇಲ್ಲ ಮಹೇಶ್. ಏನಾದರೂ ಮಾಡಲೇ ಬೇಕು. ನಿಮ್ಮ ಅಣ್ಣ ಪೀಕೆಗೆ ನಮ್ಮ ಸ್ಥಿತಿ ಅರ್ಥವಾಗೋಲ್ವೇ ? ಅವರು ತಮ್ಮ ಶಕ್ತಿ ಬಳಸಬೇಕು. ನೀವು ಅಣ್ಣ ತಮ್ಮ ಏನಾದರೂ ಮಾಡಿ. ನನಗ್ಗೊತ್ತಿಲ್ಲ. ನನಗೆ ಮಾಲು ಬೇಕು, ಅಷ್ಟೇ.

ಭೂಮಿಗೌಡ ಮಹೇಶನನ್ನು ಮತ್ತೊಮ್ಮೆ ನಿಟ್ಟಿಸಿ ನೋಡಿದ.

# ಅಧ್ಯಾಯ : ಐದು

ಮಹೇಶ ಯಾರೆಂಬುದು ಭೂಮಿಗೌಡನಿಗೆ ಅರ್ಥವಾಗಿತ್ತು. ಆತನನ್ನು ಈ ಮೊದಲು ಎಲ್ಲೋ ನೋಡಿದ್ದೆ, ಅವನೊಡನೆ ಬೆರೆತಿದ್ದೀನಿ, ಪರಿಚಿತವಾದ ಮುಖ ಎಂದು ಅನ್ನಿಸುತ್ತಿದ್ದುದಕ್ಕೆ ಒಂದು ಆಕಾರ, ಸ್ಪಷ್ಟತೆ ದೊರಕಿದಂತಾಯಿತು. ಅವನ ಮುಖದಲ್ಲಿ ತನಗೆ ಪರಿಚಿತವಾದದ್ದು ಏನು? ಮುಖವೇ? ಕಣ್ಣುಗಳೇ? ಅಲ್ಲ. ಎಲ್ಲ ಬದಲಾಗಿರುತ್ತವೆ. ಹೌದು, ಅವನ ಕಿವಿಗಳು. ಅದೂ ಎರಡೂ ಕಿವಿಗಳಲ್ಲ. ಎಡ ಕಿವಿ. ಭೂಮಿಗೌಡನಿಗೆ ಅವನ ಬಾಲ್ಯದ ನೆನಪುಗಳು ನುಗ್ಗಿ ಬಂದವು.

ಎಷ್ಟು ವರ್ಷಗಳಾಗಿರಹಬಹುದು. ಸುಮಾರು ಇಪ್ಪತ್ತೈದು-ಇಪ್ಪಾತ್ತಾರು ? ಆಗ ತಾನು ನಾಲ್ಕನೆಯ ತರಗತಿಯಲ್ಲಿ ಓದುತ್ತಿದ್ದ ನೆನಪು. ತನ್ನ ಎದುರಿನ ಬೆಂಚಿನಲ್ಲಿ ಕೂರುತ್ತಿದ್ದ ಹುಡುಗ ಮಹೇಶ. ಅವನ ಎಡಕಿವಿಯ ಆಲೆ ಸ್ವಲ್ಪ ಸೀಳಾಗಿ ಎರಡುಭಾಗವಾಗಿತ್ತು. ಅವನ ಹಿಂದಿನ ಬೆಂಚಿನಲ್ಲಿ ಕುಳಿತ ಹುಡುಗರು ಯಾವಾಗಲೂ ಮೆಲುದನಿಯಲ್ಲಿ "ಚೋರ್‌ಕಿವಿ" "ಚೋರ್‌ಕಿವಿ" ಎಂದು ಆಡಿಕೊಳ್ಳುತ್ತಿದ್ದರು. ಆಗ ಮಹೇಶ ಕೋಪಗೊಳ್ಳುತ್ತಿದ್ದ. ಹಿಂದಿರುಗಿ ಎದ್ದು ನಿಂತು ಅವರನ್ನು ಅಶ್ಲೀಲ ಶಬ್ದಗಳಿಂದ ನಿಂದಿಸುತ್ತಿದ್ದ. ಹುಡುಗರಿಗೆ ಇದರಿಂದ ಇನ್ನೂ ಹೆಚ್ಚು ಮಜ ಸಿಗುತ್ತಿತ್ತು. ಅವನ ಕಿವಿಯ ವೈಕಲ್ಯತೆಯನ್ನು ಮತ್ತಷ್ಟು ರಾಗವಾದ ಧ್ವನಿಯಿಂದ ಆಡಿಕೊಳ್ಳಲು ಪ್ರಾರಂಭಿಸುತ್ತಿದ್ದರು. ಮಹೇಶನ ಕೋಪ ಮತ್ತಷ್ಟು ಏರುತ್ತಿತ್ತು.

ಭೂಮಿಗೌಡನ ಸೋದರತ್ತೆ ಮನೆ ಇದ್ದುದು ಅರಲಾಳ ಸಂದ್ರದಲ್ಲಿ. ತನ್ನೂರಿನಲ್ಲಿಯೇ ಮೂರನೆಯ ತರಗತಿಯವರೆಗೆ ಓದುತ್ತಿದ್ದ ಅವನನ್ನು ಅವನ ಸೋದರತ್ತೆ ತನ್ನ ಗಂಡನ ಮನೆಯಿದ್ದ ಅರಳಾಳು ಸಂದ್ರದಲ್ಲಿ ಶಾಲೆಗೆ ಸೇರಿಸಿದ್ದಳು. ಅವಳಿಗೆ ಗಂಡುಮಕ್ಕಳಿರಲಿಲ್ಲ. ತನ್ನ ಅಣ್ಣನ ಮಗನನ್ನು ಮನಸಾರೆ ಪ್ರೀತಿಸುತ್ತಿದ್ದ ಅವಳಿಗೆ ಇವನನ್ನು ತಮ್ಮ ಮನೆಯಲ್ಲೇ ಇಟ್ಟುಕೊಂಡು ಓದಿಸಿ, ಮನೆ ಅಳಿಯನನ್ನಾಗಿ ಮಾಡಿಕೊಳ್ಳಬೇಕೆಂಬುದು ಆಸೆಯಾಗಿತ್ತು. ಆದರೆ ಅವಳ ಆಸೆ ಈಡೇರುವುದು ಅಸಾಧ್ಯವಾಗಿತ್ತು. ಅವನು ನಾಲ್ಕನೆಯ ತರಗತಿಯಲ್ಲಿ ಓದುತ್ತಿದ್ದಾಗಲೇ ಮುಂಗಾರಿನ ಮಳೆಗಾಳಿ ಆರ್ಭಟಕ್ಕೆ ಬಿದ್ದ ಮರದಡಿಯಲ್ಲಿ ಸಿಲುಕಿ ಅವನ ಅತ್ತೆ ಅಸುನೀಗಿದ್ದಳು. ಇನ್ನು ಅತ್ತೆಯಿಲ್ಲದ ಮನೆಯಲ್ಲಿ ಅವನಿಗೆಲ್ಲಿಯ ಸ್ಥಾನ! ಮತ್ತೆ ಐದನೆಯ ತರಗತಿಗೆ ತನ್ನ ಊರಿಗೆ ಬಂದು ದಾಖಲಾಗಿದ್ದ.

ಅವನು ನಾಲ್ಕನೆ ತರಗತಿಯಲ್ಲಿ ವ್ಯಾಸಂಗ ಮಾಡುತ್ತಿದ್ದಾಗ ಈ ಮಹೇಶ ಅವನ ಸಹಪಾಠಿಯಾಗಿದ್ದ. ತೆಳ್ಳಗೆ, ಕೊಳಕು ಕೊಳಕಾದ ತಲೆ ಕೂದಲಿಂದ ಕೂಡಿದ ಮಹೇಶ ಪಕ್ಕದ ಊರಿನ ಸಿಂಗಲಾಜಿ ಪುರದವನು. ತಕ್ಕ ಮಟ್ಟಿಗೆ ಅನುಕೂಲಸ್ಥರ ಕುಟುಂಬ ಅವನದು. ಸಿಂಗಲಾಜಿಪುರದಲ್ಲಿ ಶಾಲೆಯಿದ್ದರೂ ಅವನು ಮತ್ತು ಅವನ ಅಣ್ಣ ಪೀಕೆ ಓದಲು ಅರಳಾಳು ಸಂದ್ರಕ್ಕೆ ಬರುತ್ತಿದ್ದರು. ಏಕೆಂದು ತಿಳಿದು ಕೊಳ್ಳುವ ಕುತೂಹಲ ಭೂಮಿಗೌಡನಿಗೆ ಅಂದು ಇರಲಿಲ್ಲ. ಹೀಗಾಗಿ ಇಂದೂ ಅವನಿಗೆ ಗೊತ್ತಿರಲಿಲ್ಲ.

## ಅಧ್ಯಾಯ : ಆರು

ಮಹೇಶನಿಗಿಂಥ ಮೂರು ವರ್ಷ ದೊಡ್ಡವನು, ಪೀಕೆ. ಅಂದು ಅವನನ್ನು ಪೀಕೆ ಎಂದು ಯಾರೂ ಕರೆಯುತ್ತಿರಲಿಲ್ಲ. ಅವನ ಹೆಸರು ಕೃಷ್ಣ. ಅವನು ತಂದೆಯ ಹೆಸರು ಪಾಪೇಗೌಡ. ಇಂಗ್ಲಿಷ್‌ನ ಪಿ. ಕೆ.- ಪಾಪೇಗೌಡ ಕೃಷ್ಣ- ಜನರು ಅವನು ರಾಜಕಾರಣಿಯಾದ ಮೇಲೆ ಪಿ. ಕೆ, ಪಿ. ಕೆ ಎಂದು ಕರೆದೂ ಕರೆದೂ ಪೀಕೆಯಾಗಿತ್ತು. ಅದಕ್ಕೆ ನಮ್ಮ ಮಾಧ್ಯಮದವರ ಕೊಡುಗೆಯೂ ಅಧಿಕವಾಗಿತ್ತು.

ಪೀಕೆ ಒಳ್ಳೆಯ ವಿದ್ಯಾರ್ಥಿಯಾಗಿರಲಿಲ್ಲ. ಬಾಲ್ಯದಿಂದಲೂ ಅವನ ವ್ಯಕ್ತಿತ್ವದಲ್ಲಿ ಒಂದು ಬಗೆಯ ಆಕ್ರಮಣಶೀಲತೆಯಿತ್ತು; ಇತರರನ್ನು ತನ್ನ ಮಾತಿನ ಮೋಡಿಗೆ ಸಿಲುಕಿಸುವ, ತನ್ನ ತೋಳ್ಬಲದಲ್ಲಿ ಮಣಿಸುವ, ಸ್ನೇಹಿತರನ್ನು ಸಂಘಟಿಸಿ ಆಗದವರ ಮೇಲೆ ಬೀಳುವ ಗುಣ ಅವನಿಗೆ ಸಹಜವಾಗಿತ್ತು. ಶಾಲೆ ಅವನ ಈ ಗುಣಗಳ ತರಬೇತಿಯ ತಾಣವಾಗಿತ್ತು. ಅವನು ಎಸ್. ಎಸ್. ಎಲ್. ಸಿ ಯನ್ನು ಮುಗಿಸಲೇ ಇಲ್ಲ. ಅದು ಅವನಿಗೆ ಬೇಕಾಗಿಯೂ ಇರಲಿಲ್ಲ.

ಅವನಿಗೆ ಬದುಕುವುದು ಹೇಗೆಂಬುದು ಗೊತ್ತಿತ್ತು. ಬಾಯಿಬಲ, ತೋಳ್ಬಲ, ಜನಬಲ ಅವನಿಗೆ ಹಣಸಂಪಾದನೆಯ ಮಾರ್ಗವಾಗಿತ್ತು. ಅವನಿಂದ ಕೆಲಸವಾಗುತ್ತದೆಯೆಂದು ತಿಳಿದ ಜನ ತಾವಾಗಿಯೇ ಅವನ ಬಳಿ ಬರುತ್ತಿದ್ದರು. ಅವರ ಅರಣ್ಯ ಒತ್ತುವರಿ ಜಮೀನು ಸಕ್ರಮವಾಗಬೇಕು; ಅವರ ಮೇಲೆ ಬಿದ್ದಿರುವ ವರದಕ್ಷಿಣೆ ಕೇಸು ಕ್ಷೀಣವಾಗಬೇಕು; ಕಾನೂನು ಬಾಹಿರವಾಗಿ ಕಟ್ಟಿರುವ ಕಟ್ಟಡಕ್ಕೆ ದಾಖಲೆಗಳು ಸೃಷ್ಟಿಯಾಗಬೇಕು- ಹೀಗೆ ಅನ್ಯಾಯದ ಬೆನ್ನು ಬಿದ್ದ ಜನ ಅವನ ಬೆನ್ನು ಹಿಂದೆ ನಿಂತರು. ಅವರ ಕೆಲಸವಾಗ ಬೇಕು-ಹಣ ಎಷ್ಟು ಖರ್ಚಾದರೂ ಪರವಾಗಿಲ್ಲ. ಮಾಡಿಸಿಕೊಡುವ ವ್ಯಕ್ತಿ ಬೇಕು. ಆ ವ್ಯಕ್ತಿ ಪೀಕೆಯ ರೂಪದಲ್ಲಿ ಅವರಿಗೆ ಸಿಕ್ಕಿದ್ದ.

ಮೊದ ಮೊದಲು ಜಾವಾ ಸೈಕಲ್ ಮೋಟಾರ್‌ನಲ್ಲಿ ಹಿಂದೆ ಒಬ್ಬ ಶಿಷ್ಯನನ್ನು ಕೂರಿಸಿಕೊಂಡು ಸುತ್ತಮುತ್ತ ಹಳ್ಳಿಗಳಲ್ಲಿ ಠಳಾಯಿಸುತ್ತಿದ್ದರೆ "ಕೃಷ್ಣ ಬಂದ" ಎಂದು ಜನ ಗುರುತಿಸತೊಡಗಿದರು. ಅದು ಬರುಬರುತ್ತಾ "ಕೃಷ್ಣಣ್ಣ" ಎಂದಾಯಿತು. ಅವನ ಶಕ್ತಿ, ಪ್ರಭಾವಗಳು ಬೆಳೆದಂತೆಲ್ಲಾ 'ಅಣ್ಣ'ನಾದ. ಪ್ರಾರಂಭದಲ್ಲಿ ಸಾತನೂರು, ಚನ್ನಪಟ್ಟಣ, ರಾಮನಗರ, ಕನಕಪುರಗಳಲ್ಲಿ ವಿಸ್ತರಿಸಿದ ಪೀಕೆಯ ಜಾವಾಗಾಡಿ ರಾಜಕಾರಣಿಗಳಿಗೆ ಅಂತರಂಗದ ಮನುಷ್ಯನನ್ನು ಸೃಷ್ಟಿಮಾಡಿತ್ತು.

ಪೀಕೆಗೆ ಜನರ ಮನಸ್ಸು ಅರ್ಥವಾಗಿತ್ತು. ಅವರ ಕಷ್ಟಸುಖದಲ್ಲಿ ಬಾಗಿಯಾದರೆ ಅವರು ತಪ್ಪುಗಳನ್ನು ಸಹಿಸಿಕೊಳ್ಳುತ್ತಾರೆ; ಅಹಂಕಾರವನ್ನು ಮರೆಯುತ್ತಾರೆ. "ನಮ್ಮ ಕೃಷ್ಣಣ್ಣನ ಬಾಯಿ ಸ್ವಲ್ಪ ದೊಡ್ಡದು, ಆದರೆ ಜನರ ಕಷ್ಟ ಸುಖಕ್ಕೆ ಆಗ್ತಾನೆ" ಎಂಬ ಅಭಿಪ್ರಾಯ ಅವನ ತಾಲ್ಲೂಕಿನಲ್ಲಿ ಪಸರಿಸಿತು. ಮದುವೆಯಾಗಲಿ ತಿಥಿಯಾಗಲಿ ಮತ್ತೊಂದಾಗಲೀ ಕರೆದಾಗ ತಪ್ಪದೆ ಹೋಗುತ್ತಿದ್ದ. ಆದರಲ್ಲೂ ಸಾವಿಗಂತೂ ತಪ್ಪಿಸುತ್ತಿರಲಿಲ್ಲ. ಸಾವಿನ ಮನೆಯಲ್ಲಿ ಅವನ ನಾಲ್ಕು

ಸಾಂತ್ವನದ ಮಾತುಗಳು ಪ್ರಭಾವ ಬೀರುತ್ತಿದ್ದವು. ಸತ್ತವರ ಮನೆಯವರು ಗರೀಬರಾದರೆ 'ಮಣ್ಣು' ಮಾಡಲೆಂದು ಸಾವಿರವೋ ಎರಡು ಸಾವಿರವೋ ಅವನಿಂದ ಸಂದಾಯವಾಗುತ್ತಿತ್ತು.

ನಮ್ಮ ಗ್ರಾಮೀಣ ಜನರು ಬುದ್ಧಿವಂತರೆಂದೂ ವಿವೇಚನಾ ಶಕ್ತಿ ಇರುವವರೆಂದೂ ವ್ಯಾಖ್ಯಾನಿಸುವುದು ತಪ್ಪಾಗುತ್ತದೆ. ಸಾಮಾನ್ಯವಾಗಿ ಅವರು ಅವಕಾಶವಾದಿಗಳು. ಗಾಳಿ ಬಂದ ಕಡೆ ತೂರಿಕೊಳ್ಳುವ ಪ್ರವೃತ್ತಿಯವರು. ಯಾರು ಹೇಗಿದ್ದರೇನು ? ನಮಗೇನು ತೊಂದರೆ ಯಾಗದಿದ್ದರೆ ಸರಿ ; ನಮ್ಮ ಕೆಲಸವಾದರೆ ಸರಿ; ನಮ್ಮ ಹುಳುಕು ಬಯಲಿಗೆ ಬಾರದಿದ್ದರೆ ಸರಿ- ಎಂಬಂಥ ಧೋರಣೆಯ ಜನವೇ ಜಾಸ್ತಿ. ಅಂಥ ಜನ ಶೋಷಣೆ, ಭ್ರಷ್ಟಾಚಾರ ಇತ್ಯಾದಿ ಅಂಶಗಳ ಬಗ್ಗೆ ಹೆಚ್ಚು ತಲೆ ಕೆಡಿಸಿಕೊಳ್ಳುವುದಿಲ್ಲ. "ಎಲ್ಲರೂ ಮಾಡ್ತಾರೆ, ಇವನೂ ಮಾಡ್ತಾನೆ, ತಪ್ಪೇನು ? ಜಗತ್ತೇ ಹೀಗಿರುವಾಗ ನಾವು ಮಾತ್ರ ಧರ್ಮರಾಯನಂತೆ ಇದ್ದರೇನು ಪ್ರಯೋಜನ?" ಎಂಬ ಸಿದ್ಧಾಂತದವರು. ಇಂಥ ಮನೋಧರ್ಮದವರು ಸದಾ ಹಣಬಲಕ್ಕೆ ಪ್ರಭಾವಕ್ಕೆ ಬೆಲೆ ನೀಡುತ್ತಾರೆ. ಇಂಥವರು ಬಹಳ ಮಂದಿ ಇರುವ ಕಾರಣ ಕೃಷ್ಣನಂಥವರು ಬದುಕಲು ಸಾಧ್ಯವಾಗುತ್ತದೆ.

ಜನರು ಕೆಲವೊಮ್ಮೆ ಹುಂಬರೂ ಹೌದು. ತಮ್ಮ ಮನೆಯ ಶುಭ ಕಾರ್ಯಗಳಿಗೆ, ಸಾವು ನೋವುಗಳಿಗೆ ರಾಜಕಾರಣಿಗಳು ಬಂದು ಹೋದರೆ, ಅದೇ ಒಂದು ಅದ್ಭುತ ಘನತೆಯೆಂದೂ, ಗೌರವದ ಚಿಹ್ನೆಯೆಂದೂ ಭಾವಿಸುವವರೂ ಬಹಳ ಮಂದಿ ಇದ್ದಾರೆ. ಅಂಥ ರಾಜಕಾರಣಿಗಳ ಬಗ್ಗೆ ನಿಷ್ಠರಾಗಿ ಅವರ ಪರ ಕೆಲಸಮಾಡುವ ಕಾಯಕವನ್ನು ಮುಂದುವರಿಸುತ್ತಾರೆ.

ಇಂಥ ಮನಸ್ಸುಗಳನ್ನು ಅರ್ಥ ಮಾಡಿಕೊಳ್ಳುವುದರಲ್ಲಿ ಯಶಸ್ವಿಯಾದ ಕೃಷ್ಣ ಆ ಸರಹದ್ದಿನ ಯುವನಾಯಕನಾದ. ಎಲ್ಲ ಪಕ್ಷಗಳ ರಾಜಕಾರಣಿಗಳು ಅವನ ಸಹಾಯವನ್ನು ಪಡೆಯಲು ಹಾತೊರೆಯುತ್ತಿದ್ದರು. ಇದು ಚುನಾವಣಾ ರಾಜಕೀಯ. ಓಟುಗಳು ಯಾರ ಬಳಿ ಇವೆಯೋ ಅವರೇ ಶಕ್ತಿವಂತರು. ಕೃಷ್ಣನ ಬಳಿ ಓಟುಗಳಿದ್ದವು. ಹೀಗಾಗಿ ಅವನು ಶಕ್ತಿವಂತ.

ಕೃಷ್ಣ ಶಕ್ತಿವಂತ ಎಂಬುದು ರಾಜಕಾರಣಿಗಳಿಗೂ ತಿಳಿಯಿತು. ಜನರಿಗೂ ತಿಳಿಯಿತು. ಜನ ತಮ್ಮ ಕೆಲಸಗಳಿಗಾಗಿ ಕೃಷ್ಣನ ಬಳಿ ಹೋಗುತ್ತಿದ್ದರು. ಪ್ರತಿಯಾಗಿ ಕೃಷ್ಣ ರಾಜಕಾರಣಿಗಳ ಬಳಿ ಹೋಗುತ್ತಿದ್ದ. ಕೆಲಸಗಳಾಗುತ್ತಿದ್ದವು. ಹೀಗಾಗಿ ಕೃಷ್ಣ ಆ ಭಾಗದ ಭರವಸೆಯ ಜನನಾಯಕನಾಗಿ ಬೆಳೆದ. ರಾಜಕಾರಣಿಗಳ ಸಖ್ಯದಿಂದಾಗಿ ಬೆಂಗಳೂರಿಗೆ ಹೋಗಿ ಬರುವುದು ಸಾಮಾನ್ಯವಾಯಿತು. ವಿಧಾನಸೌದದ ಮೆಟ್ಟಿಲುಗಳು ಸಲೀಸಾದವು; ಶಾಸಕರ ಭವನದ ರೂಮುಗಳಲ್ಲಿ ಬೈಠಕ್ಕುಗಳಾದವು. ವಿಧಾನ ಸೌಧದ ಮುಂದಿಗೆ ಕೃಷ್ಣ ಕೆಲಸಗಾರ ಎನ್ನಿಸಿತು.

ಅಧಿಕಾರಸ್ಥ ರಾಜಕಾರಣಿಗಳಾಗಲೀ ಅಥವಾ ಅಧಿಕಾರ ರಹಿತ ವಿರೋಧ ಪಕ್ಷದ ರಾಜಕಾರಣಿಗಳಾಗಲೀ ಕೆಲವು ಕೆಲಸಗಳನ್ನು ನೇರವಾಗಿ ಮಾಡಲಾಗುವುದಿಲ್ಲ. ಅಂಥ ಕೆಲಸಗಳನ್ನು ಕೃಷ್ಣನಂಥ ನಂಬಿಕಸ್ಥರ ಮೂಲಕ ಮಾಡಿಸಿಕೊಳ್ಳಬೇಕಾಗುತ್ತದೆ. ಬೆಂಗಳೂರಿನ ಸಹವಾಸದಿಂದಾಗಿ ಊರಿನ ಸರಹದ್ದಿನಲ್ಲಿ ಬರುತ್ತಿದ್ದ ಚಿಲ್ಲರೆ ಪಲ್ಲರೆ ಕಾಸಿಗಿಂತ ಅಧಿಕ ಹಣ ಕೈಯಲ್ಲಾಡಲು ಶುರುವಾಯಿತು. ಮಂತ್ರಿ ಮಹೋದಯರಿಗೆ, ಎಂಎಲ್‌ಎ, ಎಂಎಲ್‌ಸಿ ಗಳಿಗೆ ಅಂತರಂಗದ

ಕೆಲಸವಾಗುವಾಗ ಹಣ ಮುಖ್ಯವಾಗುತ್ತಿರಲಿಲ್ಲ. ಕೆಲಸಕ್ಕೆ ತಗಲುವ ಖರ್ಚಿಗಿಂತ ಒಂದೆರಡು ಪಟ್ಟು ಅಧಿಕವಾಗಿ ಹೇಳಿದರೂ ನಡೆಯುತ್ತಿತ್ತು.

ಕೃಷ್ಣ ಊರಿನಲ್ಲಿ ಜಮೀನು ಖರೀದಿಸಿದ; ತೋಟ ತುಡಿಗೆ ಮಾಡಿದ. ತೋಟದಲ್ಲಿ ಭರ್ಜರಿ ಮನೆ ಕಟ್ಟಿಸಿದ. ಆ ಮನೆಯಲ್ಲಿ ಬೆಂಗಳೂರಿನ ಎಲ್ಲಾ ಸೌಕರ್ಯಗಳು ಇರುವಂತೆ ವ್ಯವಸ್ಥೆ ಮಾಡಿದ. ಇವನ ತೋಟದ ಮನೆಯಾದ ಮೇಲೆ ಬೆಂಗಳೂರಿನಿಂದ ರಾಜಕಾರಣಿಗಳು, ಅಧಿಕಾರಿಗಳು ಇಲ್ಲಿ ರಾತ್ರಿ ಬಂದು ತಂಗುವುದು; ಬೆಳಿಗ್ಗೆ ಎದ್ದು ಹೋಗುವುದು ಮಾಮೂಲಾಯ್ತು. ರಾತ್ರಿಯಾದ ನಂತರ ಕಾರುಗಳು ಬರುವುದು, ಸಂಗೀತ ಕೇಳುವುದು, ಕೇಕೆಯಾಡುವುದು ಹಳ್ಳಿಗರಿಗೆ ಸಾಮಾನ್ಯವಾಗಿತ್ತು. ಊರಾಚೆ ಎರಡುಮೂರು ಕಿಲೋ ಮೀಟರ್ ದೂರವಿದ್ದ ತೋಟಕ್ಕೆ ಬೇರೆಯೇ ಆದ ಮಾರ್ಗವಿತ್ತು. ಆ ಮಾರ್ಗದ ಮೂಲಕವೇ ಕಾರುಗಳ ಚಲನವಲನವಿತ್ತು. ಇಂಥ ವ್ಯವಹಾರವನ್ನು ಹತ್ತಿರದಿಂದ ನೋಡುವುದಾಗಲೀ, ಅದನ್ನು ಪ್ರಶ್ನಿಸುವುದಾಗಲೀ ಹಳ್ಳಿಗರಿಗೆ ಸಾಧ್ಯವಿರಲಿಲ್ಲ. ಕೃಷ್ಣ ಬೆಂಗಳೂರಿನ ಸಂಬಂಧ ಹೆಚ್ಚಿಸಿಕೊಂಡ ಮೇಲೂ ಸುತ್ತ ಮುತ್ತಲ ಹಳ್ಳಿಗಳ ಸಂಪರ್ಕವನ್ನು ಕಡಿದು ಕೊಂಡಿರಲಿಲ್ಲ. ಕೆಲಸ ಕಾರ್ಯಗಳನ್ನು ಮಾಡಿಕೊಡಲು ತನ್ನ ಕಡೆಯ ಜನರನ್ನಿಟ್ಟಿದ್ದ.

ಆ ಜನರ ಮುಂದಾಳಾಗಿ ಮಹೇಶ ಕಾರ್ಯನಿರ್ವಹಿಸುತ್ತಿದ್ದ. ಮಹೇಶ ಮತ್ತು ಕೃಷ್ಣರಲ್ಲಿ ಅವರಪ್ಪ ಪಾಪೇಗೌಡನ ರಕ್ತವೇ ಹರಿಯುತ್ತಿದ್ದರೂ ಗುಣದಲ್ಲಿ ಅಲ್ಪ ಸ್ವಲ್ಪ ವ್ಯತ್ಯಾಸಗಳಿದ್ದವು. ಜನ ಸಂಘಟನೆಯಲ್ಲಿ ಹಿಂದೆ ಬೀಳದಿದ್ದರೂ ತನ್ನ ದೌರ್ಬಲ್ಯಗಳಿಂದಾಗಿ ಆಗಾಗ್ಗೆ ಜನರ ಬಾಯಿಗೆ ಬೀಳುತ್ತಿದ್ದ. ಅಣ್ಣನ ಸಂಪರ್ಕ ಬಲದಿಂದಾಗಿ, ಪ್ರಭಾವದಿಂದಾಗಿ ತಾಲ್ಲೂಕು ಕೇಂದ್ರಗಳಲ್ಲಿ ಅಧಿಕಾರಿಗಳ ಬಳಿ ಕೆಲಸ ಕಾರ್ಯಗಳಾಗುತ್ತಿದ್ದವು. ಅಧಿಕಾರಿಗಳು ತಮ್ಮ ಮೆಹರ್ಬಾನಿಗೆ ತೋಟದ ಮನೆಯನ್ನು ಬಳಸಿಕೊಳ್ಳುತ್ತಿದ್ದರು. ಅಣ್ಣ ಬೆಂಗಳೂರಿನಿಂದ ಬರುವುದು ಕಡಿಮೆಯಾದಂತೆಲ್ಲಾ ಸುತ್ತ ಸರಹದ್ದಿನಲ್ಲಿ ಮಹೇಶನೇ ಮುಖ್ಯನಾದ. ಅಣ್ಣನ ಹೆಸರಿನಲ್ಲಿ ಸ್ಥಳೀಯವಾಗಿ ಕೆಲಸ ಮಾಡುತ್ತಿದ್ದ; ತನಗೆ ಎಟುಕದ ಕೆಲಸವನ್ನು ಅಣ್ಣನಿಂದ ಮಾಡಿಸುತ್ತಿದ್ದ.

ಈಗ ಕೃಷ್ಣನ ಕುಟುಂಬದಲ್ಲಿ ಫೋನು, ಎರಡು ಮೂರು ಬೈಕುಗಳು, ಎರಡು ಕಾರುಗಳು ಇದ್ದವು. ಪಾಪೇಗೌಡನು ತನ್ನ ಇಬ್ಬರೂ ಹೆಣ್ಣುಮಕ್ಕಳನ್ನು ಬೆಂಗಳೂರಿನ ಅಧಿಕಾರಿಗಳಿಗೆ ಮದುವೆ ಮಾಡಿಕೊಟ್ಟ. ಆ ಸಂಬಂಧಗಳನ್ನು ಕೃಷ್ಣನೆ ಹುಡುಕಿ ವ್ಯವಸ್ಥೆ ಮಾಡಿದ್ದನೆಂದು ಪ್ರತ್ಯೇಕವಾಗಿ ಹೇಳಬೇಕಿಲ್ಲ, ಮದುವೆಗಳು ಆದ್ದೂರಿಯಾಗಿ ಚನ್ನಪಟ್ಟಣದಲ್ಲಿ ನಡೆದವು. ವರದಕ್ಷಿಣೆ, ವರೋಪಚಾರ, ಹೆಣ್ಣಿನ ಮೈ ಮೇಲಿನ ಬೆಳ್ಳಿ ಬಂಗಾರಕ್ಕೆ ಕೊರತೆಯಿರಲಿಲ್ಲ. ಅಷ್ಟೇನು ಓದದ ತನ್ನ ಮಕ್ಕಳು ಚೆನ್ನಾಗಿ ಓದಿದವರನ್ನೇ ಕೆಲಸಕ್ಕಿಟ್ಟುಕೊಳ್ಳುವಂಥ ಶಕ್ತಿಯನ್ನು ಪಡೆದಿದ್ದಾರೆಂದು ಪಾಪೇಗೌಡ ಸರೀಕರ ಎದುರು ಹೇಳಿಕೊಂಡು ಬೀಗುತ್ತಿದ್ದ. ಆದರೆ ತನ್ನ ಎರಡನೆಯ ಮಗನ ನಡತೆ ಚೆನ್ನಾಗಿಲ್ಲವೆಂದು ಅರ್ಥವಾಗಲು ತಡವಾಗಲಿಲ್ಲ. ಜನರು ನೇರವಾಗಿ ಪಾಪೇಗೌಡನೆದುರು ಮಗನ ಪ್ರತಾಪವನ್ನು ಹೇಳಲು ಹಿಂಜರಿದರೂ, ಅವರ ಗುಸು ಗುಸು ಕಿವಿಗೆ ಬೀಳದಿರಲು ಸಾಧ್ಯವಿರಲಿಲ್ಲ. ಅವನು ತೋಟದ ಮನೆ ಕಟ್ಟಿಸಿದ ಮೇಲೆ ಮನೆಯಲ್ಲಿ

ಮಲಗುವುದನ್ನು ನಿಲ್ಲಿಸಿದ್ದ. ರಾತ್ರಿ ಊಟಕ್ಕೆ ಬಂದರೆ ಬಂದ, ಇಲ್ಲದಿದ್ದರೆ ಇಲ್ಲ. ಕೆಲವೊಮ್ಮೆ ಎರಡು ಮೂರು ದಿನಕ್ಕೆ ಮನಗೆ ಮುಖ ತೋರಿಸುತ್ತಿದ್ದ. "ಎಲ್ಲಿ ಹಾಳಾಗಿ ಹೋದ್ದ?" ಎಂದು ಕೇಳಿದರೆ ಸರಿಯಾಗಿ ಉತ್ತರವಿಲ್ಲ. ಅಪ್ಪನ ಗೊಣಗಾಟ ಜಾಸ್ತಿಯಾಗ ತೊಡಗಿದಾಗ ಮಹೇಶ ಅವನ ಅವ್ವನ ಬಳಿ "ಅವ್ವ, ಅಪ್ಪನಿಗೆ ಹೇಳು. ಅವನಿಗೆ ವ್ಯವಹಾರ ಅರ್ಥವಾಗೋಲ್ಲ. ಅವ್ನಂಗೆ ನಾವೂನು ಹೊಲ ಕೆರ್‍ಕಂಡು ಇದ್ದಿದ್ದರೆ ಹಿಂಗೆ ಮೇಲಕ್ ಬರೋಕೆ ಆಯ್ತಿತ್ತೆ ? ಹೊರ್‍ಗೆ ನಮ್ಗೆ ನೂರೆಂಟು ಕೆಲ್ಸ ಇರ್‍ತವೆ. ಸುಮ್ನೆ ಗೊಣಗದೆ ತೆಪ್ಪಗಿರೋಕೆ ಹೇಳು" ಎಂದು ತಾಕೀತು ಮಾಡಿದ.

ಹೆಂಡತಿಯ ಬಾಯಿಂದ ಮಗನ ಮಾತನ್ನು ಕೇಳಿದ ಪಾಪೇಗೌಡ ಸುಮ್ಮನೆ ಕೂರುವ ಮನಸ್ಥಿತಿಯಲ್ಲಿರಲಿಲ್ಲ. ಕುಡಿತ, ಕಾರಿನಲ್ಲಿ ಕತ್ತಲಾದ ಮೇಲೆ ಬಂದು ಹೋಗುವ ಹೆಣ್ಣುಗಳು ಅವನ ಚಿಂತೆಗೆ ಕಾರಣವಾಗಿದ್ದವು. ಇವನಿಗೂ ಇಪ್ಪತ್ತರ ಮೇಲಾಯಿತು. ಒಂದು ಮದುವೆ ಅಂತ ಮಾಡಿದರೆ ಸರಿಹೋಗ್ತಾನೆ. ಹೆಂಡ್ತಿ ಮಕ್ಕಳು ಅಂತ ಜವಾಬ್ದಾರಿ ಬರ್‍ತದೆ. ಹೀಗೆಲ್ಲಾ ಚಿಂತೆ ಮಾಡಿದ ಪಾಪೇಗೌಡ ಗೊಂದಲದಲ್ಲಿ ಸಿಲುಕಿದ.

ಅವನ ಗೊಂದಲಕ್ಕೆ ಕಾರಣ ಮತ್ತೆ ಕೃಷ್ಣನೇ ಆಗಿದ್ದ. ವಾರಕ್ಕೆ ಒಮ್ಮೆಯೋ ಹದಿನೈದು ದಿನಕ್ಕೆ ಒಮ್ಮೆಯೋ ಕಾರಿನಲ್ಲಿ ಬಂದು ಹೋಗುತ್ತಿದ್ದ ಕೃಷ್ಣ ಈಗ ಮೊದಲಿನ ಕೃಷ್ಣನಾಗಿರಲಿಲ್ಲ. ಆದರೆ ಕೃಷ್ಣನಲ್ಲಿ ಸಂಬಂಧಗಳ ಬಗ್ಗೆ ಗೌರವವಿತ್ತು. ಬೆಂಗಳೂರಿನಿಂದ ಅವನು ನೇರವಾಗಿ ಮನೆಗೆ ಬರುತ್ತಿದ್ದ. ಮೊದಲು ಅಪ್ಪ ಅವ್ವನನ್ನು ವಿಚಾರಿಸುತ್ತಿದ್ದ. ಬಂಧುಬಳಗದ ಕಷ್ಟಸುಖ ಕೇಳುತ್ತಿದ್ದ. ಅವರ ಕಷ್ಟಗಳಿಗೆ ಸೂಕ್ತ ಸಹಾಯ ಅಥವಾ ಪರಿಹಾರ ದೊರಕಿಸಿಕೊಡುತ್ತಿದ್ದ. ಅನಂತರ ತೋಟ ತುಡಿಕೆಗಳ ಕಡೆ ಹೋಗಿ, ಆಗಿರುವ ಕೆಲಸವನ್ನು ನೋಡಿ ತನ್ನ ಅಭಿಪ್ರಾಯವನ್ನು ತಿಳಿಸಿ, ಆಗಬೇಕಾಗಿರುವ ಕೆಲಸದ ಬಗ್ಗೆ ತಾಕೀತು ಮಾಡಿ ಸಂಜೆಯ ನಂತರ ವಾಪಸ್ಸು ಬೆಂಗಳೂರಿಗೆ ತೆರಳುತ್ತಿದ್ದ.

ಕೃಷ್ಣನಿಗೆ ಇಪ್ಪತ್ತೈದರ ಮೇಲೆ ವಯಸ್ಸಾಗಿತ್ತು. ಅವನಿಗೆ ಮದುವೆ ಯಾಗದೆ ಮಹೇಶನಿಗೆ ಹೇಗೆ ಮಾಡುವುದು ? ಮಹೇಶನ ವಿಷಯವನ್ನು ಮನೆಯ ಯಜಮಾನನಂತಿರುವ ಕೃಷ್ಣನ ಜೊತೆ ಚರ್ಚಿಸುವುದು ಹೇಗೆ ? ಅವನು ಮನೆಗೆ ಬಂದಾಗಲೆಲ್ಲಾ ವಿಷಯ ಮಾತನಾಡಲು ಪ್ರಯತ್ನಿಸುತ್ತಿದ್ದ. ಆದರೆ ಮಾತು ಸಾಧ್ಯವಾಗುತ್ತಿರಲಿಲ್ಲ. ಬೆಂಗಳೂರಿನಿಂದ ಬರುವಾಗ ಯಾರ‍್ಯಾರೋ ದೊಡ್ಡವರು ಅವನ ಜೊತೆ ಬರುತ್ತಿದ್ದರು. ಅಲ್ಲದೆ ಕೃಷ್ಣ ಊರಿಗೆ ಬರುವ ವಿಷಯ ತಿಳಿದ ಊರಿನ, ಪರಊರಿನ ಜನ ತಮ್ಮ ನಾನಾ ಸಮಸ್ಯೆಗಳನ್ನೆತ್ತಿಕೊಂಡು ಮನೆಗೆ ಬರುತ್ತಿದ್ದರು. ಇಂಥ ಹತ್ತಾರು ಜನ ಅವನ ಸುತ್ತ ಮುತ್ತ ಸದಾ ಇರುತ್ತಿದ್ದರು. ಅವರೆದುರು ಮಹೇಶನ ವಿಷಯ ಮಾತಾನಾಡುವುದು ಹೇಗೆ ? ಪಾಪೇಗೌಡನಿಗೆ ಇದೇ ಸಮಸ್ಯೆಯಾಯಿತು.

ಹೀಗೆ ಒಂದು ದಿನ ಬೆಂಗಳೂರಿನಿಂದ ಬಂದ ಕೃಷ್ಣ ಊರಿನ ಹತ್ತಾರು ಯುವ ಮುಖಂಡರ ಜೊತೆ ಮುಂದೆ ಬರುವ ಗ್ರಾಮ ಪಂಚಾಯ್ತಿ ಚುನಾವಣೆ ಬಗ್ಗೆ ಮಾತನಾಡುತ್ತಿರುವಾಗ ಅವನ ಅವ್ವ ಎಲ್ಲರಿಗೂ ಟೀ ನೀಡಿ "ಮಗಾ ಕೃಷ್ಣ, ಸ್ವಲ್ಪ ಒಳಕ್ ಬತ್ತೀಯಾ. ನಿನ್ ಜೊತೆ ವಸಿ

ಮಾತಾಡ್ ಬೇಕು" ಎಂದಳು. ಕೃಷ್ಣ ಅವ್ವನನ್ನು ನೋಡಿದ. ಅವನಿಗೆ ಏನನ್ನಿಸಿತೋ ಏನೋ ತಕ್ಷಣ ಎದ್ದು ನಿಂತು "ಒಂದ್ನಿಮಿಷ, ನಮ್ಮವ್ವ ಏನೋ ಮಾತಾಡ್ಬೇಕಂತೆ. ಬಂದೆ" ಎಂದು ಅವ್ವನ ಹಿಂದೆ ಅಡುಗೆ ಮನೆವರೆಗೂ ಹೋದ.

ಅಡುಗೆ ಮನೆಯಲ್ಲಿದ್ದ ಸ್ಟೂಲಿನ ಮೇಲೆ ಅವನು ಕುಳಿತ. ಅವ್ವ ನಿಂತೇ ಇದ್ದಳು. ಸ್ವಲ್ಪ ಹೊತ್ತು ಮೌನ. ಕೃಷ್ಣನೇ ಬಾಯಿ ಬಿಟ್ಟು ಕೇಳಿದ : "ಏನವ್ವ ವಿಷಯ?"

ಅವ್ವ ಮಹೇಶನ ಇತ್ತೀಚಿನ ನಡತೆಯ ಬಗ್ಗೆ ವಿವರಿಸಿದಳು. ಗಂಡನಿಗಾಗುತ್ತಿರುವ ಮನಸ್ಸಿನ ತೊಂದರೆಯನ್ನು ಹೇಳಿದಳು. "ಈ ವಿಚಾರನ ನಿನ್ನತ್ರ ಹೇಳಿ, ಇದ್ಕೊಂದು ಕೊನೆ ಹೇಳ್ಬೇಕು ಅಂತ ನಿಮ್ಮಪ್ಪ ನಿನ್ ಜೊತೆ ಮಾತನಾಡಲು ಎರಡ್ ಮೂರ್ ತಿಂಗಳಿಂದ ನೋಡ್ತಾ ಅವ್ರೆ. ನೀನು ಎಲ್ಲಿ ಒಂಟಿ ಸಿಕ್ತಿ ಹೇಳಪ್ಪ ? ಸುತ್ತ ಸದಾ ಜನ, ಜನ" - ಎಂದ ಅವ್ವನ ಮಾತನ್ನು ಆಲಿಸಿದ ಕೃಷ್ಣ ಸ್ವಲ್ಪ ಹೊತ್ತು ಮೌನವಾದ.

ವಿಸ್ತಾರವಾದ ಮನೆಯನ್ನು ಕೂತಲ್ಲಿಯೇ ಕಲ್ಪಿಸಿಕೊಂಡ. ಎರಡು ವರ್ಷಗಳ ಹಿಂದೆ ಊರೊಳಗಿದ್ದ ಹಳೆಯ ನಾಡ ಹೆಂಚಿನ ಮನೆಯನ್ನು ತೊರೆದು, ಊರ ಮುಖ್ಯ ರಸ್ತೆಗೆ ಹೊಂದಿಕೊಂಡಂತೆ ಇರುವ ಜಾಗವನ್ನು ಖರೀದಿಸಿ, ಇಪ್ಪತ್ತೈದು ಚದರದ ಆರ್ ಸಿ ಸಿ ಮನೆಯನ್ನು ಕಟ್ಟಿಸಿದ್ದ. ನಗರದವರು ನಾಚುವಂತೆ ತೇಗ ಬೀಟೆ ಮರಗಳನ್ನು ಬಳಸಿದ್ದ. ನೆಲಕ್ಕೆ ಬೆಂಗಳೂರಿನಿಂದ ಮಾರ್ಬಲ್ ಕಲ್ಲುಗಳನ್ನು ತರಿಸಿ ವೈಭವೀಕರಿಸಿದ್ದ. ಒಂದು ದೊಡ್ಡ ಹಾಲು, ವಿಸ್ತಾರವಾದ ಮೂರು ರೂಮುಗಳು, ಅಡುಗೆ ಮನೆ, ದೇವರ ಮನೆ ಇತ್ಯಾದಿಗಳು ಹಳ್ಳಿಗರಿಗೆ ವಿಶೇಷವೆನ್ನಿಸಿದ್ದವು. ಮೊದಲ ಅಂತಸ್ತಿನಲ್ಲಿ ಒಂದು ಬಾಲ್ಕನಿ, ಅದಕ್ಕೆ ಹೊಂದಿಕೊಂಡಂತೆ ಮತ್ತೆ ಎರಡು ರೂಮುಗಳು.

ಈ ಮನೆಗೆ ಹೊಂದಿಕೊಂಡಂತೆ ದನಕರುಗಳನ್ನು ಕಟ್ಟಲು ಒಂದು ಚಿಕ್ಕ ಹೆಂಚಿನ ಮನೆಯನ್ನು ಹಿಂಭಾಗದಲ್ಲಿ ಕಟ್ಟಲಾಗಿತ್ತು. ಬೆಂಗಳೂರಿನ ತನ್ನ ರಾಜಕಾರಣಿ ಮಿತ್ರರ ಮನೆಗಳನ್ನು ನೋಡಿ, ಅಭಿರುಚಿಯನ್ನು ರೂಪಿಸಿಕೊಂಡಿದ್ದ ಕೃಷ್ಣ ಬೆಂಗಳೂರಿನ ನರ್ಸರಿಗಳಿಂದ ವಿವಿಧ ಬಗೆಯ ಅಲಂಕಾರಿಕ ಸಸ್ಯಗಳನ್ನು, ಹೂಗಿಡಗಳನ್ನು ಕುಂಡಗಳಲ್ಲಿ ತಂದು ತನ್ನ ಮನೆಯನ್ನು ಅಲಂಕರಿಸಿದ್ದ. ಮನೆಗೆ ವಿಸ್ತಾರವಾದ ಕಾಂಪೌಂಡ್‌ಅನ್ನು ಹಾಕಲಾಗಿತ್ತು. ಮನೆಯ ಮುಂಭಾಗದಲ್ಲಿ ಸುಮಾರು ಮೂವತ್ತು ಅಡಿಗಳ ಹಸಿರು ಲಾನ್ ಅನ್ನು ಬೆಳಸಲಾಗಿತ್ತು. ಮಧ್ಯೆ ಮಧ್ಯೆ ಅಲಂಕಾರಿಕ ಗಿಡಗಳು, ಹೂವಿನ ಗಿಡಗಳು ಬೆಳೆದಿದ್ದವು.

ಗಿಡಗಳಿಗೆ ಗೊಬ್ಬರ ನೀರು ಹಾಕಲು ಆಳನ್ನು ಗೊತ್ತು ಮಾಡಿದ್ದ. ದನಕರುಗಳನ್ನು ನೋಡಿಕೊಳ್ಳಲು ಜನರಿದ್ದರು; ಒಂದು ಕುಟುಂಬ ಆ ಮನೆಯಲ್ಲೇ ಇತ್ತು. ದನಕರುಗಳನ್ನು ನೋಡಿಕೊಳ್ಳುತ್ತಿದ್ದ ಬೊಮ್ಮೇಗೌಡನ ಹೆಂಡತಿ ಲಕ್ಷ್ಮಿ ಮನೆಗೆಲಸದಲ್ಲಿ ಅವ್ವನಿಗೆ ಸಹಾಯ ಮಾಡುತ್ತಿದ್ದಳು. ಮನೆ ಗುಡಿಸುವುದು, ಒರೆಸುವುದು, ಪಾತ್ರೆ ಪಗಡೆ ತೊಳೆಯುವುದು, ಬಟ್ಟೆ ಹೊಗೆಯುವುದು -ಇಂಥ ಕೆಲಸಗಳು ಹೇಗೋ ಸಾಗುತ್ತಿದ್ದವು.

ಆದರೆ ಅಡುಗೆಯನ್ನು ಮಾತ್ರ ಅವ್ವನೇ ಮಾಡುತ್ತಿದ್ದಳು. "ಅವ್ವ, ಅಡುಗೆಗೆ ಆಳೊಂದನ್ನು

ಗೊತ್ತು ಮಾಡಿಕೋ. ಬೆಂಗಳೂರಲ್ಲಿ ಶ್ರೀಮಂತರ ಮನೆಗಳಲ್ಲಿ ಅಡುಗೆಯವರೇ ಬೇರೆ ಇರ್ತಾರೆ. ಈಗ ಇಲ್ಲಿಗೆ ಬರೋದು ಹೋಗೋರು ಜಾಸ್ತಿ. ಅವರಿಗೆಲ್ಲಾ ನೀನೇ ಬೇಯಿಸಿ ಹಾಕೋದು ಕಷ್ಟ" ಎಂದು ಅವನು ಹೇಳಿದಾಗ ಅವ್ವ ಜಗಳಕ್ಕೆ ಬಂದಿದ್ದಳು. "ಅದೆಲ್ಲಾ ಇಲ್ಲಿ ಆಗಾಕಿಲ್ಲ ಕಣ್ ಮಗಾ, ಅಡುಗೆ ಮನೆಗೆ ಯಾರ್ ಯಾರ್ನೋ ಸೇರಿಸಿಕೊಳ್ಳೋಕಾಯ್ತದ ? ನಾವು ತಿನ್ನೋ ಅನ್ನ ನಾವೇ ಬೇಯಿಸಿ ತಿನ್ನಬೇಕು" ಎಂದಿದ್ದಳು.

ಕೃಷ್ಣ ಮಹೇಶನ ಸಮಸ್ಯೆಯ ಬಗ್ಗೆ ಅಪ್ಪನ ಜೊತೆ ಮಾತಾನಾಡಲು ನಿರ್ಧರಿಸಿದ. "ಆಯ್ತು, ಇವೊತ್ತು ರಾತ್ರಿ ಇಲ್ಲೇ ಇದ್ದು ಅಪ್ಪನ ಜೊತೆ ಮಾತಾಡ್ತೀನಿ" ಎಂದ ಅವ್ವನಿಗೆ ಹೇಳಿದ.

ಅಡುಗೆ ಮನೆಯಿಂದ ಹೊರಬಂದವನು ಜನರ ಮಧ್ಯೆ ಸೇರಿ ಕೊಂಡ. ಬರುವವರು ಬರುತ್ತಿದ್ದರು, ಹೋಗುವವರು ಹೋಗುತ್ತಿದ್ದರು. ಸಂಜೆಯಾಗುತ್ತಲೇ ತೋಟದ ಮನೆಯ ಕಡೆ ಬೈಕ್ ಹತ್ತಿ ಹೊರಟ. ಸುಮಾರು ಐವತ್ತು ಎಕರೆ ತೋಟ. ತೆಂಗು, ಸಪೋಟ, ದಾಳಿಂಬೆ, ಸೀಬೆ. ತೆಂಗಿಗೆ ಆಗಲೇ ಎಂಟು ವರ್ಷಗಳಾಗಿವೆ. ಅಲ್ಲೊಂದು ಇಲ್ಲೊಂದು ಫಲ ಬಿಡುತ್ತಿವೆ. ಅವುಗಳ ಜೊತೆಯಲ್ಲೇ ಹಾಕಿದ್ದ ಸಪೋಟ, ದಾಳಿಂಬೆ, ಸೀಬೆ, ಲಿಂಬೆಗಳು ಆಗಲೇ ಫಲಬಿಡುತ್ತಿದ್ದವು. ತೋಟದ ಎಡಭಾಗದಲ್ಲಿ ಹರಿಯುತ್ತಿದ್ದ ಹಳ್ಳ ಸದಾ ನೀರಾಡುತ್ತಿತ್ತು. ತೋಟದ ಎರಡು ಮೂಲೆಗಳಲ್ಲಿ ಬೋರ್‌ವೆಲ್ ಹಾಕಿ, ಯಥೇಚ್ಛವಾಗಿ ನೀರು ಪಡೆದಿದ್ದ. ಕಾಲಕಾಲಕ್ಕೆ ಸರಿಯಾದ ಆರೈಕೆ ಮಾಡುತ್ತಿದ್ದುದರಿಂದ ತೋಟ ನೋಡುವವರ ಕಣ್ಣು ಕುಕ್ಕುವಂತೆ ಬೆಳೆದಿತ್ತು. ತೋಟಕ್ಕೆ ತಂತಿ ಬೇಲಿ ಹಾಕಲಾಗಿತ್ತು. ಆ ತಂತಿ ಬೇಲಿಗೆ ಅನೇಕ ಬಗೆಯ ರಕ್ಷಾಗಿಡಗಳನ್ನು ನೆಟ್ಟು ಭದ್ರಗೊಳಿಸಲಾಗಿತ್ತು. ತೋಟದ ಮುಖ್ಯ ದ್ವಾರದಲ್ಲಿ 'ಕೃಷ್ಣ ಫಾರಂ' ಎಂಬ ಬೋರ್ಡಿತ್ತು. ಮುಖ್ಯ ದ್ವಾರದಿಂದ ಸುಮಾರು ಒಂದು ಕಿಲೋಮೀಟರ್ ಒಳಗೆ ತೋಟದ ಮನೆಯಿತ್ತು.

ತೋಟದ ಮನೆಯ ಸುತ್ತ ಲಾನ್ ಬೆಳೆಸಲಾಗಿತ್ತು. ಅಲ್ಲಯೂ ಅಲಂಕಾರಿಕ ಗಿಡಗಳಿದ್ದವು. ಮನೆ ವಿಸ್ತಾರವಾಗಿತ್ತು: ವಿಸ್ತಾರವಾದ ಅಟ್ಯಾಚ್ ಬಾತ್ ರೂಂ ಇರುವ ಐದಾರು ರೂಮುಗಳು ಕೆಳ ಅಂತಸ್ತಿನಲ್ಲಿದರೆ, ಮೇಲಂತಸ್ತಿನಲ್ಲಿ ಬಾಲ್ಕನಿ, ಹಾಲ್ ಮತ್ತೆ ಎರಡು ರೂಮುಗಳು. ಬಾತ್ ರೂಮ್‌ಗಳಲ್ಲಿ, ಟೈಲ್ಸ್‌ಗಳನ್ನು ಬಳಸಿ ಸಿದ್ದಗೊಳಿಸಿದ್ದ ಒಳಭಾಗವಿತ್ತು. ಬಿಸಿ ನೀರಿಗೆ ಗೀಸರ್ ಅನ್ನು ಅಳವಡಿಸಲಾಗಿತ್ತು. ಕೃಷ್ಣ ಮನೆಯ ಹೊರಗೆ ತನ್ನ ಬೈಕನ್ನು ನಿಲ್ಲಿಸಿದ. ಮಹೇಶ ಇರಬೇಕಿತ್ತಲ್ಲ. ಇಷ್ಟು ಹೊತ್ತಿನಲ್ಲಿ ಎಲ್ಲಿ ಹೋದ ? ಎಂದು ಅಂದುಕೊಳ್ಳುತ್ತಿರುವಷ್ಟರಲ್ಲಿ ಕೆಂಚ ಬಿರಬಿರನೆ ಬಂದ. ಅವನು ಆ ಮನೆಯನ್ನು ನೋಡಿಕೊಳ್ಳುತ್ತಿದ್ದ ನಂಬಿಗಸ್ಥ ಆಳು. ಸುಮಾರು ನಲ್ವತ್ತೈದರ ಪ್ರಾಯ. ಅವನಿಗೊಂದು ಹೆಂಚಿನ ಮನೆಯನ್ನು ಈ ಮನೆಗೆ ಕೂಗಳತೆಯಲ್ಲೇ ಕಟ್ಟಿಸಿ ಕೊಡಲಾಗಿತ್ತು. ಒಂದು ರೀತಿ ಅವನು ಮನೆಯ ಮೇಟಿಯ ಕೆಲಸವನ್ನು ತೋಟದ ಮೇಸ್ತ್ರಿ ಕೆಲಸವನ್ನು ಮಾಡುತ್ತಿದ್ದ. ಕೃಷ್ಣನಲ್ಲಿ ಅವನದು ಅಚಲ ನಿಷ್ಠೆ. ಬಡತನದಲ್ಲಿ ಬೇಯುತ್ತಿದ್ದ ಅವನ ಸಂಸಾರವನ್ನು ತನ್ನ ಮನೆಯಲ್ಲಿಟ್ಟುಕೊಂಡದ್ದೂ ಅಲ್ಲದೆ, ಎಸ್ ಎಸ್ ಎಲ್ ಸಿ ಪಾಸು ಮಾಡಿದ್ದ ಅವನ ಮಗ ವೆಂಕಟೇಶನಿಗೆ ಬೆಂಗಳೂರಿನ ಫ್ಯಾಕ್ಟರಿಯಲ್ಲಿ ಕೆಲಸವನ್ನು

ಕೊಡಿಸಿದ್ದ. ಹೀಗಾಗಿ ತನ್ನ ಒಡೆಯನೆಂದು ಭಾವಿಸಿದ್ದ. ಕೃಷ್ಣನ ಊರಿನ ಅಂತರಂಗದ ವ್ಯಕ್ತಿಯಾಗಿದ್ದ. ಊರಿನ ವಿದ್ಯಾಮಾನಗಳು, ತೋಟದ ಮನೆಯ ಚಟುವಟಿಕೆಗಳು, ಮಹೇಶನ ಚಲನ ವಲನಗಳು - ಎಲ್ಲವೂ ಕೃಷ್ಣನಿಗೆ ವರದಿಯಾಗುತ್ತಿದ್ದವು.

"ಮಹೇಶ ಎಲ್ಲಿ?" ಕೃಷ್ಣ ಕೆಂಚನನ್ನು ಕೇಳಿದ.

"ಇಲ್ಲೇ ಅವರೆ ಕಣಣ್ಣ. ಮೂಡ್ಲು ದಿಕ್ಕಿನಲ್ಲಿ ತೂತಾಗಿ ಆಡು ಕುರಿ ನುಗ್ತಿದ್ವೊ. ಅದ್ನ ಮುಚ್ಚೋ ಕೆಲಸ ಮಾಡ್ತಾ ಇದ್ದರು ಆಳುಗಳು. ಅಲ್ಲೇ ಅವರೆ ಕರೀಲಾ ?" ಎಂದ ಕೆಂಚ.

"ಬ್ಯಾಡ ಬುಡು. ಅವನೆ ಬರ್ತಾನೆ" ಎಂದು ಉತ್ತರಿಸಿದವನೆ ಮನೆಯ ಒಳಗೆ ಪ್ರವೇಶಿಸಿದ. ಮನೆಯನ್ನು ಒಂದು ಸುತ್ತು ಸುತ್ತಿದ. ಅವನ ಹಿಂದೆಯೇ ಸುಳಿಯುತ್ತಿದ್ದ ಕೆಂಚ "ವಸಿ ಟೀ ಮಾಡಿಸ್ಕೊಂಡು ಬರ್ಲಾ ಅಣ್ಣ" ಎಂದು ಕೇಳಿದ. ಕಿಟಕಿಯಿಂದ ಹೊರ ನೋಡಿದ. ಪಶ್ಚಿಮದ ಕಡೆ ಆಕಾಶ ಕೆಂಪಾಗಿತ್ತು. ಇನ್ನೇನು ಕತ್ತಲಾವರಿಸುತ್ತದೆ. ಕೆಂಚನ ಕಡೆ ತಿರುಗಿ "ಆಯ್ತು, ಮಹೇಶಾನು ಬರ್ತಾನೆ, ಅವ್ನಿಗೂ ತಗೊಂಡ್ ಬಾ" ಎಂದ.

ಆಯ್ತು ಎಂಬಂತೆ ತಲೆ ಆಡಿಸಿದ ಕೆಂಚ ಅಲ್ಲೇ ಸ್ವಲ್ಪ ನಿಂತು, ಏನನ್ನೋ ಹೇಳಲು ಪ್ರಯತ್ನಿಸಿದ. ಲೋಕಬಲ್ಲ ಕೃಷ್ಣನಿಗೆ ಅರ್ಥವಾಯಿತು. ಏನನ್ನೋ ಹೇಳಲು ಸಂಕೋಚ ಪಡುತ್ತಿದ್ದಾನೆ.

"ಏನ್ಲಾ ಕೆಂಚ ? ಅದೇನು ಹೇಳು" ಎಂದ.

"ಅಣ್ಣ, ನೀವು ಅನ್ನ ಸೂರು ಕೊಟ್ಟ ದಣಿ. ನಿಮ್ಮ ಋಣಾನ ನಾನು ತೀರ್‌ಸಕ್ಕಾಗಲ್ಲ. ನನ್ನ ಮಗಂಗೂ ಒಂದು ನೆಲೆ ತೋರ್‍ಸಿದ್ದೀರಾ. ಆದರೆ... ಆದರೆ.... "

"ಏನ್ಲಾ ಆದ್ರೆ.......ಆದ್ರೆ ........?"

ಕೆಂಚ ಸ್ವಲ್ಪ ಸುಮ್ಮನಾದ. ಏನೋ ತೀರ್ಮಾನಕ್ಕೆ ಬಂದವನಂತೆ "ಇತ್ತೀಚೆಗೆ ರಾತ್ರಿ ಹೊತ್ತು ಬರೋರು ಹೋಗೋರು ಜಾಸ್ತಿ. ಅದರ ಬಗ್ಗೆ ನಂದೇನೂ ಇಲ್ಲ. ಅದು ದೊಡ್ಡೋರ ವಿಷ್ಯ. ಊಟ ತಿಂಡಿ ಎಲ್ಲಾನು ಪ್ಯಾಟೆಯಿಂದಲೇ ತಂದಿರ್ತಾರೆ. ಆದ್ರೆ... ಆದ್ರೆ......"

ಕೃಷ್ಣ ಕೆಂಚನನ್ನು ದಿಟ್ಟಿಸಿದ. ಅವನ ದೃಷ್ಟಿಯಿಂದ ತನ್ನ ದೃಷ್ಟಿಯನ್ನು ಕದಲಿಸಿ, ತಲೆಬಾಗಿ "ಅಣ್ಣ ನಾನು ಮರ್ಯಾದಸ್ಥ. ನನ್ನ ಮಗಳು ವಯಸ್ಸಿಗೆ ಬಂದವ್ಳೆ. ಅವಳಿಗೆ ಮದುವೆ ಮಾಡ್ಬೇಕು. ಮಹೇಶಣ್ಣ ಒಂದೊಂದಿನ ಅವಳನ್ನು ಕಳಿಸು ಕಳಿಸು ಅಂತ ಜೊರ್ ಮಾಡ್ತಾರೆ" ಎಂದ.

ಕೃಷ್ಣನಿಗೆ ಅರ್ಥವಾಯಿತು. "ಸರಿ ನೀನು ಹೋಗು. ಇನ್ನು ಮುಂದೆ ಹಾಗಾಗದ ಹಾಗೆ ನೋಡ್ಕೊತ್ತೀನಿ" ಎಂದ. ತಮ್ಮನ ಲೀಲೆಗಳ ಬಗ್ಗೆ ಅವನಿಗೆ ತಿಳಿದಿರಲಿಲ್ಲವೆಂದಲ್ಲ. ಅದಕ್ಕೆ ತಾನೇ ಕಾರಣವೆಂದು ಅವನು ಬಗೆದಿದ್ದ. ಇದೆಲ್ಲ ಬದುಕಿನಲ್ಲಿ ಮೇಲೇರಲು ಆಡಬೇಕಾದ ಆಟ. ಬೆಂಗಳೂರಿಂದಲೋ ಬೇರೆಡೆಗಳಿಂದಲೋ ಮೋಜು ಮಾಡಲು ಬರುವ ಅಧಿಕಾರಿಗಳಿಗೆ ಹೆಂಡ ಹೆಣ್ಣುಗಳಿಲ್ಲದೆ ಮೋಜು ಪೂರ್ಣವಾಗದು. ಮೋಜು ಮಾಡಲು ಇಂಥ ಸುಂದರ ಏಕಾಂತ ತಾಣ, ಸುರಕ್ಷಿತ ತಾಣ ಎಲ್ಲಿ ಸಿಗುತ್ತದೆ ? ಬರುವ ಅಧಿಕಾರಿಗಳು ತಮ್ಮ ಮೋಜಿಗೆ ಬೇಕಾದ ಸರಕುಗಳನ್ನು ನಗರಗಳಿಂದಲೇ ತರುತ್ತಾರೆ. ಮದಿರೆ, ಮದನಾಂಗಿಯರು, ತಮಗೆ

ಬೇಕಾದ ಅಡುಗೆ ತಿಂಡಿ ತಿನುಸು ಎಲ್ಲವನ್ನು. ಅವರಿಗೆ ಅನುಕೂಲ ಒದಗಿಸುವ ಕೆಲಸ ಮಹೇಶನದು. ಅವರಿಂದ ಸ್ಥಳೀಯವಾದ ಕೆಲಸಗಳು ಆಗುವಂತೆ ನೋಡಿಕೊಳ್ಳುವ ಜವಾಬ್ದಾರಿಯೂ ಮಹೇಶನದೇ. ಹೀಗಾಗಿ ಈ ಅಧಿಕಾರಿಗಳಿಗೆ ಅನೇಕ ಸಾರಿ ಮಹೇಶ ಕಂಪನಿ ಕೊಡಬೇಕಿತ್ತು. ತನ್ನ ಅಣ್ಣನಿಗಿದ್ದ ವಿವೇಚನಾ ಶಕ್ತಿಯಾಗಲೀ ಕ್ರಿಯಾಶಕ್ತಿಯಾಗಲೀ ಅಷ್ಟಾಗಿ ಇಲ್ಲದ ಮಹೇಶ ಬಹುಬೇಗ ಮದಿರೆ ಮದನಾಂಗಿಯರ ಮೋಹಕ್ಕೆ ಒಳಗಾಗಿದ್ದ. ಒಮ್ಮೆ ಒಬ್ಬ ಸರ್ಕಲ್ ಇನ್‌ಸ್ಪೆಕ್ಟರ್ "ರೀ ಮಹೇಶ್, ಬರೀ ಬ್ರಾಯ್ಲರ್ ಕೋಳಿ ತಿಂದು ತಿಂದು ಬೋರ್ ಆಗಿದೆ. ಒಂದು ನಾಟಿ ಕೋಳಿ ವ್ಯವಸ್ಥೆ ಮಾಡ್ರಿ" ಎಂದು ಕೇಳಿದ್ದ.

"ಇಲ್ಲ ಸಾರ್, ಇಲ್ಲಿ ಅವೆಲ್ಲಾ ಆಗೋಲ್ಲ. ಜನಕ್ಕೆ ಗೊತ್ತಾದ್ರೆ ಕಷ್ಟ". ಸರ್ಕಲ್ ಇನ್‌ಸ್ಪೆಕ್ಟರ್‌ದು ಎಷ್ಟೇ ಆದರೂ ಪೊಲೀಸ್ ಬುದ್ಧಿ; ಅವನದು ನಾಯಿ ಮೂಗು. ಅವನು ತನ್ನ ಸ್ಯಾಂಟ್ರೋ ಜಿಂಗ್‌ನಲ್ಲಿ ಬರುವಾಗ ತೋಟದಲ್ಲಿ ಸಪೋಟ ಹಣ್ಣು ಕೀಳುತ್ತಿದ್ದ ಕೆಂಚನ ಮಗಳು ಕಣ್ಣಿಗೆ ಬಿದ್ದಿದ್ದಳು.

"ನಿಮ್ಮ ತೋಟದಲ್ಲೆ ಒಂದು ನಾಟಿ ಕೋಳಿ ಇದೆಯಲ್ಲ ಮಹೇಶ. ಅದನ್ನೇ ವ್ಯವಸ್ಥೆ ಮಾಡು" ಎಂದು ಕೇಳಿದ್ದ.

ಮಹೇಶನಿಗೆ ಮುಖ್ಯವಾದ ಕೆಲಸವಾಗಬೇಕಿತ್ತು. ಆದರೂ ಈ ಬಗ್ಗೆ ಕೆಂಚನನ್ನು ಹೇಗೆ ಕೇಳುವುದು ? ಕೆಂಚ ಅಧಿಕಾರಿಗಳು, ರಾಜರಾಕಣೆಗಳು ಬಂದಾಗ ಅವರಿಗೆ ಅದು ಇದು ಅಂತ ಸಹಾಯಕ್ಕೆ ಇರುತ್ತಿದ್ದ. ಈ ಅಕ್ಷರ ಕಲಿತ ಬಡ್ಡಿ ಮಕ್ಕಳ ನಡತೆ ಬಗ್ಗೆ ಹೇಸಿಗೆ ಪಟ್ಟು ಕೊಂಡಿದ್ದ. ಒಮ್ಮೊಮ್ಮೆ ಮಹೇಶನ ಬಳಿ ಅದನ್ನು ಆಡಿಯೂ ತೋರಿದ್ದ. ಆಗ ಮಹೇಶ "ಏನು ಮಾಡಕ್ಕಾಗುತ್ತೆ ಕೆಂಚಣ್ಣ, ನಮ್ಮ ಕೆಲಸ, ಜನರ ಕೆಲಸ ಆಗಬೇಕಲ್ಲ. ನಾವು ವಸಿ ಸಹಿಸಿಕೊಳ್ಬೇಕು" ಎಂದು ಉತ್ತರ ನೀಡಿದ್ದ. ಆದರೆ ಈಗ ? ನೇರವಾಗಿ ಈ ಪೊಲೀಸ್ ಕೆಂಚನ ಮಗಳ ಮೇಲೆಯೇ ಕಣ್ಣಾಕಿದ್ದಾನೆ! ಬಡ್ಡಿ ಮಗ. ಏನು ಮಾಡುವುದು ? ಮಹೇಶ ಸ್ವಲ್ಪ ಸಂಕೋಚ ಮತ್ತು ಮುಜುಗರ ಬೆರೆತ ದನಿಯಲ್ಲೇ ಕೆಂಚನನ್ನು ಮನೆಯ ಒಂದು ಮಗ್ಗುಲಿಗೆ ಕರೆದು ಕೊಂಡು ಹೋಗಿ ಪೊಲೀಸಪ್ಪನ ಆಸೆಯೇನೆಂದು ತಿಳಿಸಿಯೇ ಬಿಟ್ಟ. ಕೆಂಚ ಬಡವಾನಾಗಿದ್ದರೂ ಮಾನ ಮಾರ್ಯಾದೆಗೆ ಬಾಳಿದವನು. ಅವನು ಯಾವ ಮುಲಾಜಿಲ್ಲದೆ ಮಹೇಶನ ಕೋರಿಕೆಯನ್ನು ತಿರಸ್ಕರಿಸಿ ಬಿಟ್ಟ. ಮುಖವನ್ನು ಬಿರುಸು ಮಾಡಿಕೊಂಡು ಅಲ್ಲಿಂದ ಹೊರಟು ಹೋದ. ಮತ್ತೊಂದು ದಿನ ಇಂಥದ್ದೆ ಪ್ರಸಂಗದಲ್ಲಿ ತಹಸೀಲ್ದಾರ್ ಒಬ್ಬ ನಾಟಿ ಕೋಳಿಯ ಬೇಡಿಕೆಯನ್ನಿಟ್ಟಿದ್ದ. ಆಗಲೇ ರಾತ್ರಿ ಹನ್ನೆರಡು ಗಂಟೆಯಾಗಿತ್ತು. ಯಾವುದೋ ಜಮೀನಿನ ಖಾತೆ ಅಕ್ರಮವಾಗಿ ವರ್ಗಾವಣೆಯಾಗಬೇಕಿತ್ತು. ತಹಸೀಲ್ದಾರ್ ಜೊತೆ ಸೇರಿ ಮಹೇಶನೂ ಗುಂಡು ಹಾಕಿದ್ದ. ಈ ಸರಿರಾತ್ರಿಯಲ್ಲಿ ನಾಟಿ ಕೋಳಿ ಬೇಕೆಂದಾಗ ಅವನ ಕಣ್ಮುಂದೆ ಬಂದವಳು ಕೆಂಚನ ಮಗಳೇ! ಕೆಂಚನನ್ನು ಕೂಗಿ ಕರೆದು ನಿನ್ನ ಮಗಳನ್ನು ಕಳಿಸು ಎಂದು ಜೋರು ಮಾಡಿದ್ದ.

ಕೆಂಚ ಮಹೇಶನ ಜೋರಿಗೆ ಸೊಪ್ಪು ಹಾಕಿರಲಿಲ್ಲ. ಕೃಷ್ಣಣ್ಣನಿಗೆ ವಿಷಯ ತಿಳಿಸಿದರೆ

ಎಲ್ಲ ಸರಿ ಹೋಗುತ್ತದೆ ಎಂದು ಅವನು ನಂಬಿದ್ದ. ಇಂದು ಕೃಷ್ಣ ಅವನಿಗೆ ಸಾವಕಾಶವಾಗಿ ಸಿಕ್ಕಿದ್ದ. ಅವನಿಗೆ ವಿಷಯವನ್ನು ತಿಳಿಸಿದ್ದ.

ವಿಸ್ತಾರವಾದ ಹಾಲ್‌ನಲ್ಲಿದ್ದ ಸೋಫಾದಲ್ಲಿ ಕುಳಿತ ಕೃಷ್ಣ ಮಹೇಶನ ಜೊತೆಯಲ್ಲಿ ಮಾತನಾಡುವುದರ ಬಗ್ಗೆ ಯೋಚಿಸುತ್ತಿದ್ದ. ಅಷ್ಟರಲ್ಲಿ ಮಹೇಶ ಬಂದ. "ಏನಣ್ಣ, ಇವತ್ತು ಬೆಂಗಳೂರಿಗೆ ಹೋಗೋಲ್ವೆ ? ಆಗ್ಲೆ ಏಳರ ಮೇಲಾಯ್ತು" ಎಂದು ಗಡಿಯಾರ ನೋಡಿಕೊಂಡ.

"ಇಲ್ಲ ಮಹೇಶ, ಇಂದು ಇಲ್ಲೇ ಇರ್ತೀನಿ. ಅವ್ವ ಇಲ್ಲೇ ಇರು ಅಂದವ್ಳೆ" ಎಂದು ಅವನನ್ನು ಎದುರಿಗಿನ ಸೋಫಾದ ಮೇಲೆ ಕೂರುವಂತೆ ಕೈ ತೋರಿದ, ಮಹೇಶನಿಗೆ ಅಣ್ಣ ಗಂಭೀರನಾಗಿರುವಂತೆ ತೋರಿತು. ಅವನು ಯಾವಾಗಲೂ ಸ್ವಲ್ಪ ಗಂಭೀರ ಸ್ವಭಾವದವನೇ ? ತಮಾಷೆ, ಸರಸ ಸ್ವಲ್ಪ ಅಪರೂಪ. ಸದಾ ಮುಂದೆ ತನಗೇನಾಗಬೇಕು ಎಂದು ಚಿಂತಿಸುತ್ತಾನೆ ; ಅದರ ಬಗ್ಗೆ ಯೋಜನೆ ರೂಪಿಸುತ್ತಾನೆ.

"ಮಹೇಶ, ಇನ್ನೆರಡು ತಿಂಗಳಲ್ಲಿ ಗ್ರಾಮ ಪಂಚಾಯ್ತಿ ಎಲೆಕ್ಷನ್ ಬತ್ತದೆ. ಎಲ್ಲಾ ಕಡೆ ನಮ್ಮ ಅಭ್ಯರ್ಥಿಗಳು ನಿಲ್ಲಬೇಕು. ಯಾವ ಪಾರ್ಟಿ ಆದರೂ ಚಿಂತೆಯಿಲ್ಲ. ಎಲ್ಲಾ ಪಾರ್ಟಿಯಲ್ಲೂ ನಮ್ಮ ಜನರಿದ್ದಾರೆ. ನಮ್ಮಿಂದ ಕೆಲಸ ಮಾಡಿಸಿಕೊಂಡ ಜನ ನಾವು ಹೇಳಿದವರಿಗೆ ಓಟು ಹಾಕ್ತಾರೆ. ನಮ್ಮ ಅಭ್ಯರ್ಥಿಗಳನ್ನು ಒಪ್ಪದ ಜಾಗಗಳಲ್ಲಿ ನಮ್ಮವರು ಸ್ವತಂತ್ರವಾಗಿ ನಿಲ್ಲಲಿ. ಬೇರೆಯವರು ಗೆಲ್ಲದ ಹಾಗೆ ನೋಡಿಕೊಳ್ಳಬೇಕು. ಅದಕ್ಕೆ ಬೇಕಾಗಿರುವ ವ್ಯವಸ್ಥೆ ನಾನು ಮಾಡ್ತೀನಿ. ಹಣ ಕಾಸಿನ ಬಗ್ಗೆ ಯೋಚನೆ ಬೇಡ. ಈಗಾಗಲೇ ನಮ್ಮ ಅಭ್ಯರ್ಥಿಗಳ ಪಟ್ಟಿ ತಯಾರಿಸಿದ್ದೇನೆ. ಮುಂದಿನವಾರ ಈ ಮನೆಯಲ್ಲೇ ಇವರೆಲ್ಲರನ್ನು ಸೇರಿಸು. ಊಟ ಗುಂಡು ಎಲ್ಲ ವ್ಯವಸ್ಥೆ ಮಾಡು. ಆದರೆ ಸಭೆಯ ವಿಷಯ ರಹಸ್ಯವಾಗಿರಲಿ." ಎಂದು ಹೇಳಿದ.

ಮಹೇಶ ಸ್ವಲ್ಪ ನಿಧಾನವಾಗಿ ಹೇಳಲೋ ಬೇಡವೋ ಎಂಬಂತೆ "ಅಣ್ಣ, ಇಲ್ಲಿ ಜನ ನನ್ನ ಎಲೆಕ್ಷನ್‌ಗೆ ನಿಂತ್ಕೋ ಅಂತ ಒತ್ತಾಯಿಸ್ತಾ ಅವರೆ. ಅದ್ಕೆ ನಿನ್ನ ಕೇಳುವ ಅಂತಾ ಇದ್ದೆ" ಎಂದ.

ಕೃಷ್ಣ ಸೋಫಾದಿಂದ ಮೇಲೆದ್ದವನೆ ಕಿಟಕಿಯಿಂದ ತೋಟದ ನೀರವತೆಯನ್ನು ಅನುಭವಿಸಿದ್ದ. ಕತ್ತಲೆಯಾಗಿತ್ತು. ಆಗಲೇ ಜೀರುಂಡೆಗಳು ತಮ್ಮ ಸದ್ದುಮಾಡಲು ಟ್ರಯಲ್ ಮಾಡುತ್ತಿರುವಂತೆ ತೋರುತ್ತಿತ್ತು. ಒಂದು ಸ್ಟೀಲ್ ತಟ್ಟೆಯಲ್ಲಿ ಎರಡು ಸ್ಟೀಲ್ ಲೋಟದಲ್ಲಿ ಟೀ ಹಿಡಿದು ಕೆಂಚ ಒಳಗೆ ಪ್ರವೇಶಿಸಿದ. ಸೋಫಾಗಳ ನಡುವಿದ್ದ ಟೀಪಾಯ್ ಮೇಲೆ ಸ್ಟೀಲ್ ತಟ್ಟೆಯನ್ನಿಟ್ಟು, ಕೃಷ್ಣನಿಗೆ ಒಂದು ಲೋಟವನ್ನೂ ಮಹೇಶನಿಗೆ ಒಂದು ಲೋಟವನ್ನೂ ನೀಡಿದ.

ಟೀ ಲೋಟವನ್ನು ಕೆಂಚನಿಂದ ತೆಗೆದುಕೊಂಡು ಕಣ್ಣಿನಲ್ಲೇ ಅವನನ್ನು ಹೊರ ಹೋಗುವಂತೆ ಸೂಚಿಸಿದ. ಅರ್ಥಮಾಡಿಕೊಂಡ ಕೆಂಚ ಹೊರ ನಡೆದ. ಒಂದು ಗುಟುಕು ಟೀ ಕುಡಿದ ಕೃಷ್ಣ ಮತ್ತೆ ಸೋಫಾದ ಮೇಲೆ ಕುಳಿತ. ಮಹೇಶನನ್ನು ಕುರಿತು "ನೋಡು ಮಹೇಶ, ನಾವು ಯಾವಾಗಲೂ ದೊಡ್ಡದರ ಬಗ್ಗೆ ಚಿಂತಿಸಬೇಕು. ಈ ಗ್ರಾಮ ಪಂಚಾಯ್ತಿ ತಾಲ್ಲೂಕು ಪಂಚಾಯ್ತಿ ನಮಗಲ್ಲ. ಆದರೆ ಎಂ ಎಲ್ ಎ, ಎಂ ಎಲ್ ಸಿ ಆಗ್ಬೇಕು. ಇವೆಲ್ಲಾ ಬೇರೆಯವರಿಗೆ ಎಂದೂ

ಬಾಲಗಳು ಅಷ್ಟೆ. ನಾವು ಬಾಲವಾಗಬಾರದು. ಬಾಲವನ್ನು ಆಡಿಸುವ ಮಿದುಳಾಗಬೇಕು. ಈಗ ನಾನು ಮಾಡುತ್ತಿರುವುದು ಬಾಲಗಳನ್ನು ಸೃಷ್ಟಿಮಾಡುವ ಕೆಲಸ. ಅರ್ಥಮಾಡಿಕೊ. ನಮ್ಮ ಕೆಲಸ ಆಗ್ಬೇಕು. ನಾವು ಹೇಳಿದ ಕೆಲಸವನ್ನು ತುಟಿಪಿಟಿಕ್ಕೆನ್ನದೆ ಮಾಡುವ ಜನರ ಸೃಷ್ಟಿ ಆಗ್ಬೇಕು. ಈ ಪಟ್ಟಿಯ ಜನರು ಚುನಾವಣೇಲಿ ಗೆದ್ದರೆ ನಮ್ಮ ಕೆಲಸ ಆಗ್ತದೆ. ಸದಾ ನಮ್ಮ ಹಿಂದೆ ಮುಂದೆ ಇರ್ತಾರೆ. ಮುಂದಿನ ಬೆಳವಣಿಗೇಲಿ ಅವರು ಮೆಟ್ಟಿಲುಗಳಾಗಿರ್ತಾರೆ. ಅರ್ಥವಾಯಿತೆ ?" ಎಂದು ಹೇಳಿದ.

ಅವನ ಬಾಯಿಂದ ಮಾತುಗಳು ಗಡುಸಾಗಿ, ಆವೇಶ ರಹಿತವಾಗಿ ಬರುತ್ತಿದ್ದವು. ಅವನ ದೃಷ್ಟಿ ತೀಕ್ಷ್ಣವಾಗಿ ಮಹೇಶನನ್ನೇ ನೋಡುತ್ತಿತ್ತು. "ನೀನು ಚುನಾವಣೆಗೆ ನಿಲ್ಲುವುದು ಬೇಡ. ಜನರನ್ನು ಚುನಾವಣೆಗೆ ನಿಲ್ಲಿಸುವ ಕೆಲಸವನ್ನು ಮಾಡು, ಅವರನ್ನು ನಿನ್ನ ಹಿಡಿತದಲ್ಲಿಟ್ಟುಕೋ. ಯಾವುದೇ ಅಧಿಕಾರಿಯನ್ನಾಗಲೀ ಅವರು ನಮ್ಮ ಮೂಲಕವೇ ಸಂಪರ್ಕಿಸಬೇಕು; ಯಾವುದೇ ಕೆಲಸವನ್ನಾದರೂ ನಮ್ಮ ಮೂಲಕವೇ ಮಾಡಿಸಿಕೊಳ್ಳಬೇಕು. ಆ ಥರದ ವ್ಯವಸ್ಥೆ ನಿರ್ಮಾಣವಾಗಬೇಕು. ಅರ್ಥವಾಯಿತೆ ? ಆಥರದ ವ್ಯವಸ್ಥೆಯನ್ನು ನಾನು ಸಿದ್ಧಗೊಳಿಸುತ್ತೇನೆ. ಅದು ಕಾರ್ಯರೂಪಕ್ಕೆ ಬರುವಂತೆ ನೀನು ನೋಡಿಕೋ".

ಅಣ್ಣನ ಮಾತುಗಳಿಗೆ ಎದುರು ಹೇಳುವ ಶಕ್ತಿ ಮಹೇಶನಿಗಿರಲಿಲ್ಲ. ಆಯ್ತು ಎಂಬಂತೆ ತಲೆ ಆಡಿಸಿದ. ಅನಂತರ ಅಣ್ಣ ತಮ್ಮ ತಮ್ಮ ವ್ಯವಹಾರಗಳ ಬಗ್ಗೆ ಚರ್ಚಿಸಿದರು.

ಕೆಂಚ ಬಂದು ಖಾಲಿ ಟೀ ಲೋಟಗಳನ್ನು ತೆಗೆದುಕೊಂಡು ಹೋದವನು ಮತ್ತೆ ಬಂದು ಮನೆಯ ಹೊರಗಿನ ಗ್ರಾನೈಟ್ ಬೆಂಚಿನ ಮೇಲೆ ಕೂತಿದ್ದನು. ಅದು ಸಾಮಾನ್ಯವಾಗಿ ಅವನು ಕುಳಿತುಕೊಳ್ಳುವ ಜಾಗ. ಅನವಶ್ಯಕವಾಗಿ ಮೂಗು ತೂರಿಸುವ ಜಾಯಮಾನ ಅವನದಲ್ಲ. ಆದರೆ ಅವನ ಕಣ್ಣುಗಳು, ಕಿವಿಗಳು ಸೂಕ್ಷ್ಮವಾಗಿದ್ದವು. ಕೆಂಚನ ಆ ಗುಣವೇ ಕೃಷ್ಣನಿಗೆ ಪ್ರಿಯವಾಗಿತ್ತು.

"ಮನೆಗೆ ಹೋಗೋಣ ಬಾ. ಅವ್ವ ಕಾಯ್ತಿರ್ತಾಳೆ" ಎಂದ ಕೃಷ್ಣ ಮೇಲಕ್ಕೆದ್ದ. ಅವನ ಹಿಂದೆಯೇ ಬಂದ ಮಹೇಶನನ್ನು "ನೀನು ನಡಿ, ನಾನು ಬಂದೆ" ಎಂದ. ಅಣ್ಣನ ಮಾತಿಗೆ ಪ್ರತಿಯಾಡದೆ ಮಹೇಶ ತನ್ನ ಬೈಕನ್ನು ಸ್ಟಾರ್ಟ್ ಮಾಡಲು ಕಾಲು ಎತ್ತಿದ್ದ. ಆಗ ಕೃಷ್ಣ ಏನೋ ಯೋಚಿಸಿದವನಂತೆ "ವಸಿ ಇರು ಬಂದೆ" ಎಂದವನೆ, ತನ್ನ ಪಕ್ಕದಲ್ಲೇ ನಿಂತಿದ್ದ ಕೆಂಚನನ್ನು ಕರೆದುಕೊಂಡು ಸ್ವಲ್ಪ ದೂರಕ್ಕೆ ಹೋದವನು,

"ಇನ್ನು ಮುಂದೆ ಮಹೇಶನಿಂದ ಯಾವತೊಂದ್ರೆಯೂ ನಿನಗೆ, ನಿನ್ನ ಮನೆಯವರಿಗೆ ಆಗೋಲ್ಲ. ಅದ್ರ ವ್ಯವಸ್ಥೆ ನಾನು ಮಾಡ್ತೀನಿ. ನಿನ್ನ ಮಗಳಿಗೆ ಹದಿನೆಂಟು ಆಗಿರಬೇಕಲ್ವೆ ? ಒಂದು ಒಳ್ಳೆಯ ಸಂಬಂಧ ನೋಡು. ದುಡ್ಡಿನ ಬಗ್ಗೆ ಯೋಚ್ನೆ ಮಾಡ್ಬೇಡ. ಬೇಗ ಮದ್ವೆ ಮಾಡಿ ಮುಗಿಸು. ಅರ್ಥವಾಯಿತೇ ?" ಎಂದು ಆದೇಶ ನೀಡುವಂತೆ ನುಡಿದ.

ಕೆಂಚ "ಆಯ್ತು ಕಣಣ್ಣ" ಎಂದ.

ಕೃಷ್ಣ ಮತ್ತೆ ಮಾತನಾಡದೆ ತನ್ನ ಬೈಕಿನ ಕಡೆ ಬಂದವನೆ ಅದನ್ನು ಸ್ಟಾರ್ಟ್ ಮಾಡಿ,

ತಮ್ಮನನ್ನು ಹಿಂಬಾಲಿಸುವಂತೆ ಸನ್ನೆ ಮಾಡಿ ಮುನ್ನಡೆದ. ತೋಟದ ಮುಖ್ಯ ದ್ವಾರಕ್ಕೆ ಬಂದವನು ತನ್ನ ಬೈಕನ್ನು ನಿಲ್ಲಿಸಿದ. ಮಹೇಶನೂ ಗಾಡಿ ನಿಲ್ಲಿಸಿ ಬೈಕಿನಿಂದ ಇಳಿದು ಹಾಕಿದ್ದ ಗೇಟಿನ ಒಂದು ಬಾಗಿಲನ್ನು ತೆರೆದ. ಕೃಷ್ಣ ತನ್ನ ಬೈಕನ್ನು ತಳ್ಳಿಕೊಂಡು ಗೇಟಿನ ಹೊರಗೆ ಬಂದು, ಅದರ ಮೇಲೆ ಕುಳಿತ. ಮಹೇಶ ತನ್ನ ಗಾಡಿಯನ್ನು ಹೊರತಂದು ನಿಲ್ಲಿಸಿ ಗೇಟನ್ನು ಮುಚ್ಚಿ ತಾಳ ಹಾಕಿದ. ಮಹೇಶನನ್ನೇ ನೋಡುತ್ತಿದ್ದ ಕೃಷ್ಣ "ನೋಡು ಮಹೇಶ, ನಿನ್ನ ಬಗ್ಗೆ ಇತ್ತೀಚೆಗೆ ಬಹಳ ಅಡ್ಡ ಮಾತು ಕೇಳಿ ಬರುತ್ತಿವೆ. ಅದು ಸರಿಯಲ್ಲ. ನಾವು ನಾಲ್ಕು ಜನಕ್ಕೆ ಬೇಕಾದೋರು. ಅವರ ದೃಷ್ಟೀಲಿ ಒಳ್ಳೆಯವರಾಗಿರಬೇಕು. ನಮ್ಮ ಬೆನ್ನ ಹಿಂದೆ ಜನ ಮಾತಾಡ್‌ಬಾರದು. ಹಂಗಂತ ನೀನು ಹರಿಶ್ಚಂದ್ರನ ತರ ಇರು ಎಂದು ಹೇಳ್ತಿಲ್ಲ. ಜನರ ಕಣ್ಣೆದುರಿಗೆ ಮಾಡ್ಬಾರ್ದು ಅಷ್ಟೆ." ಸ್ವಲ್ಪ ತಡೆದು ಸ್ವಲ್ಪ ಗಡುಸಾಗಿ "ಕೆಂಚನ ಮಗಳ ವಿಷಯಕ್ಕೋಗ್ಬೇಡ. ಒಂದು ವಿಷಯ ಚೆನ್ನಾಗಿ ತಿಳಿದುಕೋ. ನಾವು ಅನ್ನ ತಿನ್ನೋಕಡೆ, ಮಲಗೋ ಕಡೆ ಹೇತ್‌ಕೋ ಬಾರ್ದು. ಆದರೆ ವಾಸನೆ ನಮ್ಗೇ ಬಡೀತದೆ. ಅರ್ಥವಾಯಿತೇ ? ಈ ವಿಷ್ಯದ ಬಗ್ಗೆ ಕೆಂಚನ ಹತ್ತಿರ ನೀನ್ ಮಾತಾಡಲೇಬಾರ್ದು. ಏನಂತೀಯಾ ?" ಎಂದನು.

ಮಹೇಶ ಅರ್ಥವಾಯಿತೆಂಬಂತೆ ತಲೆಯಾಡಿಸಿದ. ಕೃಷ್ಣ ಗಾಡಿ ಸ್ಟಾರ್ಟ್ ಮಾಡಿದ. ತಮ್ಮ ಅವನನ್ನು ಹಿಂಬಾಲಿಸಿದ.

ಅಂದು ರಾತ್ರಿ ಅವ್ವ ಮಗ ಮನೆಯಲ್ಲಿರುತ್ತಾನೆಂದು ಸಂಭ್ರಮಿಸಿ ಅವನಿಗೆ ಇಷ್ಟವಾದ ಕೀರೆಸೊಪ್ಪಿನ ಪಲ್ಯ, ಉಪ್ಪಿನ ಸಾರನ್ನು ಮಾಡಿದ್ದಳು. ಜೊತೆಗೆ ನಂಚಿಕೊಳ್ಳಲು ಕೋಳಿ ಬಾಡಿನ ಚಾಪ್ಸ್. ಬಹಳ ದಿನಗಳ ನಂತರ ಅಪ್ಪಮಕ್ಕಳು ಜೊತೆಯಲ್ಲಿ ಉಣ್ಣುತ್ತಿರುವುದನ್ನು ಕಂಡು ಅವಳು ಸಂತೋಷ ಪಟ್ಟಿದ್ದಳು.

ಊಟವಾದ ಮೇಲೆ ಹಾಲಿನಲ್ಲಿ ಕುಳಿತರು. ಅವ್ವ ಬಾಳೆಹಣ್ಣು, ವೀಳ್ಯೆದೆಲೆ ಸುಣ್ಣ ಅಡಿಕೆ ತಂದಿಟ್ಟಳು. ಕೃಷ್ಣ ಸಾಮಾನ್ಯವಾಗಿ ಎಲೆ ಅಡಿಕೆ ಹಾಕುತ್ತಿರಲಿಲ್ಲ. ನಾನ್‌ವೆಜ್ ತಿಂದಾಗ ಅಪರೂಪಕ್ಕೆ ಬಳಸುತ್ತಿದ್ದ. ಇಂದು ಎಲೆ ಅಡಿಕೆ ಹಾಕಿದ. ಅಪ್ಪ, ಮಹೇಶ ಎಲೆ ಅಡಿಕೆ ಮೆದ್ದಲಾರಂಭಿಸಿದರು.

ಅಪ್ಪ ಮಾತು ಆರಂಭಿಸಿದ. "ನೋಡ್ಲಾ ಕೃಷ್ಣ, ನೀನು ಬೆಂಗಳೂರ್ ಸೇರ್ಬುಟ್ಟೆ. ಇಲ್ಲಿಗೆ ಬತ್ತಿಯಾ ಹೋಯ್ತಿಯಾ, ಅಷ್ಟೆ. ಮನೇಲಿ ನಿಮ್ಮವ್ವನಿಗೆ ಕೆಲ್ಸ ಮಾಡಲು ಮೊದಲಂಗೆ ಆಗಲ್ಲ. ನಿನಗೆ ಲಗ್ನ ಅಂತ ಒಂದಾದರೆ ಅವಳಿಗೂ ಒಳ್ಳೇದು, ನಿನಗೂ ಒಳ್ಳೇದು. ಈ ಬಗ್ಗೆ ಕೆಲಸ ಬೇಗ್ನೆ ಆಗ್ಬೇಕು" ಎಂದ.

ಕೃಷ್ಣ "ಅಪ್ಪ ನನ್ನ ಮದ್ವೆ ಇನ್ನ ತಡವಾಯ್ತದೆ. ನಾನು ಮಾಡ್ಬೇಕಾದ ಕೆಲಸಗಳು ಬಹಳಷ್ಟಿವೆ. ಸದ್ಯಕ್ಕೆ ಬೇಡ. ಈಗ ನಾವು ಮಹೇಶನಿಗೆ ಮದ್ವೆ ಮಾಡ್ವ". ಎಂದ.

"ಅದೆಂಗ್ಲಾ ಆದದು. ದೊಡ್ಡವನಿಗೆ ಬುಟ್ಟು ಚಿಕ್ಕೋನ್ಗೆ ಮದುವೆ ಮಾಡುದ್ರು ಅಂತ ಜನ ಅನ್ನಲ್ವೆ ?" ಎಂದ ಅಪ್ಪ.

"ಜನ ಅಂತಾರೆ ಅಂತ ನಾವು ಕುಣೇಕಾದದ. ಅಪ್ಪ, ನಾವು ಅಂದಂಗೆ ಜನ ಕುಣೀಬೇಕು.

ನಮ್ಮ ಕೇಳೋರ್‍ಯಾರು ? ನಾನು ಯೋಚ್ನೆ ಮಾಡೇ ಹೇಳ್ತಾ ಇದ್ದೀನಿ. ಮಹೇಶನಿಗೆ ಈಗ ಮದ್ವೆ ಮಾಡ್ಸ. ಅಪ್ಪನಿಗೂ ಅನುಕೂಲ ಆಯ್ತದೆ." ಎಂದ.

ಮಹೇಶ "ಅಂದೆಂಗಾದದು ಅಣ್ಣ, ನಿನ್ನ ಬುಟ್ಟು ನಾನು ಮದ್ವೆ ಆಗಾಕಾದದ ? ಮೊದ್ಲು ನಿಂದಾಗಲಿ. ಅಮ್ಯಾಲೆ ನಂದು" ಎಂದ.

"ಮಹೇಶ, ಅಪ್ಪನಿಗೆ ಹೇಳಿದ್ನ ನಿಂಗೂ ಹೇಳ್ಬೇಕೇ ? ಸುಮ್ನೆ ಮಾತಾಡ್ದೆ ಒಪ್ಕೊ" ಎಂದು ಅಧಿಕಾರಯುತವಾಗಿ ಹೇಳಿದ.

ಮಹೇಶ ಸುಮ್ಮನಾದ. ಅಪ್ಪನಿಗೆ ಮಹೇಶನಿಗೆ ಹೆಣ್ಣು ನೋಡುವಂತೆ ಹೇಳಿ, ತಾನು ಮಲಗಲು ಮೇಲಕ್ಕೆದ್ದ.

ಮುಂದಿನ ತಿಂಗಳೊಪ್ಪತ್ತಿನಲ್ಲಿ ಕಬ್ಬಾಳಿನ ಅನುಕೂಲಸ್ಥರ ಮನೆಯ ಮಗಳನ್ನು ಮಹೇಶನಿಗೆ ತುಂದುಕೊಳ್ಳಲಾಯಿತು. ತುಂಬಾ ಅದ್ಧೂರಿ ಮದುವೆ. ಸುತ್ತ ಮುತ್ತಲಿನ ತಾಲ್ಲೂಕುಗಳ ರಾಜಕಾರಣಿಗಳು, ಅಧಿಕಾರಿಗಳು ಮದುವೆಗೆ ಬಂದಿದ್ದರು. ಬೆಂಗಳೂರಿನ ಅನೇಕ ಗೂಟದ ಕಾರುಗಳು ಮದುವೆಗೆ ಬಂದು ವಧೂವರರಿಗೆ ಆಶೀರ್ವದಿಸಿದ್ದವು.

ಮಹೇಶನ ಮದುವೆಯಾದ ಕೆಲವೇ ದಿನಗಳಲ್ಲಿ ಕೃಷ್ಣನ ಜೀವನದಲ್ಲಿ ಮಹತ್ತವಾದ ಘಟನೆಯೊಂದು ನಡೆಯಿತು.

## ಅಧ್ಯಾಯ : ಏಳು

ಮಧ್ಯ ಪ್ರದೇಶದ ರಾಜಕೀಯ ವಿಪ್ಲವಕ್ಕೂ ಒಬ್ಬ ಸಾಮಾನ್ಯ ಯುವ ನಾಯಕ ಕೃಷ್ಣನಿಗೂ ಯಾವ ಸಂಬಂಧವಿತ್ತೋ ಅದರ ಸೂಕ್ಷ್ಮವನ್ನು ಅರಿಯಲಾಗದು. ಆದರೆ ಸಂಬಂಧ ಏರ್ಪಟ್ಟಿದಂತೂ ಸತ್ಯ.

ಮಧ್ಯ ಪ್ರದೇಶದಲ್ಲಿ ಕೇಂದ್ರದ ವಿರೋಧ ಪಕ್ಷ ರಾಜ್ಯಭಾರ ಮಾಡುತ್ತಿತ್ತು. ಅಲ್ಲಿನ ಆಡಳಿತ ಪಕ್ಷಕ್ಕೂ ವಿರೋಧ ಪಕ್ಷಕ್ಕೂ ಸಂಖ್ಯಾಬಲ ಅಂಥಾ ವ್ಯತ್ಯಾಸವೇನೋ ಇರಲಿಲ್ಲ. ವಿರೋಧ ಪಕ್ಷದವರು ಆಡಳಿತ ಪಕ್ಷದ ಹನ್ನೆರಡು ಶಾಸಕರನ್ನು ತಮ್ಮ ಕಡೆಗೆ ಸೆಳೆದುಕೊಂಡರು. ಅವರ ಜೊತೆಗೆ ಮೂರು ಜನ ಪಕ್ಷೇತರರು. ಅಧಿಕಾರ ರೂಢ ಪಕ್ಷ ಅಧಿಕಾರ ಕಳೆದುಕೊಳ್ಳುವ ಸ್ಥಿತಿ ನಿರ್ಮಾಣವಾಯಿತು. ತಮ್ಮ ಪಕ್ಷಕ್ಕೆ ಬಹುಮತವಿದೆ; ಸಂಪುಟ ರಚಿಸಲು ತಮಗೆ ಅವಕಾಶ ಕೊಡಿ ಎಂದು ಅಲ್ಲಿನ ವಿರೋಧ ಪಕ್ಷ ಅಹವಾಲು ಸಲ್ಲಿಸಿತು. ಕೇಂದ್ರ ಸರ್ಕಾರದ ಕಡೆಗೆ ಒಲವಿದ್ದ ರಾಜ್ಯಪಾಲರು ಅಲ್ಲಿನ ಆಡಳಿತ ಪಕ್ಷಕ್ಕೆ ವಿಧಾನ ಸಭೆಯಲ್ಲಿ ಬಹುಮತ ಸಾಬೀತು ಪಡಿಸಿ ದಿನಾಂಕ ಗೊತ್ತು ಮಾಡಿದರು.

ಆಡಳಿತ ಪಕ್ಷದಿಂದ ಪಕ್ಷಾಂತರ ಮಾಡಿದ್ದ ಹನ್ನೆರಡು ಜನ ಶಾಸಕರು ಒಂದು ಮೂಲದವರು. ನಾಲ್ಕೈದು ವಿವಿಧ ಪಕ್ಷಗಳ ಸಂಮಿಶ್ರ ಸರಕಾರವಾಗಿದ್ದ ಮಧ್ಯ ಪ್ರದೇಶದ ಸರ್ಕಾರ ಅಧಿಕಾರ ಕಳೆದುಕೊಳ್ಳುವ ಅನಿವಾರ್ಯಸ್ಥಿತಿ ನಿರ್ಮಾಣವಾಯಿತು. ಹಾಗೆಂದುಕೊಂಡು ಸುಮ್ಮನೆ ಕೂರಲು ಸಾಧ್ಯವೆ ?ಪಕ್ಷಾಂತರಗೊಂಡ ಶಾಸಕರನ್ನು ಅಪಹರಿಸಿ, ಅವರು ವಿಶ್ವಾಸ ಮತ ಸಾಬೀತು ಪಡಿಸುವ ಸಂದರ್ಭದಲ್ಲಿ ಹಾಜರಿರದಂತೆ ನೋಡಿಕೊಳ್ಳುವ ಯೋಚನೆ ರೂಪಿಸಿತು.

ಹೇಳಿ ಕೇಳಿ ಕೇಂದ್ರಸರಕಾರದ ಕೈಯಲ್ಲಿ ಬೇಹುಗಾರಿಕೆಯಿತ್ತು. ರಾಜಕೀಯ ಪಿತೂರಿಗಳು ಅವರ ಗಮನಕ್ಕೆ ಬಾರದೆ ಇರುತ್ತವೆಯೇ ? ಕೇಂದ್ರದಲ್ಲಿ ಅಧಿಕಾರ ನಡೆಸುತ್ತಿದ್ದ ಪಕ್ಷದ ಅಧ್ಯಕ್ಷರು, ತಮ್ಮದೇ ಪಕ್ಷ ಆಡಳಿತ ನಡೆಸುತ್ತಿದ್ದ ಕರ್ನಾಟಕದ ಮುಖ್ಯಮಂತ್ರಿಗಳಿಗೆ ಆದೇಶ ಹೊರಡಿಸಿಬಿಟ್ಟರು : "ಪಕ್ಷಾಂತರಗೊಂಡ ಹನ್ನೆರಡು ಶಾಸಕರು ಮೂರು ಜನ ಪಕ್ಷೇತರ ಶಾಸಕರು ನಿಮ್ಮ ಸುಪರ್ಧಿನಲ್ಲಿರಲಿ. ವಿಶ್ವಾಸ ಮತ ಯಾಚನೆಯೆಂದು ವಿಧಾನ ಸಭೆಗೆ ಹಾಜರುಪಡಿಸುವ ಜವಾಬ್ದಾರಿ ನಿಮ್ಮದು." ಮುಖ್ಯಮಂತ್ರಿಗಳಿಗೆ ಅದೊಂದು ದೊಡ್ಡ ವಿಚಾರವಾಗಿರಲಿಲ್ಲ. ಬೆಂಗಳೂರಿನ ಸುತ್ತ ಮುತ್ತ ಅನೇಕ ರೆಸಾರ್ಟುಗಳಿದ್ದವು. ರೆಸಾರ್ಟ್ ರಾಜಕೀಯ ಕರ್ನಾಟಕ ರಾಜಕಾರಣದ ಒಂದು ಅಂಶವಾಗಿತ್ತು.

ವಿಮಾನದಲ್ಲಿ ಬಂದಿಳಿಯುವ ಆ ಶಾಸಕರನ್ನು ಎಲ್ಲಿ ಜೋಪಾನಗೊಳಿಸುವುದು ಎಂದು ಮುಖ್ಯಮಂತ್ರಿಗಳು, ಪಾರ್ಟಿ ಅಧಕ್ಷರು, ಆಪ್ತ ಸಚಿವರು ಸಮಾಲೋಚನೆಯಲ್ಲಿದ್ದಾಗ ಅರ್ಥ

ಮಂತ್ರಿಗಳು "ಸಾರ್, ಈ ಬೆಂಗಳೂರಿನ ಸುತ್ತಮುತ್ತಲಿನ ರೆಸಾರ್ಟುಗಳು ಬೇಡ. ಪತ್ರಿಕೆಯವರು, ಟೀವಿಯವರು, ವಿರೋಧ ಪಕ್ಷದವರು ಹದ್ದಿನಂತೆ ಕಾಯ್ತಾರೆ; ಮೂಲೆ ಮೂಲೆ ಜಾಲಾಡ್ತಾರೆ. ನಮ್ಮ ಹುಡುಗನ ತೋಟದ ಮನೆಯೊಂದಿದೆ. ಬೆಂಗಳೂರಿಗೆ ತೀರಾ ದೂರವೇನಲ್ಲ, ತೀರಾ ಹತ್ತಿರವೂ ಅಲ್ಲ. ಅಲ್ಲಿ ಇವರನ್ನು ಇಡಬಹುದು. ಅವರಿಗೆ ಬೇಕಾದ ಎಲ್ಲಾ ಲಕ್ಷುರೀನೂ ಒದಗಿಸಬಹುದು. ನಾನು ನಿಮಗೆ ಸೂಚಿಸುತ್ತಿರುವ ಹುಡಗ ಇನ್ನೂ ಯಾರ ಕಣ್ಣಿಗೂ ಬಿದ್ದಿಲ್ಲ; ಹೀಗಾಗಿ ಅವನ ಕಡೆ ಗಮನ ಯಾರಿಗೂ ಬರದು" ಎಂದರು.

"ಯಾರ್ ಆ ಹುಡುಗ ?" ಎಂದರು ಪಾರ್ಟಿ ಅಧ್ಯಕ್ಷರು.

"ನಿಮಗೂ ಗೊತ್ತು. ಕೃಷ್ಣ ಅಂತ. ಯುವ ನಾಯಕ. ಹಿಡಿದ ಕೆಲಸ ಮಾಡೇ ಮಾಡ್ತಾನೆ. ಭರವಸೆಯ ಹುಡುಗ. ಮುಂದೆ ನಮ್ಮ ಪಾರ್ಟಿಗೆ ಅಸೆಟ್ ಆಗ್ತಾನೆ."

ಮುಖ್ಯಮಂತ್ರಿಗಳು ಕೃಷ್ಣನ ಬಗ್ಗೆ ಕೇಳಿದ್ದರು. ಒಂದು ವರ್ಷದ ಹಿಂದೆ ತಾನೆ ನಡೆದ ಚುನಾವಣೆಯಲ್ಲಿ ಅವನು ಶ್ರಮವಹಿಸಿ ದುಡಿದಿದ್ದ. ಜೊತೆಗೆ ಅವನು ತಮ್ಮ ಜಾತಿಯವನು ಬೇರೆ! ಪರವಾಗಿಲ್ಲ, ಅವನನ್ನು ನಂಬಬಹುದು. ಮುಖ್ಯ ಮಂತ್ರಿಗಳ ಯೋಚನೆಯನ್ನು ಅನ್ಯಮನಸ್ಕತೆಯೆಂದು ಬಗೆದ ಪಾರ್ಟಿ ಆಧ್ಯಕ್ಷರು "ನಿಮ್ಮ ಅಭಿಪ್ರಾಯ ಏನು ಸಾರ್" ಎಂದು ಕೇಳಿದರು.

"ನನ್ನದೇನೂ ಅಭ್ಯಂತರವಿಲ್ಲ. ಒಟ್ಟಿನಲ್ಲಿ ಕೆಲಸ ಅಚ್ಚುಕಟ್ಟಾಗಿ ಆಗಬೇಕಷ್ಟೆ." ಎಂದು ಅರ್ಥ ಮಂತ್ರಿಗಳ ಕಡೆ ತಿರುಗಿ "ಎಲ್ಲ ವ್ಯವಸ್ಥೆ ಅಚ್ಚುಕಟ್ಟಾಗಿ ಆಗಬೇಕು. ಹೈಕಮಾಂಡ್ ನಮ್ಮ ಮೇಲೆ ನಂಬಿಕೆಯಿಟ್ಟು ಜವಾಬ್ದಾರಿ ವಹಿಸಿದೆ. ಅದಕ್ಕೆ ಎಲ್ಲೂ ಲೋಪವಾಗುವುದು ಬೇಡ. ಆ ಹುಡುಗನನ್ನು ಕರೆದು ನೀವೇ ಎಲ್ಲವನ್ನೂ ತಿಳಿಸಿ. ಬೇಕಾದ ಹಣಕಾಸಿನ ವ್ಯವಸ್ಥೆ ಮಾಡಿರಿ. ಒಮ್ಮೆ ರಹಸ್ಯವಾಗಿ ಭೇಟಿ ನೀಡಿರಿ" -ಸೂಚನೆ ನೀಡಿದರು.

ಅದಾದ ಮೂರೇ ದಿನಕ್ಕೆ ಭೂಪಾಲ್‌ನಿಂದ ವಿಮಾನ ಹದಿನೈದು ಜನ ಶಾಸಕರನ್ನು ಬೆಂಗಳೂರಿಗೆ ತಂದಿತ್ತು. ಲಕ್ಷುರಿ ಬಸ್‌ವೊಂದು ಅವರನ್ನು ಕರೆದುಕೊಂಡು ಸಿಂಗಾಲಾಜಿಪುರದ ಬಳಿಯ ಕೃಷ್ಣ ಫಾರಂಗೆ ತಂದು ಬಿಟ್ಟಿತು. ಕೃಷ್ಣ ಅವರನ್ನು ಸ್ವಾಗತಿಸಿ ತನ್ನ ತೋಟದ ಮನೆ ತುಂಬಿಸಿಕೊಂಡ.

ಮುಂದಿನ ಎಂಟು ದಿನಗಳು ಅವರಿಗೆ ಸ್ವರ್ಗದಲ್ಲಿರವಂತೆ ಭಾಸವಾಯಿತು. ಬೆಂಗಳೂರಿನ ಎಲ್ಲ ಸುಖವೂ ಹಳ್ಳಿಯ ಮನೆಯಲ್ಲಿ ಲಭ್ಯವಾಗುವಂತಹ ವ್ಯವಸ್ಥೆಯಾಯಿತು. ಸಿಂಗಲಾಜಿಪುರದಿಂದ ಬೆಂಗಳೂರಿಗೆ ಎಸಿ ಕಾರುಗಳು ಓಡಾಡಿದವು. ಮದಿರೆಯ ಹೊಳೆ ಹರಿಯಿತು. ಮದನಾಂಗಿಯರು ನಿಶಾ ಕಾಲದಲ್ಲಿ ತೇಲಾಡಿದರು. ಶಾಸಕರು ತೃಪ್ತರಾದರು.

ಅರ್ಥ ಮಂತ್ರಿಗಳ ಜೊತೆ ಹೈಕಮಾಂಡಿನ ಪ್ರಧಾನ ಕಾರ್ಯದರ್ಶಿಗಳು ಅಲ್ಲಿಗೆ ಭೇಟಿ ನೀಡಿದರು. ಶಾಸಕರು ಆತಿಥ್ಯದ ಬಗ್ಗೆ ಮೆಚ್ಚುಗೆ ಸೂಚಿಸಿದರು. ಅರ್ಥಮಂತ್ರಿಗಳಿಗೆ ಸಂತೋಷವಾಯಿತು; ಪ್ರಧಾನ ಕಾರ್ಯದರ್ಶಿಗಳಿಗೆ ಖುಷಿಯಾಯಿತು. "ಅಚ್ಚಾ, ಕೃಷ್ಣ ಬಾಯಿ. ನೀವು ಒಳ್ಳೇ ಕೆಲಸ ಮಾಡಿದ್ದೀರಿ. ಪಾರ್ಟಿ ನಿಮ್ಮನ್ನು ಮರೆಯೋಲ್ಲ. ಮುಖ್ಯ ಮಂತ್ರಿಗಳಿಗೂ

ನಿಮ್ಮ ಪಾರ್ಟಿ ಅಧ್ಯಕ್ಷರಿಗೂ ಹೇಳ್ತೀನಿ. ನಿಮ್ಮನ್ನು ಗುರುತಿಸಬೇಕು. ನಮ್ಮ ರಾಷ್ಟ್ರೀಯ ಅಧ್ಯಕ್ಷರಿಗೂ ನಿಮ್ಮ ಬಗ್ಗೆ ಒಂದು ವರದಿಕೊಡ್ತೀನಿ" ಎಂದರು. ಅರ್ಥ ಮಂತ್ರಿಗಳು ಕೃಷ್ಣನ ಬೆನ್ನು ತಟ್ಟಿದ್ದರು.

ಕೃಷ್ಣ ಮತ್ತು ಅವನ ಯುವ ಬಳಗ ತಮ್ಮ ಶಕ್ತಿ ಮೀರಿ ಕೆಲಸ ಮಾಡಿದ್ದರು. ಗಿಡಸೀಮೆಯ ಆಡುಕುರಿಗಳ ರುಚಿ, ನಾಟಿ ಕೋಳಿಗಳ ಸ್ವಾಧವೆಂತಹದ್ದೆಂದು ಮಧ್ಯ ಪ್ರದೇಶದ ಶಾಸಕರಿಗೆ ತೋರಿದ್ದರು. ತೋಟದ ಮನೆ ಹಿಂಭಾಗದಲ್ಲೇ ಒಂದು ತಾತ್ಕಾಲಿಕ ಷೆಡ್ ನಿರ್ಮಾಣ ಮಾಡಿ ಅಲ್ಲಿ ಅಡುಗೆಯ ವ್ಯವಸ್ಥೆ ಮಾಡಲಾಗಿತ್ತು. ಅವನ ಶ್ರಮ ಮತ್ತು ನಿಷ್ಠೆ ಪಾರ್ಟಿಗೆ ಮೆಚ್ಚುಗೆಯಾಗಿತ್ತು.

ಮಧ್ಯಪ್ರದೇಶದ ವಿಧಾನ ಸಭೆಯಲ್ಲಿ ಬಹುಮತ ಸಾಬೀತು ಮಾಡುವ ದಿನ ಬಂತು. ಶಾಸಕರು ಕೃಷ್ಣನಿಗೆ "ಅಚ್ಚ ಬಾಯಿ. ನಿಮ್ಮ ಆತಿಥ್ಯ ಮರೆಯೋಕಾಗಲ್ಲ. ನಮ್ಮ ಸರ್ಕಾರ ನಿಮ್ಮನ್ನು ನೆನೆಯುತ್ತೆ. ನಿಮ್ಮ ಆತಿಥ್ಯದ ಋಣ ತೀರಿಸುತ್ತೆ" ಎಂದೆಲ್ಲಾ ಹೇಳಿ ಬೆಂಗಳೂರಿಗೆ ಹೊರಟರು. ಅಲ್ಲಿಂದ ನೇರವಾಗಿ ಭೂಪಾಲ್‌ಗೆ.

ಅಲ್ಲಿನ ವಿಧಾನ ಸಭೆಯಲ್ಲಿ ವಿಶ್ವಾಸಮತ ಯಾಚನೆಯಾಯಿತು. ಆಳುವ ಪಕ್ಷಕ್ಕೆ ಬಹುಮತ ಸಿಗಲಿಲ್ಲ. ಸರ್ಕಾರ ಬಿದ್ದು ಹೋಯಿತು. ರಾಜ್ಯ ಪಾಲರು ವಿರೋಧ ಪಕ್ಷಕ್ಕೆ ಸಾರ್ಕಾರ ರಚಿಸುವಂತೆ ಸೂಚಿಸಿದರು. ಕೇಂದ್ರ ಸರ್ಕಾರ ನಡೆಸುತ್ತಿದ್ದ ಪಕ್ಷವೇ ಇಲ್ಲಿಯೂ ಆಳುವ ಪಕ್ಷವಾಯಿತು. ಮಧ್ಯಪ್ರದೇಶದ ಹೊಸ ಸರ್ಕಾರ ಕರ್ನಾಟಕದ ತಮ್ಮ ಪಾರ್ಟಿಗೆ ಕೃತಜ್ಞತೆ ಸಲ್ಲಿಸಿತು; ರಾಷ್ಟ್ರೀಯ ಪಕ್ಷ ಮೆಚ್ಚುಗೆ ವ್ಯಕ್ತಪಡಿಸಿತು.

ಈ ಸಂದರ್ಭದಲ್ಲಿ ಮಧ್ಯಪ್ರದೇಶದ ಆಳುವ ಪಕ್ಷವು ಒಂದು ರಹಸ್ಯ ಕೃತಜ್ಞಕತಾ ಕೂಟವನ್ನು ಭೂಪಾಲಿನಲ್ಲಿ ಏರ್ಪಡಿಸಿತ್ತು. ಅದರಲ್ಲಿ ರಾಷ್ಟ್ರೀಯ ಪಕ್ಷದ ಅಧ್ಯಕ್ಷರು, ಪ್ರಧಾನ ಕಾರ್ಯದರ್ಶಿಗಳೂ, ಕರ್ನಾಟಕದ ಪಕ್ಷದ ದುರೀಣರು ವಿಶೇಷ ಆಹ್ವಾನಿತರಾಗಿದ್ದರು. ಅಲ್ಲಿನ ಮುಖ್ಯ ಮಂತ್ರಿಗಳು ಕೃಷ್ಣನನ್ನು ಕರೆತರುವಂತೆ ವಿಶೇಷವಾಗಿ ಹೇಳಿದ್ದರು.

ಕರ್ನಾಟಕದ ಐದಾರು ಜನ ಪ್ರಮುಖರು ಆ ಕೂಟದಲ್ಲಿ ಭಾಗವಹಿಸಿದ್ದರು. ಅದರಲ್ಲಿ ಕೃಷ್ಣನೇ ಅತ್ಯಂತ ಕಿರಿಯ. ಕೂಟದಲ್ಲಿ ಇವನನ್ನು ಎಲ್ಲರಿಗೂ ಪರಿಚಯ ಮಾಡಿಕೊಡಲಾಯಿತು. ರಾಷ್ಟ್ರೀಯ ಅಧ್ಯಕ್ಷರು ಮುಖ್ಯಮಂತ್ರಿಗಳನ್ನು ಪಕ್ಕಕ್ಕೆ ಕರೆದು "ಪಕ್ಷಕ್ಕೆ ಆಸೆಟ್ಟು. ಇವರಿಗೆ ಪಾರ್ಟಿಯಲ್ಲಿ ವಿಶೇಷ ಸ್ಥಾನ ಮಾನ ನೀಡಬೇಕು. ಇವನ ಬಗ್ಗೆ ಒಂದು ವಿಶೇಷ ಗಮನವಿರಲಿ" ಎಂದು ಸೂಚನೆ ನೀಡಿದರು.

ಈ ಘಟನೆಯಾದ ಮೂರು ತಿಂಗಳಿಗೆ ಸರಿಯಾಗಿ ಕರ್ನಾಟಕ ವಿಧಾನ ಸಭೆಯಿಂದ ವಿಧಾನ ಪರಿಷತ್ತಿಗೆ ನಡೆಯುವ ಚುನಾವಣೆ ಬಂದಿತು. ಆಳುವ ಪಕ್ಷದ ಸಂಖ್ಯಾ ಬಲದಿಂದ ನಾಲ್ಕು ಜನರನ್ನು ಆಯ್ಕೆ ಮಾಡಬಹುದಿತ್ತು. ಹಳೆಯ ಹುಲಿಗಳು ಬಹಳ ಜನ ಈ ಸ್ಥಾನಗಳ ಮೇಲೆ ಕಣ್ಣಿಟ್ಟಿದ್ದರು. ಹೈಕಮಾಂಡಿಗೆ ಪ್ರಾದೇಶಿಕ ಪಕ್ಷದ ಕಛೇರಿಯಿಂದ ಅನುಮೋದನೆಗಾಗಿ ಸಂಭಾವ್ಯರ ಪಟ್ಟಿ ಹೋಯಿತು. ಅದರ ಹಿಂದೆ ಮುಖ್ಯಮಂತ್ರಿಗಳ ರಹಸ್ಯ ಫ್ಯಾಕ್ಸ್ ಕೂಡ ರಾಷ್ಟ್ರೀಯ ಅಧ್ಯಕ್ಷರ ಕೈ ಸೇರಿತು.

ಹೈಕಮಾಂಡಿನಿಂದ ಅನುಮೋದನೆಗೊಂಡು ಸೂಚಿತವಾದ ನಾಲ್ಕು ಹೆಸರುಗಳಲ್ಲಿ ನಾಲ್ಕನೆಯ ಹೆಸರು ಎಲ್ಲರಿಗೂ ಆಶ್ಚರ್ಯವನ್ನುಂಟು ಮಾಡಿತ್ತು. ಅನೇಕ ಜನ ಹಳೆಯ ಹುಲಿಗಳು ಹುಬ್ಬು ಮೇಲೇರಿಸಿದ್ದರು. ಹೈಕಮಾಂಡಿನ ತೀರ್ಮಾನ ಅಸಮಾಧಾನವನ್ನುಂಟು ಮಾಡಿದ್ದರೂ ಪ್ರಶ್ನೆ ಮಾಡುವಂತಿಲ್ಲ.

ಹೈಕಮಾಂಡ್ ಕೃಷ್ಣನ ಹೆಸರನ್ನು ಆಯ್ಕೆ ಮಾಡಿ, ಅವನಿಗೆ ಮತ್ತೊಂದು ಸವಾಲನ್ನು ಒಡ್ಡಿತ್ತು. ಆಳುವ ಪಕ್ಷದ ನಾಲ್ಕನೆಯ ಅಭ್ಯರ್ಥಿಯ ಆಯ್ಕೆಗೆ ನಾಲ್ಕು ಮತಗಳು ಕಡಿಮೆ ಬೀಳುತ್ತಿದ್ದವು. ಆ ನಾಲ್ಕು ಮತಗಳನ್ನು ಪಕ್ಷೇತರ ಅಭ್ಯರ್ಥಿಗಳಿಂದ ಪಡೆಯಬೇಕಾಗಿತ್ತು. ಆ ಕೆಲಸವನ್ನು ಅದು ಹೇಗಾದರೂ ಸರಿ ಕೃಷ್ಣ ಮಾಡಿಕೊಳ್ಳಬೇಕಾಗಿತ್ತು. ಮುಖ್ಯಮಂತ್ರಿಗಳು ಮತ್ತು ಪಕ್ಷದ ಅಧ್ಯಕ್ಷರು ಕೃಷ್ಣನಿಗೆ ಈ ಬಗ್ಗೆ ಸ್ಪಷ್ಟವಾದ ತಿಳಿವಳಿಕೆ ನೀಡಿದ್ದರು.

ಚುನಾವಣೆ ಬಂತು. ಎಲ್ಲ ಪಕ್ಷಗಳು ಮತದಾನದ ಬಗ್ಗೆ ತಂತಮ್ಮ ಸದಸ್ಯರಿಗೆ ಯಾರ್‍ಯಾರಿಗೆ ಮತಹಾಕಬೇಕೆಂಬ ಬಗ್ಗೆ ಸ್ಪಷ್ಟವಾದ ವಿಪ್ ನೀಡಿದವು.

ಮತ ಎಣಿಕೆಯಾಯಿತು. ಆಳುವ ಪಕ್ಷದ ನಾಲ್ಕು ಜನ ಅಭ್ಯರ್ಥಿಗಳು ಗೆದ್ದರು. ಆದರೆ ಕೃಷ್ಣ ಮೊದಲ ಸುತ್ತಿನಲ್ಲಿ ಎಲ್ಲರಿಗಿಂತ ಅಧಿಕ ಮತ ಪಡೆದು ಮೊದಲನೆಯವನಾಗಿ ಆಯ್ಕೆಗೊಂಡಿದ್ದ. ಹಳೆಯ ಹುಲಿಗಳ ಲೆಕ್ಕಾಚಾರ ತಪ್ಪಾಗಿತ್ತು. ನಾಲ್ಕನೆಯ ಅಭ್ಯರ್ಥಿಯಾಗಿ ಹಳೆಯ ಹುಲಿಯೊಬ್ಬ ಆತಂಕಪಟ್ಟು ಆಯ್ಕೆಯಾಗಿದ್ದ. ಅವರ ಅನುಭವವನ್ನೆಲ್ಲ ಹೊಸಬನೊಬ್ಬ ಬುಡಮೇಲು ಮಾಡಿದ್ದ.

ಪಕ್ಷದಲ್ಲಿ ಕೃಷ್ಣ ಪ್ರಭಾವೀ ವ್ಯಕ್ತಿಯಾಗಲು ಬಹಳ ದಿನ ಬೇಕಾಗಿರಲಿಲ್ಲ. ಅಧ್ಯಕ್ಷರೇ ಆಗಲಿ, ಮುಖ್ಯ ಮಂತ್ರಿಗಳೇ ಆಗಲಿ ತಮ್ಮ ಅಂತರಂಗದ ಸಭೆಗಳಿಗೆ ಕೃಷ್ಣನನ್ನು ತಪ್ಪದೇ ಕರೆಯುತ್ತಿದ್ದರು. ಆಗಾಗ ಅವರೊಡನೆ ಅವನು ದೆಹಲಿಗೆ ಹೋಗುತ್ತಿದ್ದ. ಹೈಕಮಾಂಡಿನಲ್ಲಿ ಜನ ಪರಿಚಿತರಾದರು. ಅವನ ಕಾರ್ಯ ಚತುರತೆಯಿಂದಾಗಿ ಅವನು ಎಲ್ಲರಿಗೂ ಬೇಕಾದವನಾಗಿದ್ದ. ಒಂದು ಪಕ್ಷವೆಂದರೆ ಅದರ ಕಾರ್ಯಕರ್ತರು ! ಅವರ ಬೇಡಿಕೆಗಳನ್ನು ಮುಖ್ಯವಾಗಿ ಈಡೇರಿಸಬೇಕು.

ಕಾರ್ಯಕರ್ತರಲ್ಲಿ ಎರಡು ಬಗೆಯವರಿರುತ್ತಾರೆ. ಜನರ ಕೆಲಸ ಕಾರ್ಯಗಳನ್ನು ಮಾಡಿಸಿ, ಆ ಮೂಲಕ ತಮ್ಮ ಹೊಟ್ಟೆ ತುಂಬಿಸಿಕೊಳ್ಳುವಂಥವರು. ಇವರಿಗೆ ಅಂಥಾ ರಾಜಕೀಯ ಮಹತ್ವಾಕಾಂಕ್ಷೆ ಇರುವುದಿಲ್ಲ. ಮತ್ತೊಂದು ಬಗೆಯ ಕಾರ್ಯಕರ್ತರಿಗೆ ರಾಜಕೀಯ ಮಹತ್ವಾಕಾಂಕ್ಷೆ ಇರುತ್ತದೆ. ಅವರಿಗೆ ತಮ್ಮ ಹಿಂದೆ ಇರುವ ಜನರ ಕೆಲಸವೂ ಆಗಬೇಕು, ತಾವೂ ರಾಜಕೀಯವಾಗಿ ಬೆಳೆಯಬೇಕು. ಇವರಿಬ್ಬರ ಬಳಿ ಬರುವ ಜನರೂ ಏನಾದರೂ ಕೆಲಸವಿಟ್ಟು ಕೊಂಡೇ ಬರುತ್ತಾರೆ. ಅವರಿಗೆ ತಮ್ಮ ಕೆಲಸವಾಗಬೇಕು, ಅಷ್ಟೇ. ಅವರಿಗೂ ಗೊತ್ತು : ಈ ಕೆಲಸಗಳು ಉಚಿತವಾಗಿ ಆಗುವುದಿಲ್ಲ. ಎಲ್ಲಕ್ಕೂ ಬೆಲೆ ನಿಗಧಿಯಾಗಿದೆ. ಆ ಬೆಲೆ ತೆರಲೇಬೇಕು. ಮಾಮೂಲು ನೀಡುವುದು ಕಾಲಮಾನದ ಮಾಮೂಲಾಗಿದೆ. ಭ್ರಷ್ಟಾಚಾರ ಆರ್ಡರ್ ಅಫ್ ದ ಡೇ. ಯಾರು ತಪ್ಪು ತಿಳಿಯೋಲ್ಲ.

ಇಂಥ ಕಾರ್ಯಕರ್ತರು ಈಗ ಕೃಷ್ಣನ ಹಿಂದೆ ಅಧಿಕ. ಕೃಷ್ಣ ತನ್ನ ಸಂಬಂಧ ಮತ್ತು ಸಂಪರ್ಕದಿಂದಾಗಿ ಎಲ್ಲರ ಕೆಲಸಗಳನ್ನು ಮಾಡಿಕೊಡುತ್ತಿದ್ದ. ಪಕ್ಷಕ್ಕೆ ಅವನಿಂದ ಆಗಾಗ್ಗೆ ಹಣ ಸಂದಾಯವಾಗುತ್ತಿತ್ತು. ಪಾರ್ಟಿ ಸಭೆಗಳು, ಸಮಾವೇಶಗಳು ಇವನ ಜವಾಬ್ದಾರಿಯಲ್ಲಿ ನಡೆಯುವಂತೆ ಅಧ್ಯಕ್ಷರು ಆಶಿಸುತ್ತಿದ್ದರು. ಇವನಿಗೆ ಗಣಿ ಉದ್ಯಮಿಗಳು, ವರ್ತಕರು, ಮದ್ಯೋದ್ಯಮಿಗಳು, ರಿಯಲ್ ಎಸ್ಟೇಟ್ ವ್ಯವಹಾರಸ್ಥರು ಮಿತ್ರರಾದರು.

ಆಗಲೇ ಜನ ಇವನನ್ನು 'ಪೀಕೆ ಸಾರ್', 'ಪೀಕೆ ಸಾಹೇಬರು' ಎಂದು ಕರೆಯಲು ಆರಂಭಿಸಿದ್ದು. ಹಳೆಯ ಕೃಷ್ಣ ಮರೆಯಾಗಿ ಕಾರ್ಯಕರ್ತರ ಬಾಯಲ್ಲಿ 'ಪೀಕೆ'ಯಾದ ಕೃಷ್ಣ ಮಾಧ್ಯಮದವರ ಕಣ್ಣಿಗೆ ಬೀಳುವುದು ತಡವಾಗಲಿಲ್ಲ. ಅವರೂ ಅವನನ್ನು 'ಪೀಕೆ' ಎಂದೇ ಗುರುತಿಸತೊಡಗಿದರು.

ಪೀಕೆ ಪೂರ್ಣಾವಧಿ ರಾಜಕಾರಣಿಯಾದ ಮೇಲೆ ಅವನಿಗೊಂದು ಸಮಸ್ಯೆ ಎದುರಾಯಿತು. ಅವನಿಗೆ ಬರುತ್ತಿದ್ದ ಆದಾಯಕ್ಕೆ ಸರಿಯಾದ ಲೆಕ್ಕ ಇಡಲು ಆಗುತ್ತಿರಲಿಲ್ಲ. ಆದಾಯ ಮೂಲ ಏನೆಂದು ತೆರಿಗೆ ಇಲಾಖೆಯವರು ಕೇಳಿದರೆ ಏನೆಂದು ಹೇಳುವುದು ; ಯಾವ ಮೂಲ ತೋರುವುದು. ತಾನು ಮೊದಲಿನ ಹಾಗೆ ಎಲೆ ಮರೆಯ ಕಾಯಿಯಾಗಿ ಇರಲಾಗುತ್ತಿಲ್ಲ ; ಇರಲಾಗದು. ಊರಿನಲ್ಲಿರುವ ಹೊಲ ಉತ್ಪಾದನೆಯಾಗಲಿ, ತೋಟ ತುಡಿಕೆಗಳ ಆದಾಯವಾಗಲಿ ಜುಜುಬಿಯಾಗಿತ್ತು. ಬೇರೆ ಏನನ್ನಾದರೂ ಮಾಡಬೇಕು; ಹಣ ತೊಡಗಿಸಿ ಹಣದ ಬೆಳೆ ಬೆಳೆಯಬೇಕು. ಹೀಗೆ ಪೀಕೆಯ ಚತುರಮತಿ ಚಿಂತಿಸುತ್ತಿರುವಾಗಲೇ ಜೆ. ಪಿ. ನಗರದಲ್ಲಿದ್ದ ತನ್ನ ಮನೆಯ ಬಾಗಿಲನ್ನು ಯಾರೋ ಬಡಿದ ಸದ್ದಾಯಿತು.

ಕೆಲಸದ ಹುಡುಗ ಪೀಕೆಯ ಬಳಿ ಬಂದವನು "ಅಣ್ಣಾ, ಯಾರೋ ಮುನಿರಾಮಿ ರೆಡ್ಡಿ ಅಂತೆ. ನಿಮ್ಮನ್ನು ನೋಡಬೇಕಂತೆ" ಅಂದ.

ಪೀಕೆ ಒಮ್ಮೆ ಯೋಚಿಸಿದ. ನೆನಪಾದವನಂತೆ "ಹ್ಞಾ ಹ್ಞಾ. ಅವರನ್ನು ಒಳಕ್ಕೆ ಕಳಿಸು" ಎಂದ.

# ಅಧ್ಯಾಯ : ಎಂಟು

ಮುನಿರಾಮಿ ರೆಡ್ಡಿ ಪೀಕೆಗೆ ಅಪರಿಚಿತನೇನಲ್ಲ. ಮಧ್ಯಪ್ರದೇಶದ ಪಕ್ಷಾಂತರಿ ಶಾಸಕರನ್ನು ಸಂತೃಪ್ತಪಡಿಸುವ ಕಾಯಕದಲ್ಲಿ ಕೃಷ್ಣನಿಗೆ ಪೂರಕವಾಗಿ ಕೆಲಸ ಮಾಡಿದ್ದವನು. ಬೆಂಗಳೂರಿನಿಂದ ಅವನ ಎ. ಸಿ. ಕಾರುಗಳಲ್ಲಿ ಕತ್ತಾಲಾದ ಮೇಲೆ ಹೆಂಡ ಮತ್ತು ಹೆಣ್ಣುಗಳನ್ನು ಪೀಕೆ ತೋಟಕ್ಕೆ ಕರೆತಂದು ಬೆಳಕಾಗುವುದರೊಳಗೆ ಹೆಣ್ಣುಗಳನ್ನು ಬೆಂಗಳೂರಿಗೆ ವಾಪಸ್ಸು ಕರೆದುಕೊಂಡು ಹೋಗುವುದು ಅವನ ಕಡೆಯವರ ಕೆಲಸವಾಗಿತ್ತು. ಅರ್ಥಮಂತ್ರಿಗಳಿಗೆ ಬೇಕಾದ ಮನುಷ್ಯ ಅವನಾಗಿದ್ದುದರಿಂದ ಈ ಬಾಬ್ತಿನ ಸರಬರಾಜನ್ನು ಅವನಿಗೆ ವಹಿಸಿದರು. ಪೀಕೆಯ ತೋಟಕ್ಕೆ ಆ ಸಮಯದಲ್ಲಿ ಒಮ್ಮೆ ಬಂದು ಹೋಗಿದ್ದನು.

ಪೀಕೆ ಎಂ. ಎಲ್. ಸಿ ಆದಾಗ ವಿಧಾನಸೌಧದಲ್ಲಿ ಭೇಟಿಯಾಗಿ ಹೂ ಬೊಕೆಯನ್ನು ಕೊಟ್ಟು 'ಕಂಗ್ರಾಟ್ಸ್' ಹೇಳಿದ್ದನು. ಈ ಮುನಿರಾಮಿ ರೆಡ್ಡಿ ಇವನ ಮನೆಗೆಂದೂ ಬಂದಿರಲಿಲ್ಲ. ಇಂದು ಏಕೆ ಬಂದ ? ಹೇಳಿ ಕೇಳಿ ಉದ್ಯಮಿ, ವ್ಯವಹಾರಸ್ಥ. ಏನೋ ಕೆಲಸವಾಗಬೇಕು, ಬಂದಿದ್ದಾನೆ ಎಂದು ಪೀಕೆ ಯೋಚಿಸಿದ.

ಪೀಕೆ ತನ್ನ ಮನೆಯಲ್ಲಿ ತನಗಾಗಿ ಒಂದು ಕಛೇರಿಯ ತರದ ರೂಮನ್ನು ವ್ಯವಸ್ಥೆ ಮಾಡಿಕೊಂಡಿದ್ದ. ತಿರುಗುವ ಕುರ್ಚಿಯ ಮುಂದೆ ಮೂರಡಿ ನಾಲ್ಕಡಿಯ ಒಂದು ಸಾಗುವಾನಿ ಮರದ ಮೇಜು. ಅದರ ಮಗ್ಗುಲಲ್ಲಿ ಎರಡು ಮೆತ್ತನೆ ಕುರ್ಚಿಗಳು. ತೀರ ಒಳ ವ್ಯವಹಾರಗಳನ್ನು ಇಲ್ಲಿಯೇ ಅವನು ಮಾಡುತ್ತಿದ್ದುದು. ರೂಮಿನ ಒಂದು ಮಗ್ಗುಲಿಗೆ ಎರಡು ಗಾಡ್ರೆಜ್ ಆಲ್ಮೇರಾಗಳು; ಕಿಟಕಿಗಳಿಗೆ ಬೆಲೆಬಾಳುವ ನೈಲಾನ್ ಕರ್ಟನ್ನುಗಳು; ನೆಲಕ್ಕೆ ಹಾಸಿದ ರತ್ನಗಂಬಳಿ - ಅವನ ಅಭಿರುಚಿಯನ್ನು ತೋರುತ್ತಿದ್ದವು. ಟೇಬಲ್ಲಿನ ಮೇಲೆ ಲ್ಯಾಂಡ್ ಫೋನ್‌ಗಳು.

ಕೆಲಸದ ಹುಡುಗ ಮುನಿರಾಮಿ ರೆಡ್ಡಿಯನ್ನು ಡ್ರಾಯಿಂಗ್ ರೂಂಗೆ ಕರೆತಂದ. ಅಣ್ಣ ಹೊರಗೆ ಬಾರದಿರುವುದನ್ನು ಕ್ಷಣಾರ್ಧದಲ್ಲಿ ಅರ್ಥ ಮಾಡಿಕೊಂಡ. ಸಾಮಾನ್ಯವಾಗಿ ತನ್ನನ್ನು ನೋಡ ಬರುವ ಎಲ್ಲರನ್ನೂ ಅಣ್ಣ ಡ್ರಾಯಿಂಗ್ ರೂಂನಲ್ಲೇ ಭೇಟಿಯಾಗುತ್ತಿದ್ದ; ಅಹವಾಲು ಕೇಳುತ್ತಿದ್ದ; ಮಾತುಕತೆ ಮಾಡುತ್ತಿದ್ದ. ಕೆಲವು ಅಂತರಂಗದ ಅಪ್ತರನ್ನು ರೂಮಿನಲ್ಲಿ ಕೂರಿಸಿ ಮಾತನಾಡುತ್ತಿದ್ದ. ಮುನಿರಾಮಿ ರೆಡ್ಡಿಯನ್ನು ರೂಮಿನ ಬಾಗಿಲವರೆಗೂ ಕರೆತಂದು 'ಒಳಗೆ ಹೋಗಿ ಸಾರ್' ಎಂದು ತಾನು ಅಲ್ಲೇ ನಿಂತ.

"ನಮಸ್ಕಾರ ಪೀಕೆ ಅವರೆ, ಈ ಬಡವ ತಮಗೆ ನೆನಪಿದ್ದಾನೋ" ಎಂದು ಮುನಿರಾಮಿ ರೆಡ್ಡಿ ತನ್ನ ಎರಡು ಕೈಗಳನ್ನು ಎತ್ತಿ ನಮಸ್ಕಾರ ಮಾಡುತ್ತಾ ಒಳ ಪ್ರವೇಶ ಮಾಡಿದ.

"ಬನ್ನಿ ಬನ್ನಿ, ರೆಡ್ಡಿಯವರೆ, ನೀವು ಬಡವರೆಂದರೆ ಈ ದೇಶದಲ್ಲಿರುವ ಬಡವರೆಲ್ಲಿಗೆ ಹೋಗಬೇಕು. ನಿಮ್ಮನ್ನು ಮರೆಯುವುದುಂಟೆ ? ಏನ್ ಸಮಾಚಾರ ? ಏನು ಒಂದು ಫೋನು ಕೂಡ ಮಾಡದೆ ಧಿಡೀರನೆ ಬಂದಿರಿ ?" ಎಂದ ಪೀಕೆ.

"ಇಲ್ಲೇ ಜೆ. ಪಿ. ನಗರದಲ್ಲಿ ನಮ್ಮ ನಂಟರೊಬ್ಬರ ನಿಶ್ಚಿತಾರ್ಥವಿತ್ತು. ಅಲ್ಲಿಗೆ ಬಂದಿದ್ದೆ. ನಿಮ್ಮ ಮನೆ ಈ ಏರಿಯಾದಲ್ಲಿರುವುದು ನನಗೆ ಗೊತ್ತಿತ್ತು. ಏಕೆ ಒಮ್ಮೆ ನಿಮ್ಮನ್ನು ಭೇಟಿ ಮಾಡ್ಬಾರ್ದು ಅನ್ನಿಸಿತು. ಸಿಕ್ಕರೂ ಸಿಗಬಹುದು, ಪ್ರಯತ್ನಿಸುವುದರಲ್ಲಿ ತಪ್ಪೇನು ಅಂತ ಬಂದೆ. ನನ್ನ ಪುಣ್ಯ. ನೀವು ಮನೆಯಲ್ಲೇ ಇದ್ದಿರಿ" ಮುನಿರಾಜು ರೆಡ್ಡಿಯ ಮಾತಿನಲ್ಲಿ ತೆಲುಗು ಛಾಯೆ ಎದ್ದು ತೋರುತ್ತಿತ್ತು. ಕನ್ನಡವನ್ನು ತೆಲುಗಿನ ರೀತಿ ಉಚ್ಚರಿಸುವುದು ಪೀಕೆಗೆ ಯಾವಾಗಲೂ ವಿಚಿತ್ರವಾಗಿ ತೋರುತ್ತಿತ್ತು.

ತನ್ನ ಆರೇಳು ವರ್ಷದ ಬೆಂಗಳೂರಿನ ಸಹವಾಸದಲ್ಲಿ ಅನೇಕ ಜನರ ತಮಿಳ್ಗನ್ನಡ, ತೆಲುಗನ್ನಡ, ಮಲೆಯಾಳಂಬೆರೆತ ಕನ್ನಡ, ಉರ್ದುಮಿಶ್ರಿತ ಕನ್ನಡ, ಮಾರ್ವಾಡಿ ಕನ್ನಡವನ್ನು ಕೇಳಿದ್ದ. ತರಾವರಿ ಜನರು ಅವರವರ ಭಾಷೆಗೆ ತಕ್ಕಂತೆ ಕನ್ನಡ ಬಳಸುತ್ತಿದ್ದದ್ದು ಆಶ್ಚರ್ಯತಂದಿತ್ತು. ಈ ಜನರೂ ಹಾಗೆಯೇ ಎಲ್ಲಿರಿಗೂ ಬಾಗಿ ಬಳಕುತ್ತಾರೆ ಅಂದುಕೊಳ್ಳುತ್ತಿದ್ದ.

ಈ ಮಾನಿರಾಮಿ ರೆಡ್ಡಿ ನನ್ನ ಹತ್ತಿರವೆ ಬಳಂಗ್ ಬಿಡುತ್ತಿದ್ದಾನೆ. ಸುಮ್ಮಸುಮ್ಮನೆ ಕ್ಷೇಮ ಸಮಾಚಾರ ವಿಚಾರಿಸಿಕೊಂಡು ಹೋಗಲು ಬರುವ ಆಸಾಮಿಯಲ್ಲ. ಏನೋ ಕೆಲಸವಿರಬೇಕು ಬಂದಿದ್ದಾನೆ. "ಸಂತೋಷ ರೆಡ್ಡಿಯವರೆ, ಬನ್ನಿ ಕುಳಿತುಕೊಳ್ಳಿ" ಎಂದವನೆ ಬಾಗಿಲ ಕಡೆ ಮುಖ ಮಾಡಿ "ಲೇ ಇವನೆ, ಎರಡು ಟೀ ತೆಗೆದುಕೊಂಡು ಬಾ" ಎಂದ.

ಇಬ್ಬರು ಉಭಯ ಕುಶಲೋಪರಿ ವಿಚಾರಿಸಿಕೊಂಡರು. ಹುಡುಗ ಟೀ ತಂದು ಅವರ ಎದುರು ಇಟ್ಟ. ರೆಡ್ಡಿ ಟೀ ಕಫ್ ಅನ್ನು ತೆಗೆದುಕೊಂಡು ಟೀಯನ್ನು ತುಟಿಯ ಬಳಿಯಿಂದ 'ಸೊರ್' ಎಂದು ಸದ್ದು ಎಳೆದು ಗುಟುಕರಿಸಿದ. ಪೀಕೆಗೆ ಅದನ್ನು ನೋಡಲು ಮೋಜೆನಿಸಿತು.

"ನೋಡಿ ಪೀಕೆ ಸಾಹೇಬರೆ, ನಿಮ್ಮತ್ರ ಮುಚ್ಚುಮರೆ ಏಕೆ ? ಬಹಳ ದಿನಗಳಿಂದಲೂ ನಿಮ್ಮತ್ರ ಒಂದು ವಿಷಯ ಮಾತನಾಡೋಣ ಅಂತಿದ್ದೆ. ಅದು ನಾನು ನಿಮ್ಮೂರಿಗೆ ಬಂದ ದಿನ ನನ್ನ ತಲೆಗೆ ಹೊಕ್ಕಿತು ನೋಡಿ. ಅಂದಿನಿಂದ ನನ್ನ ತಲೇಲಿ ಒಂದೇ ಸಮನೆ ಕೊರೀತಿದೆ. ಈ ಮಧ್ಯೆ ನೀವು ಬಿಸಿಯಾದಿರಿ. ರಾಜಕೀಯ. ನಿಮಗೆ ಒಳ್ಳೆಯದಾಯ್ತು ಬಿಡಿ. ನಮಗೂ ಒಳ್ಳೆಯದಾಗುತ್ತೆ ಬಿಡಿ. ಸ್ವಲ್ಪ ನೀವು ಹೊಸ ವ್ಯವಸ್ಥೆಗೆ ಒಗ್ಗಿಕೊಳ್ಳಲಿ ಎಂದು ನಿಮ್ಮ ಹತ್ತಿರ ಮಾತನಾಡಲು ಬರಲಿಲ್ಲ. ಈಗ ಸಮಯ ಕೂಡಿ ಬಂತು. ನಿಮ್ಮ ಬಳಿ ಬಂದಿದ್ದೇನೆ." ಎಂದು ನುಡಿದ.

ಪೀಕೆ "ಏನ್ ವಿಷಯ ರೆಡ್ಡಿಯವರೆ ನಿಮ್ಮ ತಲೇಲಿ ಕೊರೀತಿರೋದು ? ನಮ್ಮಿಂದ ಪರಿಹಾರ ಸಿಗುತ್ತೆ ಅನ್ನೋದಾದ್ರೆ ಮಾಡೋಣ" ಎಂದ ನಗುತ್ತಾ.

"ನನ್ನ ವ್ಯವಹಾರ ನಿಮಗೊತ್ತು. ನಂದು ಒಂದಲ್ಲ ಅಂತ ಎರಡೆರಡು ವ್ಯವಹಾರ ಒಟ್ಟಿಗೆ ಮಾಡುತ್ತಿದ್ದೇನೆ" ಎಂದ ಮುನಿರಾಮಿ ರೆಡ್ಡಿ.

"ಹ್ಹೂಂ. ಗೊತ್ತು" ಎಂದ ಪೀಕೆ ತನ್ನ ತಿರುಗು ಕುರ್ಚಿಯನ್ನು ಒಮ್ಮೆ ಎಡಕ್ಕೂ ಒಮ್ಮೆ ಬಲಕ್ಕೂ ತಿರುಗಿಸಿದ. ತನ್ನ ಸೂಕ್ಷ್ಮ ಕಣ್ಣುಗಳಿಂದ ತನ್ನೆದುರು ಕುಳಿತಿದ್ದ ಮುನಿರಾಮಿ ರೆಡ್ಡಿಯನ್ನು ನೋಡತೊಡಗಿದ.

ಮುನಿರಾಮಿ ರೆಡ್ಡಿ ಬೆಂಗಳೂರು ಮತ್ತು ಕೋಲಾರಗಳಲ್ಲಿ ಎಂ. ಆರ್ ರೆಡ್ಡಿಯೆಂದೇ ಪ್ರಸಿದ್ಧ. ಈಗ ಅವನಿಗೆ ಐವತ್ತೈದರ ಆಜು ಬಾಜು ವಯಸ್ಸು. ಬೆಂಗಳೂರಿನಲ್ಲಿ ಅವನ "ಎಂ. ಆರ್. ಗ್ರಾನೈಟ್ಸ್" ಮತ್ತು "ಎಂ. ಆರ್ ಅಸೋಸಿಯೇಟ್ಸ್" ಸಂಸ್ಥೆಗಳು ಕೆಲಸ ಮಾಡುತ್ತಿದ್ದವು. "ಎಂ. ಆರ್ ಗ್ರಾನೈಟ್ಸ್" ಬೆಂಗಳೂರಿನ ಜನರಿಗೆ ವಿವಿಧ ಬಗೆಯ ಗ್ರಾನೈಟ್ಸ್ ಕಲ್ಲುಗಳನ್ನು, ನೆಲಹಾಸುಗಳನ್ನು ತರಿಸಿ ನೀಡುತ್ತಿತ್ತು. ಅವನ ಮತ್ತೊಂದು ಸಂಸ್ಥೆ ಮುಖ್ಯವಾಗಿ ರಿಯಲ್ ಎಸ್ಟೇಟ್ ದಂದೆಯಲ್ಲಿ ನಿರತವಾಗಿತ್ತು. ಸೈಟ್ ಕೊಡಿಸುವುದು, ಮಾರಿಸುವುದು, ಬಾಡಿಗೆ ಮನೆ ಕೊಡಿಸುವುದು, ಬಾಡಿಗೆಯವರನ್ನು ಬಿಡಿಸುವುದು- ಇವು ಮೇಲ್ನೋಟಕ್ಕೆ ಎದ್ದು ಕಾಣುವ ಅದರ ವ್ಯವಹಾರವಾಗಿತ್ತು. ಪೀಕೆಗೆ ತಿಳಿದಂತೆ ಎಂ. ಆರ್. ರೆಡ್ಡಿಯ ವ್ಯವಹಾರಗಳು ಇನ್ನೂ ಆಳವಾಗಿದ್ದವು. ಅವನ್ನು ತಿಳಿಯದವನಂತೆ ಇರುವುದೇ ಚಾಣಾಕ್ಷತನವೆಂದು ಅವನು ಸುಮ್ಮನಿದ್ದನು. ಪೀಕೆಯ ಗುಣವೂ ಅದಾಗಿತ್ತು. ಎದುರಿಗಿದ್ದವರ ವ್ಯವಹಾರವ... ತಿಳಿದೂ ತಿಳಿಯದಂತಿರುವುದು. ಅದು ಬದುಕಿನ ಲೆಕ್ಕಚಾರವೆಂದು ಅವನು ತಿಳಿದಿದ್ದನು.

"ಅದರಲ್ಲಿ ನನ್ನ 'ಎಂ. ಆರ್ ಗ್ರಾನೈಟ್ಸ್' ತುಂಬಾ ಚೆನ್ನಾಗಿ ನಡೀತಿದೆ. ಎಲ್ಲಾ ಕಾನೂನು ನಿಯಮ ಬದ್ಧವೇ ಸ್ವಾಮಿ. ಅದನ್ನು ನನ್ನ ಇನ್ನೊಂದು ದಂದೆಯ ಬಗ್ಗೆ ಹೇಳಲಾರೆ. ಅಲ್ಲಿ ಸ್ವಲ್ಪ ಹೆಚ್ಚು ಕಮ್ಮಿ ಆಗ್ತದೆ; ಎಲ್ಲ ಕಡೆ ಸ್ವಲ್ಪ ಅಡ್ಜೆಸ್ಟ್ ಆಗಬೇಕು. ಇಲ್ಲದಿದ್ದರೆ ವ್ಯವಹಾರ ಸಾಗೋಲ್ಲ." ಸ್ವಲ್ಪ ತಡೆದು ಮತ್ತೆ ಟೀಯನ್ನು 'ಸೊರ್' ಎಂದು ಸದ್ದು ಮಾಡಿ ಗುಟುಕಿಸಿದನು. "ನನ್ನ 'ಎಂ. ಆರ್ ಗ್ರಾನೈಟ್ಸ್' ವಿಚಾರಕ್ಕೆ ಮತ್ತೆ ಬರ್‍ತೀನಿ. ಬಿಜಾಪುರ, ರಾಯಚೂರು ಕಡೆಯಿಂದ ಕಲ್ಲು ಬರ್‍ತದೆ. ರಾಜಾಸ್ಥಾನದಿಂದಲೂ ತರಿಸ್ತೀನಿ. ನಮ್ಮ ಜಿಲ್ಲೆಯಲ್ಲೂ ಸ್ವಲ್ಪ ಸ್ವಲ್ಪ ಬರ್‍ತದೆ. ಆದರೆ ನಾನು ನಿಮ್ಮ ಊರಿಗೆ ಬಂದಿದ್ದಾಗ ಅಲ್ಲಿನ ಪರಿಸರ ನೋಡಿ ಮಹದಾನಂದವಾಯಿತು. ಇನ್ನು ನೂರು ವರ್ಷ ನನ್ನಂಥ ನೂರಾರು ಜನ ಹೆಣಗಾಡಿದರೂ ಮುಗಿಸಲಾರದ ಗ್ರಾನೈಟ್ಸ್ ನೆಲದ ಮೇಲೆ, ನೆಲದ ಒಳಗೆ ಬಿದ್ದಿದೆ, ಸ್ವಾಮಿ. ಅಂಥ ನಿಧಿ ಮೇಲೆ ನೀವು ಕೂತಿದ್ದೀರಿ. ಆದರೆ ನಿಧಿಯನ್ನು ತುಳಿದೇ ಬಾಳುತ್ತಿದ್ದೇವೆಂದು ನಿಮಗೆ ಗೊತ್ತಿಲ್ಲ"

"ನೀವು ಏನು ಹೇಳ್ತಿದ್ದೀರಾ ರೆಡ್ಡಿಯವರೆ? ನಮ್ಮಲ್ಲಿ ಎಲ್ಲಿದೆ ಗ್ರಾನೈಟ್ಸ್? ಅಲ್ಲಿರೋದು ಬರೀ ಬೆಟ್ಟ ಗುಡ್ಡ, ಬರೀ ತಕ್ಕಲು."

"ಸ್ವಾಮಿ, ಅದು ನಿಮ್ಮ ಕಣ್ಣಿಗೆ ಬರೀ ಕಲ್ಲು. ಆದರೇ ಅದು ನನ್ನ ಕಣ್ಣಿಗೆ ಚಿನ್ನ ಸ್ವಾಮಿ. ಬ್ಲಾಕ್‌ಗೋಲ್ಡ್ ಅಂದರೆ ಕರೀಚಿನ್ನ. ಬ್ಲಾಕ್‌ಗೋಲ್ಡ್ ಅಂದರೆ ಕಬ್ಬಿಣ ಅನ್ಕೋಬೇಡಿ. ಅದನ್ನು ಪುಡಿ ಮಾಡಿ ಕರಗಿಸಿದರೆ ಕಬ್ಬಿಣವೂ ಸಿಗುತ್ತೆ. ಆದರೆ ಆ ಕೆಲಸವನ್ನು ನಾವು ಮಾಡೋದು ಬೇಡ. ಸುಮ್ನೆ ನಿಮ್ಮ ಕಡೆ ಕಲ್ಲನ್ನು ಪಾಲೀಸ್ ಮಾಡಿಸಿದರೆ ಸಾಕು. ಅದು ಚಿನ್ನವಾಗುತ್ತೆ."

"ರೆಡ್ಡಿಯವರೆ, ಸುತ್ತಿ ಬಳಸಿ ಮಾತನಾಡಬೇಡಿ. ವಿಷಯ ಏನೆಂದು ನೇರವಾಗಿ ಹೇಳಿ" ಎಂದ ಪೀಕೆ.

"ನೋಡಿ ಪೀಕೆ ಸಾಹೇಬರೆ, ನಾನು ನಿಮ್ಮ ಊರಿಗೆ ಬಂದಾಗ ರಾತ್ರಿಯಾಗಿತ್ತು. ಏನೂ ಕಾಣಲಿಲ್ಲ. ಆದರೆ ಹೋಗುವಾಗ ಹೊತ್ತಿಗೆ ಮುಂಚೆ ನಿಮ್ಮ ಊರನ್ನು ಬಿಟ್ಟು ಹದಿನೈದು ಇಪ್ಪತ್ತು ಮೈಲು ಪ್ರಯಾಣ ಮಾಡಿದ ಮೇಲೆ ನಿಮ್ಮ ಪ್ರದೇಶದ ಪರಿಚಯವಾಯಿತು. ಅಲ್ಲಿನ ಕಲ್ಲು ಬರೀ ಕಲ್ಲಲ್ಲವೆಂದು ನನ್ನ ಅನುಭವದ ಕಣ್ಣು ಅರ್ಥ ಮಾಡಿಕೊಂಡಿತು. ಗ್ರಾನೈಟ್ಸ್ ಗಣಿಗಾರಿಕೆಗೆ ಕನಕಪುರ, ರಾಮನಗರ, ಮಾಗಡಿ ತಾಲ್ಲೂಕುಗಳು ಹೇಳಿ ಮಾಡಿಸಿದಂತಿವೆ. ಅಲ್ಲಿನ ಗುಪ್ತ ಸಂಪತ್ತಿಗೆ ಇನ್ನೂ ಯಾರೂ ಕೈಹಾಕಿಲ್ಲ ಸ್ವಾಮಿ. ಅದನ್ನು ನೀವು ಮಾಡಬೇಕು; ಅದು ನಿಮ್ಮಿಂದ ಮಾತ್ರ ಸಾಧ್ಯ ಎಂದು ಹೇಳಲು ಬಂದೆ ಪೀಕೆ ಸ್ವಾಮಿಯವರೇ" ಎಂದ ಎಂ. ಆರ್ ರೆಡ್ಡಿ ಪೀಕೆಯ ಮುಖವನ್ನೇ ನೋಡುತ್ತಾ.

ಪೀಕೆ ರೆಡ್ಡಿಯ ಮಾತುಗಳನ್ನು ಆಲಿಸಿದ. ತೂಗಿದ. ಅದರ ಸಾಧಕ ಬಾಧಕಗಳು, ಕಾರ್ಮಿಕ ಸಮಸ್ಯೆ, ಮಾರಾಟ ವ್ಯವಸ್ಥೆ ಎಲ್ಲಾ ಗೋಜಲುಗಳು ಅವನ ಕಣ್ಮುಂದೆ ಹಾದು ಹೋದವು. ಆ ಸಮಸ್ಯೆಗಳನ್ನೂ ತಾನು ನಿಭಾಯಿಸಬಲ್ಲೆನೆಂಬ ವಿಶ್ವಾಸವಿತ್ತು. ಸೋಲು ಅವನ ಜಾಯಮಾನದಲ್ಲ.

"ಅದೆಲ್ಲಾ ನನ್ನಿಂದ ಸಾಧ್ಯವಾ ರೆಡ್ಡಿಯವರೇ? ಗಣಿಗಾರಿಕೆ ಎಂದರೆ ಹುಡುಗಾಟವೆ? ಜೊತೆಗೆ ಆ ಕ್ಷೇತ್ರದಲ್ಲಿ ನನಗೆ ಅನುಭವವಿಲ್ಲ" ನಿಧಾನವಾಗಿ ಆಲೋಚನೆ ಮಾಡುತ್ತಿರುವವನಂತೆ ಪೀಕೆ ನುಡಿದ.

"ಅದಕ್ಕೆ ಅಲ್ಲವಾ ಸಾಹೇಬರೆ ನಾನು ನಿಮ್ಮಲ್ಲಿಗೆ ಬಂದಿರೋದು. ಆ ಅನುಭವ ನಾನು ಕೊಡ್ತೀನಿ. ಬಂಡವಾಳದ ಬಗ್ಗೆ ಚಿಂತೆ ಮಾಡ್ಬೇಡಿ. ಹತ್ತಾರು ವರ್ಷದಿಂದ ಈ ದಂದೆಯಲ್ಲಿದ್ದೇನೆ. ಗಣಿಗಾರಿಕೆ ಮಾಡುವವರನ್ನು ನಾನು ಹತ್ತಿರದಿಂದ ಕಂಡಿದ್ದೇನೆ. ನಾನು ನಿಮ್ಮ ಜೊತೆಗಿರ್ತೇನೆ. ನೀವು ವ್ಯವಹಾರ ಸುರು ಮಾಡ್ಬೇಕು, ಅಷ್ಟೆ."

"ಗಣಿಗಾರಿಕೆ ಮಾಡಿದೆವು ಅಂದ್ಕೊಳ್ಳಿ, ಗ್ರಾನೈಟ್ಸ್‌ಗೆ ಮಾರುಕಟ್ಟೆ ಎಲ್ಲಿ ಹುಡುಕೋದು ?" ಎಂದು ಕೇಳಿದ ಪೀಕೆ.

"ಅಲ್ಲ ಸ್ವಾಮಿ, ಈಗ ಜನಗಳ ಹತ್ತಿರ ದುಡ್ಡಿದೆ. ಗ್ರಾನೈಟ್ಸ್, ಮಾರ್ಬಲ್ಲು ಇಲ್ಲದೆ ಮನೆ ಕಟ್ಟಿಸೋಲ್ಲ ಅಂತಾರೆ. ಅಂಥವರಿಗೆ ಅವನ್ನು ನಾವು ಸಪ್ಲೈ ಮಾಡ್ತೀವಿ. ನನ್ನಂಥೋರು ನೂರಾರು ವ್ಯಾಪಾರಿಗಳು ನಿಮ್ಮ ಹತ್ರ ಬರ್ತಾರೆ. ಆ ಬಗ್ಗೆ ಈಗ ನೀವು ಚಿಂತೆ ಮಾಡುವುದು ಬೇಡ. ಮೊದಲು ದಂದೆ ಸುರುಮಾಡಿ. ಅದಕ್ಕೆ ಬೇಕಾದ ಇಲಾಖಾ ಅನುಮತಿಗಳು ನಿಮಗೆ ಸಿಗುವುದು ಕಷ್ಟವಲ್ಲ. ನಿಮಗೆ ಎಲ್ಲಾ ಬೇಕಾದವರೆ ಇದ್ದಾರೆ. ನಿಮಗೆ ಹೇಗೆ ಬೇಕೋ ಹಾಗೆ ಮಾಡಿಸಿಕೊಳ್ಳಬಹುದು" ಎಂದು ತುಟಿಯ ಮೇಲೆ ನಗೆಯಾಡಿಸಿದ.

ಪೀಕೆಗೆ ಈ ಉದ್ಯಮಕ್ಕೆ ಕೈ ಹಾಕಿದರೆ ಮೋಸವಿಲ್ಲ ಅನ್ನಿಸಿತು. "ಆಯ್ತು ರೆಡ್ಡಿಯವರೆ, ಆದರೆ ನಾನು ಹೊಸಬ. ನಿಮ್ಮ ಸಹಾಯ ತುಂಬಾ ಅಗತ್ಯ" ಎಂದ.

"ಅದರ ಬಗ್ಗೆ ನೀವು ಯೋಚನೆ ಮಾಡಬೇಡಿ. ಗಣಿ ಉದ್ಯಮದ ಬಗ್ಗೆ ನನಗೆ ಚೆನ್ನಾಗಿ ಅರಿವಿದೆ. ಕಳೆದ ಹತ್ತು ಹದಿನೈದು ವರ್ಷದಿಂದ ಒಡನಾಟವಿದೆ. ನೀವು ನಾವು ಸೇರಿ ಒಂದು ಒಪ್ಪಂದಕ್ಕೆ ಬರೋಣ. ಗಣಿ ಉದ್ಯಮ ನಿಮ್ಮದು, ಬಂಡವಾಳ ನಿಮ್ಮದು. ಆದರೆ ಎರಡು ವರ್ಷ ನಿಮ್ಮ ಗಣಿಗಾರಿಕೆಯ ಮುಖ್ಯ ಏಜೆನ್ಸಿ ನಂದು. ಸೋಲ್ ಮಾರಾಟಗಾರ. ನೀವು ಇನ್ನಾರಿಗೂ ಮಾರಾಟ ಮಾಡಬಾರದು. ಇದಕ್ಕೆ ನೀವು ಒಪ್ಪಬೇಕು." ಎಂದು ರೆಡ್ಡಿ ಹೇಳಿದ.

ಮುಂದಿನ ದಿನಗಳಲ್ಲಿ ಪೀಕೆ ಮತ್ತು ರೆಡ್ಡಿ ತುಂಬಾ ಬಿಸಿಯಾದರು. ರೆಡ್ಡಿ ಮತ್ತು ಪೀಕೆ ತಲಾ ಒಂದೊಂದು ಕಾರಲ್ಲಿ ಸಿಂಗಲಾಜಿ ಪುರಕ್ಕೆ ಬಂದರು. ಅವರೊಡನೆ ಗಣಿ ಮತ್ತು ಭೂವಿಜ್ಞಾನ ಇಲಾಖೆಯ ಮೂರು ನಾಲ್ಕು ಜನ ಅಧಿಕಾರಿಗಳು ಇದ್ದರು. ಕಾಡನಕುಪ್ಪೆ, ಕವಣಾಪುರ, ದೊಡ್ನಳ್ಳಿ, ರೇವಣ ಸಿದ್ದೇಶ್ವರ ಬೆಟ್ಟ, ದೊಡ್ಡಬೆಟ್ಟ, ತೆಂಗಿನ ಕಲ್ಲು, ಅತ್ತಿಹಳ್ಳಿ, ಕಬ್ಬಾಳು ರಾಮನಗರ, ಕನಕಪುರ, ಚನ್ನಪಟ್ಟಣ ತಾಲ್ಲೂಕುಗಳ ನಡುವೆ ಬರುತ್ತಿದ್ದವು. ಇಲಾಖಾ ಅಧಿಕಾರಿಗಳು ಎಲ್ಲೆಲ್ಲಿ ಎಂಥೆಂಥ ಕಲ್ಲುಗಳು ದೊರೆಯ ಬಹುದೆಂದು ಪರಿಶೀಲಿಸಿದರು. ತಮಗೆ ಬೇಕಾದ ಮಾದರಿಗಳನ್ನು ಶೇಖರಿಸಿಕೊಂಡರು.

ಈ ಮೂರು ತಾಲ್ಲೂಕುಗಳ ನಡುವಿನಲ್ಲಿ ಸುಮಾರು ಐವತ್ತು ಸಾವಿರಕ್ಕೂ ಹೆಚ್ಚು ಎಕರೆ ಅರಣ್ಯ ಪ್ರದೇಶವಿತ್ತು. ಬಯಲುಸೀಮೆ ಎಂದು ಕರೆಯಲಾಗದ ಗುಡ್ಡಗಾಡು. ಜನರು ಇದನ್ನು 'ಗಿಡ' ಎಂದು ಕರೆಯುತ್ತಿದ್ದರು. ಸ್ಥಳೀಯರ ಭಾಷೆಯಲ್ಲಿ 'ಗಿಡ' ಎಂದರೆ ಕಾಡು ಎಂದೇ ಅರ್ಥ. ಸಹ್ಯಾದ್ರಿಯ ದಟ್ಟ ಕಾಡಿನಂತಲ್ಲದ ಇದು ಗಿಡಗಂಟೆ ಪೊದೆಗಳಿಂದ ನಾನಾ ತರದ ಕಾಡುಮರಗಳಿಂದ ಕಿಕ್ಕಿರಿದಿತ್ತು. ಕಿರುಬಿದಿರು ಇಲ್ಲಿನ ಮುಖ್ಯ ಸಸ್ಯ ಸಂಪತ್ತು. ಹೆಸರಿರುವ, ಹೆಸರರಿಯದ ಲಕ್ಷಾಂತರ ವನಸಸ್ಯಗಳು ಅಧ್ಯಯನಕ್ಕೆ ಸವಾಲಾಗಿ ನಿಂತಿದ್ದವು.

ಈ ಪ್ರದೇಶ ಸಮತಟ್ಟಾಗಿರಲಿಲ್ಲ. ಹಳ್ಳ ಕೊಳ್ಳ ತಿಟ್ಟುಗಳಿಂದ, ಕಲ್ಲು ಮುಳ್ಳು ಬಂಡೆ ಅರೆಗಳಿಂದ, ನೊರಜು ಕಳ್ಳಿ ಕತ್ತಾಳೆಗಳಿಂದ ಕಿಕ್ಕಿರಿದಿತ್ತು. ಬಂಡೆ ಅರೆಗಳ ಬರುಕಿನಲ್ಲಿ ಭೀಮಾಕಾರವಾಗಿ ಬೆಳೆದು ನಿಂತಿದ್ದ ಮೊಂಡುಗಳ್ಳಿಗಳು ತಮ್ಮ ಅಂಚುಗಳ ಮುಳ್ಳುಗಳಿಂದ ಭೀಕರವಾಗಿ ತೋರುತ್ತಿದ್ದವು. ಬೇಸಿಗೆಯಲ್ಲಿ ಒಣಗಿ ಬಾಡಿದಂತೆ ತೋರುವ ಈ ತೆಂಗಿನ ಕಲ್ಲು ಅರಣ್ಯ ಪ್ರದೇಶ ಮಳೆಗಾಲದಲ್ಲಿ ಹಸಿರು ಹಸಿರಾಗಿ ನೋಡುಗರನ್ನು ಸೂರೆಗೊಳ್ಳುತ್ತಿತ್ತು.

ಇದು ಸರ್ಕಾರಿ ಆಸ್ತಿ. ಅರಣ್ಯ ಇಲಾಖೆಗೆ ಸೇರಿದ ಪ್ರದೇಶ. ಇಲ್ಲಿ ಗಣಿಗಾರಿಕೆ ಮಾಡುವ ಹಾಗಿಲ್ಲ. ಮಾಡಿದರೆ ಸರ್ಕಾರವೇ ಮಾಡಬೇಕು. ಪೀಕೆಗೆ ಸರ್ಕಾರದಿಂದ ಜಮೀನು ಗುತ್ತಿಗೆ ಪಡೆವುದು ಕಷ್ಟವೇನಲ್ಲ. ಆದರೆ ಅವನು ಸದಾ ದೂರಾಲೋಚನೆ ಮಾಡುವಂಥವನು. ಇವತ್ತು ನಮ್ಮ ಸರ್ಕಾರ ಇದೆ. ನಾಳೆ ಮತ್ತೊಂದು ಬರಬಹುದು. ರಾಜಕೀಯದಲ್ಲಿ ಕಾಲೆಳೆಯುವವರು ಅಧಿಕ. ವಿರೋಧಿಗಳು ಸಮಯ ಕಾದು ಮೇಲೆ ಬೀಳುತ್ತಾರೆ. ಮಾಡಿದರೆ ಖಾಸಗಿ ಆಸ್ತಿಯಲ್ಲೇ ಮಾಡುವುದು ಒಳ್ಳೆಯದು. ಯಾರ ಹಂಗೂ ಮುಲಾಜು ಇರುವುದಿಲ್ಲ.

ಎರಡು ಮೂರು ದಿನ ತಮ್ಮ ಕಾರುಗಳಲ್ಲಿ ಆ ಪ್ರದೇಶವನ್ನೆಲ್ಲ ಸುತ್ತಾಡಿದ ಅವರು ಕೊನೆಗೆ ಪೀಕೆಯ ತೋಟದ ಮನೆಯಲ್ಲಿ ಸಭೆ ಸೇರಿದರು. ಗಣಿಗಾರಿಕೆಯ ಸಾಧ್ಯತೆ ಇರುವ

ಸ್ಥಳಗಳ ಬಗ್ಗೆ ಚರ್ಚಿಸಿದರು. ಸಿಂಗಲಾಜಿಪುರದ ದಕ್ಷಿಣಕ್ಕೆ ನಾಲ್ಕು ಮೈಲಿಗಳ ದೂರದಲ್ಲಿ ಪೀಕೆಯದೇ ಐದು ಎಕರೆಯ ತಕ್ಕಲು ಪ್ರದೇಶವಿತ್ತು. ಅದು ಬೇಸಾಯಕ್ಕೆ ಯೋಗ್ಯವಲ್ಲದ ಕರಾಬು ಭೂಮಿ. ಕಲ್ಲು ಬಂಡೆಗಳಿಂದ ತುಂಬಿದ್ದ ಅಲ್ಲಿ ದನಕರುಗಳು ಮೇಯುತ್ತಿದ್ದವು. ಮೇಲ್ನೋಟಕ್ಕೆ ಕರಾಬಿನಂತೆ ಕಂಡರೂ ಅದರ ಹತ್ತು ಅಡಿ ನೆಲದಾಳದಲ್ಲಿ ಕಪ್ಪು ಗ್ರಾನೈಟ್ ಕಲ್ಲಿರುವುದು ಖಂಡಿತವೆಂದು ಅಧಿಕಾರಿಗಳು ಹೇಳಿದರು. ಪೀಕೆ ಅಲ್ಲಿಂದ ಗಣಿಗಾರಿಕೆಯನ್ನು ಆರಂಭಿಸುವುದೆಂದೂ ನಿಧಾನವಾಗಿ ಅಧಿಕಾರಿಗಳು ಯಾವ ಯಾವ ಊರಿನಲ್ಲಿ ಯಾವ ಯಾವ ಬಗೆಯ, ಗುಣಮಟ್ಟದ ಕಲ್ಲುಗಳು ದೊರೆಯುತ್ತವೆ ಎಂಬುದನ್ನು ಈಗ ಸಂಗ್ರಹಿಸಿರುವ ಮಾದರಿಗಳ ಪರೀಕ್ಷೆಯಿಂದ ತಿಳಿಸುವುದೆಂದೂ ತೀರ್ಮಾನಿಸಿದರು. ಅನಂತರ ಗಣಿಗಾರಿಕೆಯನ್ನು ವಿಸ್ತರಿಸಬಹುದೆಂದು ಆಲೋಚಿಸಿದರು.

ಬೆಂಗಳೂರಿನ ಗಣಿ ಮತ್ತು ವಿಜ್ಞಾನ ಇಲಾಖೆಯಿಂದ ಬಂದಿದ್ದ ಅಧಿಕಾರಿಗಳಲ್ಲಿ ಶರಣ್ ಕೂಡ ಒಬ್ಬನಾಗಿದ್ದ. ತನ್ನ ವಿಷಯದಲ್ಲಿ ಬುದ್ಧಿವಂತನಾಗಿದ್ದ ಅವನು ಮಹತ್ವಾಕಾಂಕ್ಷಿಯಾಗಿದ್ದ. ಬಹುಶಃ ಪೀಕೆಯ ತಮ್ಮ ಮಹೇಶನ ವಾರಿಗೆಯವನಾಗಿರಬೇಕು. ತರುಣ. ಹೊಸದಾಗಿ ಮದುವೆಯಾಗಿದ್ದ. ಭೂಗರ್ಭಶಾಸ್ತ್ರದಲ್ಲಿ ಸ್ನಾತಕೋತ್ತರ ಪದವೀಧರನಾಗಿದ್ದ ಅವನು ಕ್ಷೇತ್ರ ಪರಿಶೀಲನೆಯಲ್ಲಿ ನಿಪುಣ; ಸಂಶೋಧನೆಯಲ್ಲಿ ಆಸಕ್ತ. ತಮ್ಮ ಇಲಾಖೆಯ ಖನಿಜ ಭವನದಲ್ಲಿದ್ದ ಪ್ರಯೋಗಾಲಯದಲ್ಲಿ ಹೆಚ್ಚು ಹೊತ್ತು ಕಳೆಯುತ್ತಿದ್ದ ಅವನು ಕಲ್ಲುಗಳ ಗುಣಮಟ್ಟ; ಅವುಗಳಲ್ಲಿರುವ ಲೋಹಾಂಶಗಳು; ಆಗಿರುವ ಮಿಶ್ರಣ ಇತ್ಯಾದಿ ಅಂಶಗಳ ಬಗ್ಗೆ ಸ್ಪಷ್ಟ ಮಾಹಿತಿ ನೀಡುತ್ತಿದ್ದ. ಗಣಿಗಾರಿಕೆಗೆ ಲೈಸನ್ಸ್ ನೀಡುವಲ್ಲಿ ಇವನ ವರದಿ ಮುಖ್ಯ ಪಾತ್ರ ವಹಿಸುತ್ತಿತ್ತು.

ಪ್ರಾರಂಭದ ಒಂದೆರಡು ವರ್ಷಗಳಲ್ಲಿ ಪ್ರಾಮಾಣಿಕರನಾಗಲು ಪ್ರಯತ್ನಿಸಿದ್ದ. ಆದರೆ ಇದು ಗಣಿ ಉದ್ಯಮಿಗಳು ಓಡಾಡುವ ಜಾಗ; ಇದೇ ರೀತಿ ವರದಿ ನೀಡಬೇಕೆಂದೂ ನಿರ್ದೇಶನ ನೀಡುವ ಮೇಲಧಿಕಾರಿಗಳು, ರಾಜಕಾರಣಿಗಳು ಇರುವ ಜಾಗ. ಅವರು ಹಾಗೆ ನಿರ್ದೇಶನ ನೀಡಲು ಕಾರಣವೇನೆಂಬುದನ್ನು ಅರ್ಥ ಮಾಡಿಕೊಳ್ಳಲು ಅವನಿಗೆ ಬಹಳ ದಿನ ಬೇಕಾಗಲಿಲ್ಲ. ವ್ಯವಸ್ಥೆಯ ವಿರುದ್ಧ ನಿಂತು ಹೋರಾಡಿದರೆ ಅನುಕೂಲಕ್ಕಿಂತ ಅನಾನುಕೂಲವೇ ಹೆಚ್ಚು. ಗಾಳಿ ಬಂದ ಕಡೆ ತೂರಿಕೊಳ್ಳಬೇಕು. ಸಿಕ್ಕಿದಷ್ಟನ್ನು ಬಾಚಿಕೊಳ್ಳಬೇಕು. ಆದರ್ಶ ಗೀದರ್ಶ ಎಲ್ಲ ಮಾತನಾಡಲು ಸರಿ ಎಂಬ ನಿರ್ಧಾರಕ್ಕೆ ಬಂದಿದ್ದ. ಉದ್ಯಮಿಗಳ ನಿರೀಕ್ಷೆಯಂತೆ ವರದಿ ಸಿದ್ಧಪಡಿಸುತ್ತಿದ್ದ; ನಿರ್ಧಾಕ್ಷಣ್ಯವಾಗಿ ತನ್ನ ರೇಟನ್ನು ಪಡೆಯುತ್ತಿದ್ದ. ಮೇಲಧಿಕಾರಿಗಳು ಅವರವರ ಪಾಲನ್ನು ಅವರು ಪಡೆಯುತ್ತಿದ್ದುದು ಅವನಿಗೆ ಗೊತ್ತಿತ್ತು. ಇದು ವ್ಯವಸ್ಥೆಯ ವರ್ತುಲ, ಇದರಲ್ಲೇ ನಾವು ಸುತ್ತಬೇಕು. ಅದನ್ನು ಬಿಟ್ಟು ಹೋದರೆ ನಷ್ಟ ನಮಗೇ ಎಂಬ ನಿಲುವಿಗೆ ಬಂದಿದ್ದ.

ಇಂದು ಅವನು ಪೀಕೆಗೆ ಅನುಕೂಲವಾದ ವರದಿಯನ್ನು ತಯಾರಿಸಿಕೊಡುವುದಕ್ಕಾಗಿಯೇ ಇಲ್ಲಿಗೆ ಬಂದಿದ್ದಾನೆ. ಶರಣ್‌ಗೆ ಪೀಕೆಯ ತಮ್ಮ ಮಹೇಶನ ಪರಿಚಯವಾದದ್ದು ಈ ತೋಟದ

ಮನೆಯಲ್ಲೇ. ಪ್ರಥಮ ಭೇಟಿಯಲ್ಲೆ ಇಬ್ಬರೂ ಆತ್ಮೀಯರಾದರು. ವಿಸ್ಕಿ ಅವರನ್ನು ಹತ್ತಿರ ತಂದಿತ್ತು.

ಪೀಕೆಯ ಕೆಲಸಗಳು ಬೇಗ ಬೇಗನೆ ಆದವು. ರೆಡ್ಡಿಯ ಅನುಭವ ಮತ್ತು ಸಂಪರ್ಕದಿಂದಾಗಿ ಗಣಿಗಾರಿಕೆಗೆ ಬೇಕಾದ ಯಂತ್ರೋಪಕರಣಗಳನ್ನು ಖರೀದಿಸಲಾಯಿತು. ಅವರೆಲ್ಲ ಆಂಧ್ರ ಮೂಲದವರು. ಒಂದು ಶುಭಮಹೂರ್ತದಂದು ರಾಜ್ಯದ ಮುಖ್ಯ ಮಂತ್ರಿಗಳೇ ಪೀಕೆಯ ಸಹಭಾಗಿತ್ವದ ಮಹೇಶನ ಮಾಲೀಕತ್ವದ "ಕಾಪೇಳೇಶ್ವರ ಸ್ಟೋನ್ಸ್ ಅಂಡ್ ಮಾರ್ಬಲ್ ಕಂಪನಿ"ಯನ್ನು ಉದ್ಘಾಟನೆ ಮಾಡಿದರು. ಉದ್ಘಾಟನೆಯಂದು ದೊಡ್ಡ ದೊಡ್ಡ ಅಧಿಕಾರಿಗಳು, ಮಂತ್ರಿ ಮಹೋದಯರು ಆಗಮಿಸಿ ಶುಭಕೋರಿದರು.

ಅಂದು ಪೀಕೆ ಬಂದ ಅತಿಥಿಗಳಿಗೆ ಹಾಗೂ ತಮ್ಮ ಊರಿನ ಮತ್ತು ಸುತ್ತಮುತ್ತಲಿನ ತನ್ನ ಅಭಿಮಾನಿಗಳಿಗೆ, ಕಾರ್ಯಕರ್ತರಿಗೆ ಭರ್ಜರಿ ಭೋಜನ ವ್ಯವಸ್ಥೆ ಮಾಡಿಸಿದ್ದ. ಐವತ್ತು ಕುರಿಗಳು, ಆರುನೂರು ಕೋಳಿಗಳು ಅಂದು ಆಹಾರವಾಗಿದ್ದವು. ಉಂಡವರು ಹೊಗಳಿದರು.

ಅಂದು ಆ ಸೀಮೆಯ ಜನ ತಮ್ಮ ಸೀಮೆ ವಿಶೇಷವಾಗಿ ಪ್ರಗತಿಪಥದಲ್ಲಿಯೆಂದು ಸಂಭ್ರಮಿಸಿದರು.

ಪೀಕೆ ಗಣಿ ಉದ್ಯಮಿಯಾದ. ಬೆಂಗಳೂರಿನಲ್ಲಿ ಅವನ ತೂಕ ಹೆಚ್ಚಿತು. ರಾಜಕೀಯದಲ್ಲಿ ಅವನ ಮಾತಿಗೆ ವಿಶೇಷವಾದ ಬೆಲೆ ಬರತೊಡಗಿತು. ಅವನ ಗಣಿ ಉದ್ಯಮ ವಿಸ್ತರಿಸಿತು. ನೂರು ಇನ್ನೂರು ಕೋಟಿ ಅವನಿಗೆ ಸಾಮಾನ್ಯ ಹಣವಾಗ ತೊಡಗಿತು. ರೆಡ್ಡಿಯ ಸಂಪರ್ಕದಿಂದ ಅವನಿಗೆ ರಾಜ್ಯದ ಇತರ ಹತ್ತಾರು ಗಣಿ ಉದ್ಯಮಿಗಳ ಪರಿಚಯವಾಯಿತು. ಇವನ ರಾಜಕೀಯ ವ್ಯಕ್ತಿತ್ವದಿಂದಾಗಿ ಅವರಿಗೆಲ್ಲರಿಗೂ ಇವನೇ ನಾಯಕನಾದ. ರಾಜ್ಯದಲ್ಲಿ ಒಂದು ಪ್ರಬಲವಾದ ಗ್ರಾನೈಟ್‌ಲಾಬಿ ಬೆಳೆಯಲಾರಂಭಿಸಿತು. ರಾಜಕೀಯ ಪಕ್ಷ ಕಟ್ಟುವ, ಪಕ್ಷಬೀಳಿಸುವ ಶಕ್ತಿ ಕೇಂದ್ರವಾಗಿ ಈ ಲಾಬಿ ಕೆಲಸ ಮಾಡತೊಡಗಿತು.

ಪೀಕೆ ಎಂ. ಎಲ್.ಸಿ ಯಾಗಿ ಎರಡು ವರ್ಷಗಳಾಗಿತ್ತು. ಈ ಸಂದರ್ಭದಲ್ಲಿ ವಿಧಾನ ಸಭೆ ಚುನಾವಣೆ ಬಂತು. ಪಾರ್ಟಿ ಅಧ್ಯಕ್ಷರ ಅಧ್ಯಕ್ಷತೆಯಲ್ಲಿ ಚುನಾವಣೆಯನ್ನು ಎದುರಿಸುವುದು ಹೇಗೆಂಬುದರ ಚರ್ಚೆ ಆರಂಭಗೊಂಡಿತು. ಕೇಂದ್ರದ ವೀಕ್ಷಕರು ಸಭೆಯಲ್ಲಿದ್ದರು. ಇನ್ನೂರ ಇಪ್ಪತ್ನಾಲ್ಕು ಸ್ಥಾನಗಳಿಗೆ ತಮ್ಮ ಅಭ್ಯರ್ಥಿಗಳನ್ನು ಹಾಕಿ ಗೆಲ್ಲಿಸುವುದು ಮುಖ್ಯವಾಗಿತ್ತು. ಅದಕ್ಕೆ ಬೇಕಾಗುವ ಜನಬಲ, ಧನಬಲವನ್ನು ಕ್ರೂಢೀಕರಿಸಬೇಕಾಗಿತ್ತು. ಸ್ವತಃ ಅಭ್ಯರ್ಥಿಗಳು ಖರ್ಚುಮಾಡುವ ಹಣದ ಜೊತೆಗೆ ಪಾರ್ಟಿಯಿಂದ ಹಣ ನೀಡಬೇಕಾಗಿತ್ತು. ಒಂದು ಕ್ಷೇತ್ರಕ್ಕೆ ತಲಾ ಒಂದು ಕೋಟಿಯಂತೆ ನೀಡಿದರೂ ಇನ್ನೂರ ಇಪ್ಪತ್ನಾಲ್ಕು ಕೋಟಿ ರೂಪಾಯಿಗಳು ಬೇಕು. ಇನ್ನು ಚುನಾವಣಾ ಸಾಮಾಗ್ರಿಗಳ ವೆಚ್ಚ, ನಮ್ಮ ಓಡಾಟ, ಕಾರುಗಳು- ಅವುಗಳಿಗೆ ಪೆಟ್ರೋಲು ಡೀಸೆಲ್ಲು, ಜಾಹಿರಾತು ನೀಡುವಿಕೆ, ರಾಷ್ಟ್ರೀಯ ನಾಯಕರನ್ನು ಕರೆತರುವುದು, ಅವರ ಖರ್ಚು, ಇತ್ಯಾದಿ ಇತ್ಯಾದಿ ಖರ್ಚಿಗಳಿಗೆ ದುಡ್ಡುಬೇಕು. ಎಲ್ಲಾ ಸಚಿವರು ತಂತಮ್ಮ

ಇಲಾಖೆಯಿಂದ ಹಣ ವಸೂಲು ಮಾಡಿ ಹಣವನ್ನು ಪಾರ್ಟಿಗೆ ಕಟ್ಟಬೇಕೆಂದು ತಾಕೀತು ಮಾಡಲಾಯಿತು.

ಸಭೆ ಬರ್ಕಾಸ್ತಾಯಿತು. ವೀಕ್ಷಕರು, ಅಧ್ಯಕ್ಷರು, ಮುಖ್ಯಮಂತ್ರಿಗಳು, ಅರ್ಥಮಂತ್ರಿಗಳು ಹಾಗೂ ಇನ್ನಿತರ ಅಂತರಂಗದ ಆಪ್ತರು ಸಮಾಲೋಚನೆಯಲ್ಲಿ ತೊಡಗಿದರು. ಮುಖ್ಯಮಂತ್ರಿಗಳು ಪೀಕೆಯನ್ನು ಕುರಿತು "ಪೀಕೆ, ನೋಡಪ್ಪ, ನಿನ್ನಿಂದ ದೊಡ್ಡ ಷೇರು ಬರಬೇಕಪ್ಪ. ನನ್ನ ಲೆಕ್ಕದ ಪ್ರಕಾರ ನಾನೂರು ಐನೂರು ಕೋಟಿ ರೂಪಾಯಿ ಬೇಕಾಗಬಹುದು. ನಮ್ಮದೆ ಸರ್ಕಾರ ಇರುವುದರಿಂದ ಸ್ವಲ್ಪ ಸಹಾಯವಾಗುತ್ತದೆ. ಆದರೂ ಹಣ ಸಂಗ್ರಹವಾಗಬೇಕಲ್ಲ. ನೀನು ಎಷ್ಟು ಕೊಡಬಲ್ಲೆ ?" ಎಂದು ಕೇಳಿದರು.

ಪೀಕೆ ಮನಸ್ಸಿನಲ್ಲೇ ಲೆಕ್ಕಾಚಾರ ಹಾಕಿದ. ನಗುತ್ತಾ ಹೇಳಿದ : "ಏನ್ಸಾರ್ ನೀವು ನನ್ನದು ದೊಡ್ಡ ಪೇರು ಅಂತೀರಿ. ನಾನು ಹೊಸಬ. ನಾನು ಎಲ್ಲಿಂದ ತರಲಿ."

"ಅಲ್ಲಯ್ಯಾ ನಿನ್ನ ವ್ಯವಹಾರ ನನಗ್ಗೊತ್ತಿಲ್ವೆ ? ನಿನ್ನ ಹತ್ತಿರ ದೊಡ್ಡ ದೊಡ್ಡ ಜನ ಇದ್ದಾರೆ. ಅವರು ಲಕ್ಷಗಳಲ್ಲಿ ಮಾತನಾಡೋಲ್ಲ. ಕೋಟಿಗಳಲ್ಲಿ ಮಾತನಾಡ್ತಾರೆ. ನಿಮ್ಮಂಥವರ ವ್ಯವಹಾರ ದೇಶದ ಗಡಿ ದಾಟಿದೆ. ಹಣ ಡಾಲರ್ ರೂಪದಲ್ಲಿ ಬರ್‍ತಿದೆ. ಅದೆಲ್ಲಾ ರಾಗಾ ಬೇಡ. ನಿನ್ನಿಂದ ಮೇಜರ್ ಷೇರ್ ಬರಬೇಕು" ಎಂದು ಹೇಳಿ ಅರ್ಥಮಂತ್ರಿಗಳ ಕಡೆ ತಿರುಗಿ "ನಮ್ಮ ಪೀಕೆ ಇನ್ನೂ ಚಿಕ್ಕವನು. ಅವನಿಗೆ ಮುಂದಿನ ಸಚಿವ ಸಂಪುಟದಲ್ಲಿ ಮಂತ್ರಿಮಾಡಿ ಮದುವೆ ಮಾಡಿಸಿಬಿಡೋಣ" ಎಂದರು.

ಎಲ್ಲರು ಗೊಳ್ಳೆಂದು ನಕ್ಕರು. ನಸುನಗುತ್ತಾ ಪೀಕೆ "ಆಯ್ತು ಸಾರ್ ನನ್ನ ಕಡೆಯಿಂದ ಪಾರ್ಟಿ ಫಂಡಿಗೆ ನೂರು ಬರುತ್ತೆ" ಎಂದ. ವೀಕ್ಷಕರು ನಕ್ಕರು. ಮುಖ್ಯಮಂತ್ರಿಗಳು ಪೀಕೆಯ ಬೆನ್ನು ತಟ್ಟಿದರು.

ಮುಂದಿನ ಒಂದೂವರೆ ತಿಂಗಳು ಅತ್ಯಂತ ಬಿರುಸಾಗಿತ್ತು. ಪೀಕೆಗೆ ಪುರುಸೊತ್ತೆ ಇರಲಿಲ್ಲ. ಗ್ರಾನೈಟ್ ವ್ಯವಹಾರವನ್ನು ಮಹೇಶ ಮತ್ತು ರೆಡ್ಡಿ ನೋಡಿಕೊಳ್ಳುತ್ತಿದ್ದರು. ಚುನಾವಣೆ ಪ್ರಚಾರ, ಸಂಘಟನೆಯನ್ನು ಇವನು ಅಚ್ಚುಕಟ್ಟಾಗಿ ನಿರ್ವಹಿಸಿದ. ರಾಜ್ಯದ ಎಲ್ಲ ಭಾಗಗಳಲ್ಲಿ ಸಂಚರಿಸಿದ. ಬಹಿರಂಗ ಪ್ರಚಾರಕ್ಕಿಂತ ಒಳ ವ್ಯವಹಾರಗಳಲ್ಲಿ ತನ್ನ ಬುದ್ಧಿವಂತಿಕೆಯನ್ನು ತೋರಿದ. ಜನರಲ್ಲಿ ಹಣಕ್ಕಿರುವ ಬೆಲೆಯನ್ನು ಅರ್ಥಮಾಡಿಕೊಂಡ. ಗಾಂಧಿ ಎಂದರೆ ಯಾವ ಗಾಂಧಿ ಎಂದು ಕೇಳುವ ಕಾಲಮಾನದಲ್ಲಿದ್ದೇವೆಂಬ ಸತ್ಯ ಅವನಿಗೆ ಅರಿವಾಗಿತ್ತು. ಅಷ್ಟೇ ಏಕೆ, ಅವನಿಗೇ ಗಾಂಧಿಯ ಬಗ್ಗೆ ಸರಿಯಾದ ತಿಳಿವಳಿಕೆ ಇರಲಿಲ್ಲ.

ಚುನಾವಣೆಯಲ್ಲಿ ಆಳುವ ಪಕ್ಷ ಗೆದ್ದು ಮತ್ತೆ ಅಧಿಕಾರಕ್ಕೆ ಬಂತು. ಮುಖ್ಯಮಂತ್ರಿಗಳು ತಮ್ಮ ಮಾತನ್ನು ಮರೆತಿರಲಿಲ್ಲ. ಪೀಕೆ ಕ್ರೀಡೆ ಮತ್ತು ಯುವಜನ ಖಾತೆಯ ಸಚಿವನಾದ. ಪೀಕೆ ಗೂಟದ ಕಾರಿನಲ್ಲಿ ಕೂತು ತಿರುಗಾಡಲು ಪ್ರಾರಂಭಿಸಿದ. ಪೀಕೆ ಇತ್ತೀಚೆಗೆ ಹೆಚ್ಚು ಹೆಚ್ಚು ಸಾರ್ವಜನಿಕ ಸಭೆ ಸಮಾರಂಭಗಳಲ್ಲಿ ಭಾಗವಹಿಸುವುದು ಅನಿವಾರ್ಯವಾಯಿತು. ಮಾಧ್ಯಮದವರು ಅವನ ಭೂತ ವರ್ತಮಾನಗಳನ್ನು ಶೋಧಿಸಿದರು. ಟಾಬ್ಲಾಯ್ಡ್

ಪತ್ರಿಕೆಗಳಲ್ಲಿ ಅವನ ಗಣಿ ವ್ಯವಹಾರದ ಬಗ್ಗೆ, ಅವನ ಗ್ರಾನೈಟ್ ಲಾಬಿಯ ಬಗ್ಗೆ ಲೇಖನಗಳು ಬರಲಾರಂಭಿಸಿದವು.

ಪೀಕೆ ಇವುಗಳಿಗೆ ಪ್ರತಿಕ್ರಿಯೆ ತೋರತ್ತಿರಲಿಲ್ಲ. ಜನ ನಾಲ್ಕು ಮಾತು ಆಡ್ತಾರೆ. ಅದರಲ್ಲಿ ಒಳ್ಳೆಯದೂ ಇರುತ್ತದೆ; ಕೆಟ್ಟದೂ ಇರುತ್ತದೆ. ಅದನ್ನು ಅದು ಬಂದ ಹಾಗೆಯೇ ಸ್ವೀಕರಿಸಬೇಕು. ಪ್ರತಿಯೊಂದಕ್ಕೂ ನಮ್ಮ ಪ್ರತಿಕ್ರಿಯೆ ಸೂಚಿಸುತ್ತಾ ಹೋದರೆ ಮೈ ಪರಚಿಕೊಳ್ಳಬೇಕಾಗುತ್ತದೆ. ಮಾತಿಗೆ ಮಾತು; ಪ್ರಶ್ನೆಗೆ ಉತ್ತರ-ಇವೆಕ್ಕೆಲ್ಲ ಕೊನೆ ಎಲ್ಲಿ ? ಇದು ಪೀಕೆಯ ನಂಬಿಕೆಯಾಗಿತ್ತು.

ಮುನಿರಾಮಿ ರೆಡ್ಡಿಗೆ ಒಬ್ಬ ಗಂಡು ಮಗನಿದ್ದ. ಅವನ ಹೆಸರು ರಾಮಚಂದ್ರ ರೆಡ್ಡಿ. ಅವನನ್ನು ಎಲ್ಲರೂ ಎಂ. ಆರ್. ರೆಡ್ಡಿ ಜೂನಿಯರ್ ಎಂದು ಕರೆಯುತ್ತಿದ್ದರು. ಪೀಕೆಯ ತಮ್ಮ ಮಹೇಶನ ವಾರಿಗೆಯವನು. ಮಹೇಶ ಗಣಿಗಾರಿಕೆಯ ಉಸ್ತುವಾರಿ ನೋಡಿಕೊಂಡರೆ, ಕಲ್ಲಿನ ಲಾಗ್‌ಗಳನ್ನು ಲಾರಿ ಮೂಲಕ ಬೆಂಗಳೂರಿಗೆ ತರುವುದು; ಅವನ್ನು ಕತ್ತರಿಸಿ ವಿವಿಧ ಆಕಾರಗಳಿಗೆ ರೂಪ ಕೊಡುವುದು; ಮಾರಾಟ ಮಾಡುವುದು- ಮುಂತಾದ ಕೆಲಸಗಳನ್ನು ಜೂನಿಯರ್ ಮಾಡುತ್ತಿದ್ದ. ಹೀಗಾಗಿ ಸೀನಿಯರ್ ರೆಡ್ಡಿಗೆ ಸ್ವಲ್ಪ ಜವಾಬ್ದಾರಿ ಕಡಿಮೆಯಾದರೂ, ಅವನ ಮಾರ್ಗದರ್ಶನದಲ್ಲೇ ಜೂನಿಯರ್ ರೆಡ್ಡಿ ಕೆಲಸ ನಿರ್ವಹಿಸುತ್ತಿದ್ದ. ಮಹೇಶ ಗಣಿಗಾರಿಕೆಯನ್ನು ನೋಡಿಕೊಳ್ಳುತ್ತಿದ್ದುದರಿಂದ ಪೀಕೇಗೆ ಪೂರ್ಣಾವಧಿಯ ರಾಜಕೀಯ ಮಾಡಲು ಸಾಧ್ಯವಾಯಿತು. ಅವನು ಬೇರೆ ಬೇರೆ ಆಸಕ್ತಿಗಳ ಕಡೆ ಗಮನ ಹರಿಸಲು ಸಾಧ್ಯವಾಯಿತು.

ಪೀಕೆಗ ಕೆಲವು ವಿಷಯಗಳ ಬಗ್ಗೆ ಕೀಳರಿಮೆಯಿತ್ತು. ತಾನು ಹೆಚ್ಚು ಓದಲಿಲ್ಲ ಎಂಬುದು; ತನಗೆ ಸರಿಯಾಗಿ ಇಂಗ್ಲಿಷ್ ಬರುವುದಿಲ್ಲ ಎಂಬುದು; ಬ್ರಾಹ್ಮಣರಷ್ಟು ಸ್ಪಷ್ಟವಾಗಿ ತಪ್ಪಿಲ್ಲದಂತೆ ಉಚ್ಚಾರಣೆ ಮಾಡಲು ಬರುವುದಿಲ್ಲ ಎಂಬುದು - ಇಂಥ ಕೆಲವು. ಅದಕ್ಕೆ ಅವನು ತನ್ನ ಮನೆಗೆ ಇಂಗ್ಲಿಷ್ ಅಧ್ಯಾಪಕನೊಬ್ಬನನ್ನು ಕರೆಸಿ ಸ್ಪೋಕನ್ ಇಂಗ್ಲಿಷ್ ಅಭ್ಯಾಸ ಮಾಡಲು ಯತ್ನಿಸಿದ. ಸಂಸ್ಕೃತ ಕಲಿತರೆ ತನ್ನ ಉಚ್ಚಾರಣೆ ಸುಧಾರಿಸುತ್ತದೆಯೆಂದು ಭಾವಿಸಿ ಸಂಸ್ಕೃತ ವಿದ್ವಾಂಸರೊಬ್ಬರನ್ನು ಸಂಸ್ಕೃತ ಕಲಿಯಲು ನೇಮಿಸಿಕೊಂಡ. ಅದಕ್ಕೆ ಇನ್ನೊಂದು ಕಾರಣವೂ ಇತ್ತು. ಸಾರ್ವಜನಿಕ ಸಮಾರಂಭಗಳಲ್ಲಿ ಭಾಷಣ ಮಾಡಿವಾಗ ಸಂಸ್ಕೃತ ಶ್ಲೋಕಗಳನ್ನು ಮಧ್ಯೆ ಮಧ್ಯೆ ಹೇಳಿದರೆ ಭಾಷಣಕ್ಕೊಂದು ಖದರ್ ಬರುತ್ತದೆ, ಆಗ ಜನ ಪರಿಣಾಮಗೊಂಡು ಚಪ್ಪಾಳೆ ತಟ್ಟುತ್ತಾರೆಂದು ಭಾವಿಸಿದ. ಅದಕ್ಕಾಗಿ ಒಂದಷ್ಟು ಸಂಸ್ಕೃತ ಶ್ಲೋಕಗಳನ್ನು ಉರುಹೊಡೆದ.

ಅವನ ರಾಜಕೀಯ ಜೀವನ ಚೆನ್ನಾಗಿಯೇ ಇತ್ತು. ಅವನು ಮುಖ್ಯಮಂತ್ರಿಗಳಿಗೆ ಅತ್ಯಂತ ಆಪ್ತನಾದ್ದರಿಂದ ಸಹಜವಾಗಿಯೇ ಅವನ ಪ್ರಾಮುಖ್ಯತೆ ಜಾಸ್ತಿ ಇತ್ತು. ಮುಖ್ಯಮಂತ್ರಿಗಳ ಕಡೆಯ ಶ್ರೀಮಂತ ಸಂಬಂಧಿಕರೊಬ್ಬರ ಮಗಳನ್ನು ಮದುವೆ ಮಾಡಿಕೊಂಡ ಮೇಲಂತೂ ಅವನು ಮತ್ತಷ್ಟು ಪ್ರಭಾವಶಾಲಿಯಾದ. ಅವನ ಹಿಂಬಾಲಕರು ಮುಂದಿನ ಭಾವೀ ಮುಖ್ಯಮಂತ್ರಿ ಇವನೇ ಎಂದೂ ಅದಕ್ಕೆ ಈಗಿನ ಮುಖ್ಯಮಂತ್ರಿಗಳು ಬೆಳೆಸುತ್ತಿದ್ದಾರೆಂದೂ ಅಲ್ಲಲ್ಲಿ ವಿಷಯವನ್ನು ಹರಿಯಬಿಟ್ಟರು. ಅದರಿಂದ ಅವನ ವ್ಯಕ್ತಿತ್ವಕ್ಕೆ ಎಂಥ ಮೆರಗು

ಬಂತೋ ಏನೋ ಪಾರ್ಟಿಯ ಅನೇಕ ಗುಂಪುಗಳ ವಿರೋಧವನ್ನು ಪೀಕೆ ಕಟ್ಟಿಕೊಳ್ಳುವಂಥಾದದ್ದು ಮಾತ್ರ ಸತ್ಯ.

ಪೀಕೆ ಎಂ. ಎಲ್. ಸಿ ಆಗಿ ನಾಲ್ಕೂ ವರ್ಷಗಳಾಗಿತ್ತು, ಮಂತ್ರಿಯಾಗಿ ಎರಡು ವರ್ಷಗಳಾಗಿತ್ತು. ಕೇವಲ ಗಣಿಉದ್ಯಮದಿಂದ ಹಣ ಸಂಪಾದನೆ ಮಾಡಬಹುದು. ಅದು ಸಮಾಜ ಸೇವೆ ಎನ್ನಿಸಿಕೊಳ್ಳುವುದಿಲ್ಲ. ಅಂಥ ಸೇವೆಗೆ ಬೆಂಗಳೂರಿನಲ್ಲಿ ವಿಪುಲವಾದ ಅವಕಾಶಗಳಿವೆ. ಅಂಥ ಅವಕಾಶಗಳಲ್ಲಿ ಶಿಕ್ಷಣ ಸೇವೆ ಪ್ರಮುಖವಾದುದು. ಆದಕ್ಕಾಗಿ ಅವನು ಬೆಂಗಳೂರಿನ ಹೊಸೂರು ರಸ್ತೆಯಲ್ಲೊಂದು, ಬಸವೇಶ್ವರ ನಗರದಲ್ಲೊಂದು ಟಿ. ಸಿ. ಎಚ್ ಕಾಲೇಜುಗಳನ್ನು ತೆರೆದ. ವೈದ್ಯಕೀಯ ಕ್ಷತ್ರದಲ್ಲಿ ತನ್ನ ಸೇವೆಯನ್ನು ದಾಖಲು ಮಾಡಬೇಕಂಬ ಉದ್ದೇಶದಿಂದ ಬಸವೇಶ್ವರ ನಗರದಲ್ಲೊಂದು ನರ್ಸಿಂಗ್ ಕಾಲೇಜನ್ನೂ ತೆರೆದ. "ಕಾಪೇಳೇಶ್ವರ ಎಜುಕೇಷನ್ ಟ್ರಸ್ಟ್"ನ ಅಧ್ಯಕ್ಷನಾಗಿ ಶಿಕ್ಷಣ ತಜ್ಞನೆಂದೂ ಜ್ಞಾನ ಧುರೀಣನೆಂದೂ ವೇದಿಕೆಗಳಲ್ಲಿ ಕರೆಸಿಕೊಂಡ.

ಪೀಕೆ ಏನೇ ಮಾಡಿದರೂ ಅದರಲ್ಲಿ ವ್ಯವಹಾರವಿರುತ್ತಿತ್ತು. ಈ ಶಿಕ್ಷಣ ಸೇವೆಯಲ್ಲೂ ಅಷ್ಟೆ. ಕೇರಳದ ಹುಡುಗರು ಅವನ ಕಾಲೇಜಿನಲ್ಲಿ ನರ್ಸಿಂಗ್ ಶಿಕ್ಷಣ ಪಡೆಯುತ್ತಿದ್ದರು. ಬೆಂಗಳೂರಿನ ಮಧ್ಯಮ ವರ್ಗದ ಹುಡುಗರು ಟಿ ಸಿ ಎಚ್ ಓದುತ್ತಿದ್ದರು. ಇಲ್ಲಿ ಅವನಿಗೆ ಕೀರ್ತಿ ಮತ್ತು ಹಣ ಎರಡೂ ಬರುತ್ತಿತ್ತು. ಇದರದೇ ಒಂದು ಬಗೆಯ ಸುಖ. ಈ ಸುಖ ಯಥೇಚ್ಛಹಣ ತರುವ ಗಣಿಗಾರಿಕೆಯಲ್ಲಿರಲಿಲ್ಲ. ಗಣಿಗಾರಿಕೆಯನ್ನು ಬಯ್ಯುವ ಹಾಗಿರಲಿಲ್ಲ. ಶಿಕ್ಷಣ ಸೇವೆಗೆ ಬಂಡವಾಳ ಅಲ್ಲಿಂದ ತಾನೇ ಬಂದದ್ದು! ಅವಳು ಲಕ್ಷ್ಮಿ. ಲಕ್ಷ್ಮಿ ದೊಡ್ಡವಳು. ಅವಳು ಸರಸ್ವತಿಯನ್ನು ಸೃಷ್ಟಿಸುತ್ತಾಳೆ. ಮಹಾ ಬುದ್ಧಿವಂತರೆಂದೂ ಓದಿದವರೆಂದೂ ಹೇಳಿಸಿಕೊಳ್ಳುವ ಐ ಎ ಎಸ್, ಐ ಪಿ ಎಸ್ ಆಫೀಸರ್‌ಗಳು ತನ್ನ ಮುಂದೆ ಕೈಕಟ್ಟು ನಿಲ್ಲುವುದಿಲ್ಲವೇ ? ಹೇಳಿದ ಹಾಗೆ ಕೇಳುವುದಿಲ್ಲವೆ ? ಪೀಕೆ ತನ್ನ ಬಗ್ಗೆ ಹೆಮ್ಮೆ ಅನ್ನಿಸಿತು.

ರಾಜಕೀಯ ಸ್ಥಿತ್ಯಂತರ ಸಹಜ. ತಾನು ಈಗ ಮಂತ್ರಿಯಾಗಿದ್ದೇನೆ. ಮುಂದೆಯೂ ಹೀಗೆಯೇ ಇರುತ್ತೇನೆಂಬ ನಂಬಿಕೆ ಇದೆಯೇ ? ಅವನು ನಕ್ಕ. ಏನಿದ್ದರೂ ಧನ ನಿಷ್ಠೆ ಮುಖ್ಯ, ಅಧಿಕಾರ ಸ್ಥರ ನಿಷ್ಠೆ ಮುಖ್ಯ. ಮುಖ್ಯಮಂತ್ರಿಗಳಿಗೆ ಆಪ್ತನಾಗಿ, ಸಚಿವನಾಗಿ, ಹೈಕಮಾಂಡಿಗೆ ಒಳ್ಳೆಯ ಸಂಪನ್ಮೂಲವ್ಯಕ್ತಿಯಾಗಿ ಕೆಲಸ ಮಾಡಿ, ತನ್ನ ಆರುವರ್ಷಗಳ ಎಂ.ಎಲ್.ಸಿ. ಅವಧಿಯನ್ನು ಮುಗಿಸುತ್ತಿದ್ದನು. ಮತ್ತೆ ಆರುವರ್ಷಕ್ಕೆ ಎಂ.ಎಲ್.ಸಿ.ಯಾಗಿ ಮುಂದುವರಿಯುವದು ಮುಂದುವರಿಯುವುದು ಅವನಿಗೆ ಕಷ್ಟವೇ ಆಗಲಿಲ್ಲ. ಆಳುವ ಪಕ್ಷಕ್ಕೆ ಮಂತ್ರಿಯೊಬ್ಬನನ್ನು ಶಾಸಕನನ್ನಾಗಿಸುವುದು ಪ್ರತಿಷ್ಠೆಯ ವಿಷಯವಾದರೆ, ಯಾರಾದರು ತನ್ನ ಉಮೇದುವಾರಿಕೆಯನ್ನು ಪ್ರಶ್ನಿಸಲಿ ? ಎಂಬ ಧೋರಣೆ ಪೀಕೆಯದಾಗಿತ್ತು.

ಇದಾದ ಒಂದು ವರ್ಷಕ್ಕೆ ಸರಿಯಾಗಿ ಮತ್ತೆ ವಿಧಾನ ಸಭೆ ಚುನಾವಣೆ ಬಂತು. ಚುನಾವಣೆ ಎದುರಿಸಲು ಈ ಬಾರಿಯೂ ಪೀಕೆ ಪಾರ್ಟಿ ಫಂಡಿಗೆ ಉದಾರವಾಗಿ ಹಣ ನೀಡಿದ. ಕಳೆದ ಸಾರಿಗಿಂತ ಈ ಬಾರಿ ಅವನು ರಾಜ್ಯದ ಗಣ್ಯ ಉದ್ಯಮಿಯಾಗಿದ್ದ; ಅವರ ನಾಯಕನಾಗಿದ್ದ. ಅವನು ಕೇಳಿದಷ್ಟು ಹಣ ಬಂದು ಬೀಳುತ್ತಿತ್ತು. ಈ ಸಾರಿ ಅವನು

ಇನ್ನೂರು ಕೋಟಿಯನ್ನು ಪಾರ್ಟಿಗೆ ನೀಡಿ ಎಲ್ಲರ ಉಬ್ಬೇರುವಂತೆ ಮಾಡಿದ್ದ. ಆದರೆ ಒಳಗಿನ ಸತ್ಯ ಅವನಿಗೆ ಮಾತ್ರ ಗೊತ್ತಿತ್ತು. ಗಣಿಗಾರಿಕೆಯ ಕುಳಗಳಿಂದ ಅವನು ಸಂಗ್ರಹಿಸಿದ್ದು ಮುನ್ನೂರು ಕೋಟಿಗೂ ಮಿಗಿಲು. ಈ ಚುನಾವಣೆ ಕೂಡ ಅವನ ವ್ಯವಹಾರದ ಒಂದು ಭಾಗವಾಗಿತ್ತು.

ಆದರೆ ಆಳುವ ಪಕ್ಷದ ಅದೃಷ್ಟ ಸರಿ ಇರಲಿಲ್ಲ. ಹಣ ಹೆಂಡ ಹರಿದರೂ ಉಡುಗೊರೆಗಳ ತೊರೆ ಹರಿದರೂ ಅವರ ಅಭ್ಯರ್ಥಿಗಳು ಹೆಚ್ಚು ಜನ ಗೆಲ್ಲಲಿಲ್ಲ. ಕೆಲವರು ತಮ್ಮ ವೈಯಕ್ತಿಕ ಬಲ, ವರ್ಚಸ್ಸುಗಳಿಂದ ಗೆದ್ದಿದ್ದರು. ಅಂಥವರಲ್ಲಿ ಮುಖ್ಯಮಂತ್ರಿಗಳು ಕೂಡ ಒಬ್ಬರು. ಕೇಂದ್ರದಲ್ಲಿ ಆಡಳಿತ ನಡೆಸುತ್ತಿದ್ದ ಇವರದೇ ಪಕ್ಷಕ್ಕೆ ನಿರಾಶೆಯಾಗಿತ್ತು. ಸೋಲಿಗೆ ಕಾರಣ ಹುಡುಕುವ ಪ್ರಯತ್ನ ನಡೆಯಿತು.

ಪಕ್ಷದ ಅನೇಕ ನಾಯಕರು ಮುಖ್ಯಮಂತ್ರಿಗಳನ್ನೇ ನೇರವಾಗಿ ಕಾರಣವೆಂದೂ, ಭ್ರಷ್ಟಚಾರಕ್ಕೆ ಕುಮ್ಮಕ್ಕು ನೀಡಿದರೆಂದೂ, ಜನ ಪ್ರತಿನಿಧಿಗಳ ಮಾತಿಗೆ ಬೆಲೆಯೇ ಇರಲಿಲ್ಲವೆಂದೂ, ಅಧಿಕಾರಿಗಳ, ಪೋಲಿಸರ ದರ್ಪ ಅಧಿಕವಾಯ್ತೆಂದೂ- ಈ ಎಲ್ಲದರಿಂದ ಜನ ರೋಸಿಹೋಗಿ ವಿರೋಧ ಪಕ್ಷಕ್ಕೆ ಮತ ನೀಡಿದರೆಂದು, ಪತ್ರಿಕಾ ಹೇಳಿಕೆ ನೀಡ ತೊಡಗಿದರು. ಪೀಕೆಯನ್ನು ನಂಬಿ ಅವನು ಹೇಳಿದಂತೆ ಮುಖ್ಯಮಂತ್ರಿಗಳು ನಡೆದುಕೊಂಡರೆಂದೂ ಹಿರಿಯ ಅನುಭವಿ ರಾಜಕೀಯ ಮುತ್ಸದ್ಧಿಗಳ ಮಾತಿಗೆ ಅವರು ಬೆಲೆ ಕೊಡಲಿಲ್ಲವೆಂದೂ ದೂರಿದರು.

ಕೇವಲ ಹತ್ತು ವರ್ಷಗಳ ಹಿಂದೆ ಬರಿಗೈಲಿ ಬೆಂಗಳೂರಿಗೆ ಬಂದ ಪೀಕೆ ಇಂದು ಗಳಿಸಿರುವ ಆಸ್ತಿಪಾಸ್ತಿ ಅಪಾರವಾಗಿದೆ. ಗಣಿಉದ್ಯಮವಿದೆ; ಶಾಲಾ ಕಾಲೇಜುಗಳಿವೆ. ಇವುಗಳೆಲ್ಲದರ ಬಗ್ಗೆ ಸಿ ಬಿ ಐ ತನಿಖೆಯಾಗಬೇಕಂದು ಹೊಸ ಸರ್ಕಾರದ ಮೇಲೆ ಒತ್ತಡಗಳು ಬರಲಾರಂಭಿಸಿದವು. ಗಣಿ ಉದ್ಯಮ ನಮ್ಮ ಅಮೂಲ್ಯ ಸಂಪತ್ತನ್ನು ಕೊಳ್ಳೆ ಹೊಡೆದು ಶ್ರೀಮಂತರಿಗೆ ಹಂಚುವ ಕಾಯಕವಾಗಿದೆ. ಗಣಿ ಉದ್ಯಮವು ಕೇವಲ ಕಲ್ಲನ್ನೂ ಲೂಟಿ ಮಾಡುತ್ತಿಲ್ಲ. ಜೊತೆಗೆ ಅದು ಶಾಂತವಾಗಿದ್ದ ನಮ್ಮ ಗ್ರಾಮೀಣ ಪರಿಸರದ ನೆಮ್ಮದಿಯನ್ನು ಹಾಳುಮಾಡುತ್ತಿದೆ. ಅದು ನಮ್ಮ ಗ್ರಾಮೀಣ ಜನರ ಆರೋಗ್ಯ ಕಿತ್ತುಕೊಂಡಿದೆ. ಅಮೂಲ್ಯವಾದ ಸಸ್ಯ ಸಂಪತ್ತು- ವನ ಸಂಪತ್ತು ನಾಶವಾಗುತ್ತಿದೆ. ಅದನ್ನು ನಿಷೇಧಿಸಬೇಕು ಎಂಬ ವಾದಗಳು ಬೆಳೆಯ ತೊಡಗಿದವು. ಮತ್ತೆ ಕೆಲವು ರಾಜಕೀಯ ಚಿಂತಕರು ಗಣಿಉದ್ಯಮದ ಲಾಬಿ ಪ್ರಜಾಪ್ರಭುತ್ವ ವ್ಯವಸ್ಥೆಯನ್ನು ಹಾಳು ಮಾಡುತ್ತಿದೆ. ಅದು ಖರೀದಿ ರಾಜಕೀಯ ಬೆಳೆಸುತ್ತಿದೆ. ಮುಂದಿನ ನಮ್ಮ ದೇಶದ ಭವಿಷ್ಯದ ದೃಷ್ಟಿಯಿಂದ ಇದು ಆರೋಗ್ಯಕರ ಬೆಳವಣಿಗೆಯಲ್ಲ. ಅದನ್ನು ನಿಷೇಧಿಸಬೇಕಂದು ಪತ್ರಿಕೆಗಳಲ್ಲಿ ಲೇಖನ ಬರೆದರು. ಖಾಸಗಿ ದೂರದರ್ಶನ ವಾಹಿನಿಗಳು ಈ ಬಗ್ಗೆ ಜನಾಭಿಪ್ರಾಯವನ್ನು ಬಿತ್ತರಿಸಿದರು. ಜನಾಭಿಪ್ರಾಯ ಗಣಿಗಾರಿಕೆಯ ವಿರೋಧವಾಗಿತ್ತು. ಮತ್ತೆ ಕೆಲವು ವಾಹಿನಿಗಳು ಈ ಬಗ್ಗೆ ತಜ್ಞರಿಂದ ಸಂವಾದ ಏರ್ಪಡಿಸಿದವು.

ಈ ನಡುವೆ ಪರಿಸರವಾದಿಗಳು ಸುಮ್ಮನೆ ಕೂತಿರಲಿಲ್ಲ. ರಾಜ್ಯದ ಎಲ್ಲಾ ಜಿಲ್ಲಾ ಕಛೇರಿಗಳ ಮುಂದೆ ಚಳವಳಿ, ಪ್ರತಿಭಟನೆ; ಸರ್ಕಾರಕ್ಕೆ ಗಣಿಗಾರಿಕೆ ನಿಷೇಧಿಸುವಂತೆ ಮನವಿ; ಮೌನ ಮೆರವಣಿಗೆ- ಇತ್ಯಾದಿಗಳನ್ನು ನಡೆಸಿದರು.

ಇಷ್ಟೆಲ್ಲಾ ನಡೆಯುತ್ತಿರುವಾಗ ಹೊಸ ಸರ್ಕಾರ ಸುಮ್ಮನಿರಲು ಹೇಗೆ ಸಾಧ್ಯ ? ಬಹಳ ದಿನಗಳ ನಂತರ ಅಧಿಕಾರ ಹಿಡಿದಿದ್ದೇವೆ. ಜನ ನಮ್ಮಿಂದ ಏನನ್ನೋ ನಿರೀಕ್ಷೆ ಮಾಡಿದ್ದಾರೆ. ನಾವು ಚುನಾವಣೇಲಿ ಅವರಿಗೆ ಲಾಟರಿ ನಿಷೇಧಿಸುತ್ತೇವೆ, ಸಾರಾಯಿ ನಿಷೇಧಿಸುತ್ತೇವೆ, ಕ್ಯಾಪಿಟೇಶನ್ ಶುಲ್ಕಾ ನಿಷೇಧಿಸುತ್ತೇವೆ- ಹೀಗೆ ಅನೇಕ ಭರವಸೆಗಳನ್ನು ನೀಡಿದ್ದೇವೆ. ಈಗ ಜನರು ಇದ್ದಕ್ಕಿದಂತೆ ಗಣಿಗಾರಿಕೆಯ ವಿರುದ್ಧ ಎದ್ದು ನಿಂತು ಅದನ್ನು ನಿಷೇಧಿಸಬೇಕೆಂದು ಒತ್ತಾಯಿಸುತ್ತಿದ್ದಾರೆ. ಏನು ಮಾಡುವುದು ?

ಗಣಿಗಾರಿಕೆ ನಿಷೇಧ ಸರ್ಕಾರಕ್ಕೆ ಲಾಭದಾಯಕವಲ್ಲ. ಅದು ಸರ್ಕಾರಕ್ಕೆ ಕೋಟ್ಯಾಂತರ ರೂಪಾಯಿಗಳ ಲಾಭವನ್ನು ತರುತ್ತದೆ. ಜೊತೆಗೆ ನಮ್ಮಂಥವರನ್ನು ಕಾಪಾಡುತ್ತದೆ. ಸಾಮಾನ್ಯ ಜನತೆಗೆ ನೇರವಾಗಿ ಇದರಿಂದ ಏನೂ ತೊಂದರೆಯಾಗುವುದಿಲ್ಲ. ನಿಷೇಧ ಬೇಡ. ಜನ ಸ್ವಲ್ಪದಿನ ಪ್ರತಿಭಟಿಸುತ್ತಾರೆ. ಪ್ರತಿಭಟಿಸಿ ಸುಸ್ತಾಗಿ ಸುಮ್ಮನಾಗುತ್ತಾರೆ. ಎಲ್ಲರೂ ಮರೆಯುತ್ತಾರೆ - ಎಂದು ಕೆಲವರು ಸಚಿವಸಂಪುಟ ಸಭೆಯಲ್ಲಿ ವಾದಿಸಿದರು.

ಆಗ ಮುಖ್ಯಮಂತ್ರಿಗಳು "ಇಲ್ಲ, ಇದು ಈಗ ಸೂಕ್ಷ್ಮವಾದ ವಿಚಾರವಾಗಿದೆ. ಜನರೇ ಎದ್ದು ನಿಂತು ಗಣಿಗಾರಿಕೆ ನಿಷೇಧವನ್ನು ಕೇಳುತ್ತಿದ್ದಾರೆ. ಅವರು ತಮ್ಮ ಬಗ್ಗೆ ಭರವಸೆ ಇಟ್ಟು ಗೆಲ್ಲಿಸಿದ್ದಾರೆ. ಆ ಭರವಸೆಯನ್ನು ನಾವು ಕಾಪಾಡಬೇಕು. ಇಲ್ಲದಿದ್ದರೆ ಬಹುಬೇಗ ನಾವು ಜನವಿರೋಧಿಗಳೆಂದೂ, ಹಿಂದಿನವರಿಗೂ ಇವರಿಗೂ ಏನೂ ವ್ಯತ್ಯಾಸವಿಲ್ಲವೆಂದೂ, ಭ್ರಷ್ಟಚಾರದ ಪರವೆಂದೂ, ಚುನಾವಣೆಗೆ ಗಣಿ ಲಾಬಿಯಿಂದ ಹಣ ಪಡೆದಿದ್ದೇವೆ ಎಂದೂ ತೀರ್ಮಾನಕ್ಕೆ ಬರುತ್ತಾರೆ. ನಾವು ಈ ಇಶ್ಯು ಅನ್ನು ನಮ್ಮ ಅನುಕೂಲಕ್ಕೆ ಬಳಸಿಕೊಳ್ಳಬೇಕು. ಅವರ ಬೇಡಿಕೆಯನ್ನು ಈಡೇರಿಸಿದರೆ ಅವರಿಗೆ ಸಂತೋಷವಾಗುತ್ತದೆ." ಎಂದು ಹೇಳಿ, ನಗುತ್ತಾ ತಮ್ಮ ಸಂಪುಟದ ಸದಸ್ಯರನ್ನು ಕುರಿತು ಹೀಗೆ ಹೇಳಿದರು : "ಈಗ ನಾವು ಗಣಿಗಾರಿಕೆಯನ್ನು ನಿಷೇಧಿಸಿದ್ದೇವೆಂದು ತೀರ್ಮಾನ ತೆಗೆದುಕೊಳ್ಳೋಣ. ಜನ ತೃಪ್ತರಾಗುತ್ತಾರೆ. ನಮ್ಮನ್ನು ಅವರು ಮೆಚ್ಚುತ್ತಾರೆ, ಪತ್ರಿಕೆಗಳು ನಮ್ಮ ಬಗ್ಗೆ ಒಳ್ಳೇ ಒಪೀನಿಯನ್ ನೀಡುತ್ತವೆ. ಇನ್ನೂ ಐದು ವರ್ಷ ಗ್ಯಾರಂಟಿ ಇರುತ್ತೇವೆ. ಮುಂದೆ ನೋಡೋಣ. ಎಲ್ಲದಕ್ಕೂ ವಿನಾಯಿತಿ ಇರುತ್ತದೆ" ಮುಖ್ಯಮಂತ್ರಿಗಳು ಮಾರ್ಮಿಕವಾಗಿ ನಕ್ಕರು. ಸಚಿವವರುಗಳಿಗೆ ಅರ್ಥವಾಯಿತು. ಗಣಿಗಾರಿಕೆ ನಿಷೇಧ ಮಾಡಲು ಸರ್ಕಾರ ಒಕ್ಕೊರಲಿನಿಂದ ತೀರ್ಮಾನ ತೆಗೆದುಕೊಂಡಿತ್ತು.

ಇಂದು ರಾಜ್ಯದಲ್ಲಿ ಗಣಿಗಾರಿಕೆಯ ನಿಷೇಧವಾಗಿದೆ. ಗಣಿ ಉದ್ಯಮಿಗಳು ಹಲ್ಲುಕಿತ್ತ ಹುಲಿಗಳಂತೆ ತಳಮಳಗೊಂಡಿದ್ದಾರೆ. ಅಂಥ ಸಂದರ್ಭದಲ್ಲಿ ಗಣಿಗಾರಿಕೆಗೆ ಮತ್ತೆ ನೆರವಿಗೆ ಬಂದವರು ಗಣಿ ಮತ್ತು ಭೂವಿಜ್ಞಾನದ ಅಧಿಕಾರಿಗಳೇ. ಮನೆ, ಶಾಲೆ, ಆಸ್ಪತ್ರೆ ಮುಂತಾದ

ಕಟ್ಟಡಗಳನ್ನು ಕಟ್ಟಲು ಸೈಜುಕಲ್ಲುಗಳು ಬೇಕು; ಜೆಲ್ಲಿ ಬೇಕು; ಕಲ್ಲು ಚಪ್ಪಡಿಗಳು ಬೇಕು; ಬೌಲ್ಡರ್ಸ್ ಬೇಕು. ಅವುಗಳನ್ನು ಸಾಮಾನ್ಯವಾಗಿ ದೊರೆಯುವ ಕಲ್ಲುಗಳಿಂದ ತಯಾರಿಸುತ್ತಾರೆ. ಯಾವುದು ಗ್ರಾನೈಟ್ ಅನ್ನಿಸಿಕೊಳ್ಳುವುದಿಲ್ಲವೋ ಅದು. ಇದು ಬೆಲೆಬಾಳುವ ಕಲ್ಲಲ್ಲವೆಂದೂ ಇಲ್ಲಿ ಕಲ್ಲು ಹೊಡೆಯುವ ಕ್ವಾರಿಯನ್ನು ನಡೆಸಬಹುದೆಂದೂ ಗಣಿ ಇಲಾಖೆಯ ಅಧಿಕಾರಿಗಳು ಲೈಸನ್ಸ್ ನೀಡಬೇಕಿತ್ತು. ಅದಕ್ಕೆ ಮುನ್ನ ಕಂದಾಯ ಇಲಾಖೆಯಿಂದ ಸದರಿ ಜಮೀನಿನಲ್ಲಿ ಕ್ವಾರಿ ನಡೆಸಲು ಅನುಮತಿ ಪಡೆಯಬೇಕಿತ್ತು.

ಗಣಿಗಾರಿಕೆ ಈಗ ಹೊಸ ಸ್ವರೂಪವನ್ನು ಪಡೆದುಕೊಂಡಿತ್ತು. ಕ್ವಾರಿಯ ಹೆಸರಿನಲ್ಲಿ ಲೈಸನ್ಸ್ ಪಡೆದು, ಗ್ರಾನೈಟ್ ಕಲ್ಲನ್ನು ತೆಗೆದು ಸಾಗಿಸುವ ಕೆಲಸ ಕಾಳದಂಧೆಯಾಯಿತು. ಅಧಿಕಾರಿಗಳು ಮೊದಲಿಗಿಂತ ಹೆಚ್ಚು ಹಣ ಮಾಡಲು ತೊಡಗಿದರು. ಜೂನಿಯರ್ ರೆಡ್ಡಿ ಮತ್ತು ಮಹೇಶ ಈ ದಂಧೆಯಲ್ಲಿ ನಿಪುಣರಾದರು.

## ಅಧ್ಯಾಯ : ಒಂಬತ್ತು

ಎಲ್ಲರು ಹೋಟೆಲ್ಲಿನಿಂದ ಹೊರ ಬಂದರು. ರೆಡ್ಡಿ ಬಿಲ್ಲನ್ನು ಪಾವತಿಸಿದ. ಶರಣ್ ಮತ್ತು ಮಹೇಶ್ ಹೋಟೆಲ್ಲಿನ ಹೊರ ಆವರಣದಲ್ಲಿದ್ದ ಸ್ಟಾಲ್‌ಬಳಿ ಹೋದರು. ಭೂಮಿಗೌಡ ಮತ್ತು ಚಂದ್ರಿಕಾ ಸುಮೊ ಬಳಿ ಹೋಗಲು ಅನುವಾದರು. ರೆಡ್ಡಿ ಅವರನ್ನು ಹಿಂಬಾಲಿಸಿ ಸುಮೊದ ಹಿಂದಿನ ಬಾಗಿಲ ಲಾಕ್ ಓಪನ್ ಮಾಡಿದ.

"ನಿಮಗೆ ಬಾಳೆ ಹಣ್ಣು ಬೇಕೇ ಸಿಸ್ಟರ್ ? ಸಾರ್ ತಮಗೆ ?" ಎಂದು ಅವರಿಬ್ಬರನ್ನು ಕೇಳಿದ. ಅವರಿಬ್ಬರೂ ಬೇಡವೆಂದರು. ರೆಡ್ಡಿ ಮತ್ತೆ ಹಿಂದಕ್ಕೆ ಹೋಗಿ ಶರಣ್ ಮತ್ತು ಮಹೇಶರನ್ನು ಕೂಡಿಕೊಂಡ.

ಚಂದ್ರಿಕಾ ಮೆಲ್ಲಗೆ ಹಿಂದಿನ ಬಾಗಿಲನ್ನು ತೆರೆದು ಒಳಗೆ ಹೋದಳು. ತಾನು ಕುಳಿತದ್ದ ಜಾಗದ ಬುಡದದಲ್ಲಿದ್ದ ಬ್ಯಾಗಿನಿಂದ ಅವಳು ಏನೋ ತಡಕಾಡಿ ಹೊರತೆಗೆದಳು. ಹಿಂದಿನಿಂದ ಸೀಟಿನ ಮೇಲೆ ಬಾಗಿ ನಿಂತ ಅವಳ ಭಂಗಿ ಗೌಡನಿಗೆ ಆಕರ್ಷಕವಾಗಿ ಕಂಡಿತು. ಅವಳ ನಿತಂಬಗಳು ಎರಡು ಬಿಂದಿಗೆಯಾಕಾರದಲ್ಲಿ ಉಬ್ಬಿ ಅವಳನ್ನು ಮತ್ತಷ್ಟು ಆಕರ್ಷಿತಳನ್ನಾಗಿಸಿದ್ದವು. ತಕ್ಷಣ ಅವನ ವಿವೇಚನೆ ಅವನನ್ನು ಎಚ್ಚರಿಸಿತು. ಅಪರಿಚಿತ ಮಹಿಳೆ, ಮೇಲಾಗಿ ಮದುವೆಯಾಗಿರುವ ಹೆಣ್ಣು. ಅವಳನ್ನು ಹಾಗೆ ನೋಡುವುದು ತಪ್ಪು. ಏನು ಮಾಡುವುದು ? ಕೆಟ್ಟ ಕುತೂಹಲ. ಅವನು ಆಕಾಶದಲ್ಲಿ, ಪೂರ್ವದಿಕ್ಕಿನಲ್ಲಿ ಹಾಲುಗೆರೆಯುತ್ತಿದ್ದ ಚಂದ್ರನನ್ನು ನೋಡಿದ. ಚಂದ್ರನ ಮುಖ ಚಂದ್ರಿಕಾಳ ಮುಖದಂತೆ ತೋರಿತು. ಛೇ ಎಂದು ಕೊಂಡ. ತನ್ನ ಭ್ರಮೆ ಎಂದು ಕೊಂಡ.

ನೋಡು ನೋಡುತ್ತಲೆ ಅವನ ಮುಖದಲ್ಲಿ ನೆನಪಿನ ಮೋಡಗಳು ತುಂಬಿಕೊಂಡವು. ಕಣ್ಣುಗಳು ಕಿರಿದಾದವು. ಹೆಣ್ಣು ಚುಂಬಕ ಶಕ್ತಿಯಿರುವ ನೆನಪಿನ ಮುದ್ದೆ, ಅಂತರಂಗದ ಮೂಲೆಯಲ್ಲಿ ಒಮ್ಮೆ ಸೇರಿಬಿಟ್ಟರೆ ಅದು ಬಿಟ್ಟು ಹೋಗುವುದೇ ಇಲ್ಲ. ಅದು ತಾಯಿಯಾಗಲೀ ತಂಗಿಯಾಗಲೀ ಪ್ರಿಯಳೇ ಆಗಿರಲೀ ಯಾರೇ ಆಗಲಿ. ಒಮ್ಮೆ ದಾಖಲಾದರೆ ಮುಗಿಯಿತು. ಮತ್ತೆ ಮತ್ತೆ ಇದ್ದಕ್ಕಿದಂತೆ ಧುತ್ತನೆ ಮೂಡಿ ಆವರಿಸಿಕೊಂಡು ಬಿಡುತ್ತದೆ.

ಚಂದ್ರನಿಂದ ತನ್ನ ದೃಷ್ಟಿಯನ್ನು ತೆಗೆದು ಮತ್ತೆ ಸುಮೊ ಒಳಗೆ ನೋಡಿದ. ಒಂದು ಪ್ಲಾಸ್ಟಿಕ್ ತಟ್ಟೆ-ಚಿಕ್ಕದು-ಯೊಳಗೆ ಎರಡು ಮಾರಿ ಬಿಸ್ಕತ್ತುಗಳನ್ನು ಮುರಿದು ಹಾಕಿದಳು. ಅವಳ ಕ್ರಿಯೆಯನ್ನೇ ನೋಡುತ್ತಾ ಬಾಲವನ್ನಾಡಿಸುತ್ತಾ ಬೆಳ್ಳಿ ಆಸೆ ಕಂಗಳಿಂದ ನೋಡುತ್ತಿತ್ತು. ಅವಳು ಅದರ ತಲೆ ಸವರಿ 'ತಿನ್ನು' ಎಂದಳು. ಅದು ಖುಷಿಯಿಂದ ಬಿಸ್ಕತ್ತಿನ ಚೂರುಗಳನ್ನು ತಿನ್ನತೊಡಗಿತು. ಬಿಸ್ಕತ್ತು ಮುಗಿದ ಮೇಲೆ ತನ್ನ ತಲೆಯನ್ನೆತ್ತಿ ಅದು ಚಂದ್ರಿಕಾಳನ್ನು ನೋಡಿ

ಕುಯ್ ಗುಟ್ಟಿತು. ಅವಳು ಹೊರಗೆ ನಿಂತು ತಮ್ಮನ್ನೇ ನೋಡುತ್ತಿದ್ದ ಭೂಮಿಗೌಡನನ್ನೊಮ್ಮೆ ನೋಡಿ "ನೋಡಿ ಹಾಲೂ ಕೇಳುತ್ತಿದೆ" ಎಂದು ಮತ್ತೆ ಮುಂದಿನ ಸೀಟಿಗೆ ಬಗ್ಗಿ ಅಲ್ಲಿದ್ದ ಬ್ಯಾಗಿನಿಂದ ಒಂದು ಹಾಲಿನ ಬಾಟಲನ್ನು ಹೊರತೆಗೆದಳು. ಮತ್ತೆ ಅವಳ ನಿತಂಬಗಳುಅವನ ಎದೆಯನ್ನು ಮೃದುವಾಗಿ ಕುಟ್ಟಿದವು. ಒಮ್ಮೆ ಕಣ್ಣು ಮುಚ್ಚಿದ. ಅಲ್ಲೂ ಅವೇ ಕಾಣಬೇಕೆ ?

ಅವಳು ತಟ್ಟೆಗೆ ಸ್ವಲ್ಪ ಹಾಲನ್ನು ಸುರುವಿದಳು. ಬೆಳ್ಳಿ ತನ್ನ ತೆಳುವಾದ ನಾಲಗೆಯಿಂದ ಲೊಚಲೊಚನೆ ಕುಡಿದು, ಮತ್ತೆ ಸ್ವಲ್ಪ ಬೇಕೆಂಬಂತೆ ಅವಳನ್ನು ನೋಡಿತು. ಮತ್ತೆ ಸ್ವಲ್ಪ ಹಾಲನ್ನು ಹಾಕಿದಳು. ಅದು ಕುಡಿದು ಅವಳ ಮುಖವನ್ನೊಮ್ಮೆ ನೋಡಿ ಬಾಗಿಲ ಕಡೆ ನೋಡಿ ಕುಯ್‌ಗುಟ್ಟಿತು. ಅವಳು ಮೃದುವಾಗಿ ನಕ್ಕು ಅದರ ತಲೆಯ ಮೇಲೆ ಮೃದುವಾಗಿ ತಟ್ಟಿ ಗೌಡನನ್ನು ಕುರಿತು "ಹೊರಗೆ ಕರೆದುಕೊಂಡು ಹೋಗಬೇಕಂತೆ" ಎಂದಳು. ತನ್ನ ಬ್ಯಾಗಿನಿಂದ ಕಿರುಬೆರಳಿಗಿಂತ ಸಣ್ಣವಿರುವ, ಕೆಂಪು ಬಣ್ಣದ ದಾರದ ಆಕಾರದ ಬೆಲ್ಟ್ ಅನ್ನು ಹೊರ ತೆಗೆದು ಅದರ ಕುತ್ತಿಗೆಯಲ್ಲಿದ್ದ ಚೈನಿಗೆ ಸಿಕ್ಕಿಸಿದಳು. "ಬಾ ಹೋಗೋಣ' ಎಂದು ಸುಮೊನಿಂದ ಹೊರಗೆ ಬಂದಳು.

ಚಂದ್ರಿಕಾ ಬೆಳ್ಳಿಯೊಡನೆ ರಾಜ್ಯ ಹೆದ್ದಾರಿಯ ಫುಟಪಾತಿನಲ್ಲಿ ನಡೆಯತೊಡಗಿದಳು. ಗೌಡ ಅವಳನ್ನು ಬೆಳ್ಳಿಯನ್ನು ನೋಡತೊಡಗಿದ. ಬೆಳ್ಳಿ ಹೆಜ್ಜೆ ಹೆಜ್ಜೆಗೂ ನೆಲವನ್ನು ಮೂಸುತ್ತಾ, ಪಾರ್ಥೇನಿಯಂ ಗಿಡವೋ ಮತ್ತೊಂದೋ ಸಿಕ್ಕಿದಾಗ ಅದನ್ನು ಮೂಸಿ ಮೂಸಿ ಹಿಂದುಗಡೆ ಕಾಲುಗಳನ್ನು ಹಿಂದಕ್ಕೆ, ಕೆಳಕ್ಕೆ ಬಾಗಿ ಮೂತ್ರ ವಿಸರ್ಜನೆ ಮಾಡುತ್ತಾ ಸಾಗಿತು. ಒಮ್ಮೆ ಹಿಂದಿನ ಎರಡು ಕಾಲುಗಳ ಮೇಲೆ ಕುಳಿತು ತಲೆಯನ್ನೆತ್ತಿ ಒಮ್ಮೆ ಚಂದ್ರಿಕಾಳ ಮೊಗವನ್ನು ನೋಡಿ, ಮುಕ್ಕರಿದು ಮಲವಿಸರ್ಜನೆ ಮಾಡಿತು. ಅದಕ್ಕೆ ತೃಪ್ತಿ, ಸಂತೋಷ ಎರಡೂ ಆಯಿತು. ಅದು ಮಲವಿಸರ್ಜನೆ ಮಾಡಿದ್ದು ನೋಡಿ ಚಂದ್ರಿಕಾಳಿಗೂ ಸಂತೋಷವಾಗಿರಬೇಕು. ಅದು ಅವಳ ಮುಖದಲ್ಲಿ ವ್ಯಕ್ತವಾಗುತ್ತಿತ್ತು. ಬೆಳ್ಳಿ ಅವಳನ್ನು ಮತ್ತಷ್ಟು ಮುಂದೆ ಹೋಗು ಎಂಬಂತೆ ಅವಳನ್ನು ಮುಂದಕ್ಕೆ ಎಳೆಯುತ್ತಿತ್ತು. ಅದರ ಒತ್ತಾಸೆಯನ್ನು ನಿರಾಕರಿಸಲಾಗದು ಎಂಬಂತೆ ಅವಳು ಮತ್ತೆ ಮತ್ತೆ ಮುಂದೆ ಹೋದಳು.

ಭೂಮಿಗೌಡ ಅವಳನ್ನೊಮ್ಮೆ, ಮತ್ತೆ ಹೊಟೇಲ್ಲಿನ ಮುಂದಿನ ಸ್ಟಾಲ್‌ನ ಮುಂದೆ ಸಾವಕಾಶವಾಗಿ ಸಿಗರೇಟು ಎಳೆಯುತ್ತಾ ನಿಂತಿದ್ದ ಮೂವರು ಗೆಳೆಯರನ್ನೂ ನೋಡಿದ. ಅವರ್‍ಯಾರಲ್ಲೂ ಅವಸರದ ಚಿಹ್ನೆ ಲವಲೇಶವೂ ಇರಲಿಲ್ಲ. ಆಗಲೇ ರಾತ್ರಿಯಾಗಿತ್ತು. ಎಂಟು ಗಂಟೆಯ ಸಮಯ. ತಾನು ರಾಮನಗರ ಬಿಟ್ಟ ಸಮಯದಿಂದ ಸರಿಯಾಗಿ ಹೋಗಿದ್ದರೆ ಹೆಚ್ಚು ಕಡಿಮೆ ಮೈಸೂರಿಗೆ ತಲುಪಬಹುದಿತ್ತು. ತಾನು ಈಗ ಪರಾವಲಂಭಿ. ಇದನ್ನೇ ಅಲ್ಲವೆ ಮುಲಾಜು ಎನ್ನುವುದು. ನಾನು ಬೂಸೇಗೌಡನ ಒತ್ತಾಯಕ್ಕೆ ಮಣಿಯಬಾರದಿತ್ತು. ಅಲ್ಲಿ ಒತ್ತಾಯಕ್ಕೆ ಮಣಿದು, ಈಗ ಒಂದು ಬಗೆಯ ಮುಲಾಜಿನೊಡನೆ ಈ ಅಪರಿಚಿತರೊಡನೆ ಇರಬೇಕಾದ ಅನಿವಾರ್ಯತೆ ಸೃಷ್ಟಿಯಾಗಿದೆ.

ಬೇಗನೆ ಹೊರಡೋಣ ಎಂದು ಹೇಗೆ ಒತ್ತಾಯ ತರುವುದು? ಹೊರಡುವುದು, ನಿಲ್ಲಿಸವುದು-ಎಲ್ಲ ಅವರಿಚ್ಚೆ. ಅವರೊಡನೆ ಇದ್ದು, ಅವರು ಹೊರಟಾಗ ಮೈಸೂರು ಸೇರಬೇಕು. ಇಲ್ಲ, ಅವರಿಂದ ಕಳಚಿಕೊಳ್ಳಬೇಕು. ಅದು ಅಷ್ಟು ಸುಲಭವೇ? ಈಗ ನಾನು ಬಸ್ಸು ಹತ್ತಿ ಹೋಗುತ್ತೇನೆ ಎನ್ನುವುದು ಸರಿಯಲ್ಲ, ಸೌಜನ್ಯವೂ ಅಲ್ಲ. ಇನ್ನೇನು ಹೊರಡುತ್ತಾರೆ. ಅನಂತರ ನೇರ ಮೈಸೂರು ತಾನೇ ?

ಚಂದ್ರಿಕಾ ಮತ್ತು ಬೆಳ್ಳಿ ಸುಮೊ ಕಡೆಗೆ ಮರಳುತ್ತಿದ್ದರು. ಸ್ವಲ್ಪದೂರವಾಕ್ ಮಾಡಿದ್ದರಿಂದ ಬೆಳ್ಳಿಗೆ ಸಂತೋಷವಾಗಿತ್ತು. ಅದರ ವ್ಯಕ್ತಿತ್ವದಲ್ಲಿ ಆ ಸಂತೋಷ ವ್ಯಕ್ತವಾಗುತ್ತಿತ್ತು. ಸುಮೊ ಹತ್ತಿರ ಬಂದೊಡನೆ ಅದು ಗೌಡನ ಕಾಲುಗಳನ್ನು ಮೂಸಿ ನೆಕ್ಕಿ ತನ್ನ ಸ್ನೇಹವನ್ನು ವ್ಯಕ್ತಪಡಿಸಿತು. ತನ್ನನ್ನು ಎತ್ತಿಕೋ ಎಂಬಂತೆ ಅವನ ಮಂಡಿಯ ಮೇಲೆ ತನ್ನೆರಡು ಮುಂಗಾಲುಗಳನ್ನು ಇಟ್ಟು ಅವನ ಮುಖವನ್ನು ನೋಡಿ, ತನ್ನ ಬಾಲವನ್ನು ಆಡಿಸಿತು. ಭೂಮಿಗೌಡ ಪ್ರೀತಿ ತುಂಬಿದಂತಾಗಿ ಅದನ್ನು ಎತ್ತಿಕೊಂಡು ಎದೆಗವಚಿಕೊಂಡು ಬೆನ್ನುಸವರಿದನು. ಚಂದ್ರಿಕಾ "ಅಯ್ಯೋ ಸಾರ್, ನಿಮ್ಮ ಬಟ್ಟೆ ಕೊಳೆಯಾಗುತ್ತದೆ. ಈಗ ತಾನೆ ಅದು ರಸ್ತೆಯಲ್ಲಿ ವಾಕ್ ಮಾಡಿ ಬಂದಿದೆ" ಎಂದಳು. "ಇರಲಿ ಬಿಡಿ, ನಾವು ಮಣ್ಣಿನಿಂದ ಬಂದವರು, 'ಮಣ್ಣಿಂದ ಕಾಯ' ಎಂಬ ಮಾತು ಕೇಳಿಲ್ಲವೆ ? ನನಗೆ ಕೊಳೆ ಗಿಳೆ ಅಂದರೆ ಮುಜುಗರವೇನಿಲ್ಲ. ಅದು ನನ್ನ ವೃತ್ತಿಯೊಡನೆ ಬೆರೆತುಹೋಗಿದೆ." ಎಂದ ನಾಯಿಮರಿಯನ್ನು ಮುದ್ದು ಮಾಡುತ್ತಾ.

ಚಂದ್ರಿಕಾ ಗಡಿಯಾರ ನೋಡಿಕೊಂಡಳು. ಹೋಟೆಲ್ಲಿನ ಕಡೆ ನೋಡಿದಳು. ಅವರು ಮಾತನಾಡುತ್ತಲೇ ಇದ್ದರು. ಅವರ ಮಾತಿನ ವರಸೆ, ಕೈ ಬಾಯ್ ಚಲನೆ, ಮುಖಭಾವ ಅವರು ಗಂಭೀರವಾದ ವಿಚಾರವೇನನ್ನೋ ಚರ್ಚಿಸುತ್ತಿರುವಂತೆ ಅವಳಿಗೆ ತೋರಿತು. "ತಡವಾಯಿತು. ಇಷ್ಟೊತ್ತಿಗೆ ನಾನು ಮನೆಗೆ ಹೋಗಬೇಕಿತ್ತು. ನನ್ನ ಮಗ ಕಾಯ್ತಾ ಇರ್ತಾನೆ. ಬರ್ತೀನಿ ಅಂತ ಫೋನ್ ಮಾಡಿ ಹೇಳಿದ್ದೆ. ಈಗ ನೋಡಿದರೆ ಗಂಟೆ ಎಂಟಾಯ್ತು. ಈಗ ಬಿಟ್ಟರೂ ಒಂಭತ್ತುವರೆ-ಹತ್ತಾಗುತ್ತದೆ ತಲುಪಲು-" ಎಂದು ತನ್ನ ವ್ಯಾನಿಟಿಬ್ಯಾಗಿನ ಜಿಪ್ ತೆಗೆದು ಮೊಬೈಲ್ ಫೋನ್‌ನನ್ನು ಹೊರತೆಗೆದಳು.

ಭೂಮಿಗೌಡ ಅವಳ ಮುಖವನ್ನು ನೋಡಿದ. ರಸ್ತೆಯ ದೀಪದ ಬೆಳಕು, ಹೋಟೆಲ್ಲಿನ ಟ್ಯೂಬ್‌ಲೈಟ್ ಬೆಳಕು, ಆಕಾಶದ ಚಂದ್ರನ ಬೆಳಕು ಅವಳ ಮುಖದ ಮೇಲೆ ವಿಚಿತ್ರವಾದ ಕಾಂತಿಯನ್ನು ಬೀರಿದ್ದವು. ಆ ಕಾಂತಿಯ ನಡುವೆ ಒಂದು ಬಗೆಯ ತಳಮಳ, ಆತಂಕ ಮೂಡುತ್ತಿರುವಂತೆ ಕಂಡಿತು. "ನಿಮಗೆ ಮಗ ಇದ್ದಾನೆಯೇ?" ಆಶ್ಚರ್ಯ ಬೆರೆತ ದನಿಯಲ್ಲಿ ಕೇಳಿದ ಗೌಡ.

"ಹೌದು ಸಾರ್. ಮೂರೂವರೆ ವರ್ಷದವನು. ಶೋಭಿತ್ ಅಂತ ಅವನ ಹೆಸರು. ನಮ್ಮ ತಾಯಿ ಮನೆಯಲ್ಲಿ ಒಂದು ಹದಿನೈದು ದಿನದಿಂದ ಇದ್ದಾನೆ. ನಾನು ಹೋಗುತ್ತಿರುವುದೇ ಅವನನ್ನು ಕರೆತರಲು. ಎಲ್‌ಕೆಜಿಗೆ ಸೇರಿಸಬೇಕು. ನಮ್ಮ ಮನೆಯ ಹತ್ತಿರಾನೆ ಒಂದು ಕಡೆ ಅವನಿಗೆ ಸೀಟು ಸಿಕ್ಕಿದೆ. ಅದೂ ಶರಣ್ ಕೊಡಿಸಿದ್ದು. ಅದಕ್ಕೆ ಪೀಕೆ ಅವರಿಂದ ಹೇಳಿಸಬೇಕಾಯ್ತು

ಅಂದ. ನಾವೆಲ್ಲ ಓದುವಾಗ ಇವೆಲ್ಲಾ ತರ್ಲೆತಾಪತ್ರಯ ಇರ್‍ಲಿಲ್ಲ. ನಮ್ಮ ಮನೆ ಅಕ್ಕಪಕ್ಕದ ಶಾಲೆಗಳಲ್ಲಿ ಓದಿ ಪಾಸುಮಾಡಿದೆವು"- ಎಂದಳು, ಚಂದ್ರಿಕಾ ಆಕಾಶದ ಚಂದ್ರನ್ನು ನೋಡುತ್ತಾ.

"ನಿಮ್ಮ ಮನೆಯರು ಕನಕಪುರದ ತಹಸೀಲ್ದಾರ್ ಅಲ್ಲವೆ? ಮನೆ ಹೆಡ್ ಕ್ವಾರ್ಟರ್ಸ್‌ನಲ್ಲೇ ಇರಬೇಕೆಂಬ ನಿಯಮವಿರುವ ಹಾಗೆ ನಾನು ಕೇಳಿದ್ದೇನೆ. ನೀವು ಮಗನನ್ನು ಬೆಂಗಳೂರಿನಲ್ಲಿ ಶಾಲೆಗೆ ಸೇರಿಸಿದರೆ ಹೇಗೆ ?" ಗೌಡ ತನ್ನ ಅನುಮಾನ ವ್ಯಕ್ತಪಡಿಸಿದ.

"ಅವರು ಬೆಂಗಳೂರಿಗೆ ವರ್ಗಾವಣೆಗೆ ಯತ್ನಿಸುತ್ತಿದ್ದಾರೆ. ಆಗಬಹುದು ಅನ್ನುತ್ತಾರೆ. ಅಲ್ಲಿವರೆಗೆ ಹೇಗಿದ್ದರೂ ಅಲ್ಲಿ ಕ್ವಾರ್ಟರ್ಸ್ ಇದ್ದೇ ಇದೆಯಲ್ಲಾ. ಅವರು ಅಲ್ಲಿರ್‍ತಾರೆ. ಬೆಂಗಳೂರಿಗೆ ಬಂದು ಹೋಗ್ತಾರೆ" ಎಂದು ಉತ್ತರಿಸಿದಳು ಚಂದ್ರಿಕಾ. ಅಮ್ಮನ ಮನೆಗೆ ಸೆಲ್‌ನಿಂದ ಫೋನ್ ಮಾಡಿದಳು. "ಅಮ್ಮಾ ನಾನು ಚಂದ್ರಿಕಾ. ಶರತಣ್ಣನ ಜೊತೆಯಲ್ಲಿ ಬರುತ್ತಿದ್ದೇನೆ. ಏನೋಗೊತ್ತಿಲ್ಲ, ಸ್ವಲ್ಪ ನಿಧಾನ ಮಾಡ್ತಿದ್ದಾರೆ...... ಹ್ಞಾಂ.....ಹ್ಞಾಂ..........ಊಟಕ್ಕೆ ಬರುತ್ತೇವೆ.........ಹೌದಾ........ಅವನಿಗೆ ಕೊಡು.........ಏನು ಪುಟ್ಟ ? ಊಟ ಮಾಡು. ಅಜ್ಜಿ ತಾತನಿಗೆ ತೊಂದರೆ ಕೊಡಬೇಡ. ಬಂದು ಬಿಡುತ್ತೇನೆ. ಅಜ್ಜಿಗೆ ಕೊಡು......ಅಮ್ಮ ಹತ್ತುಗಂಟೆಯ ಹೊತ್ತಿಗೆ ಬರುತ್ತೇವೆ. ನನಗೆ ತಿಳಿಸಾರು ಅನ್ನ ಸಾಕು. ಇನ್ನೇನು ಮಾಡಬೇಡ" ಸೆಲ್ ಅನ್ನು ಡಿಸ್‌ಕನೆಕ್ಟ್ ಮಾಡಿ ಅದನ್ನು ಮತ್ತೆ ತನ್ನ ಬ್ಯಾಗಿಗೆ ಸೇರಿಸಿದಳು.

ಭೂಮಿಗೌಡ ಅವಳು ಮಾತನಾಡವಾಗ ಅವಳ ಮುಖವನ್ನೇ ನೋಡುತ್ತಿದ್ದ. ಅವಳ ಮುಖದಲ್ಲಿ ಭಾವಗಳ ಏರಿಳಿತವಿತ್ತು. ಅವಳ ಕಣ್ಣುಗಳು ಭಾವನೆಯನ್ನು ಸಶಕ್ತವಾಗಿ ಅಭಿವ್ಯಕ್ತಿಸುತ್ತಿದ್ದವು. ಆಗ ಅವಳು ಒಂದು ಹೆಣ್ಣಿನಂತೆ, ತಾಯಿಯಂತೆ ಗೋಚರಿಸಿದಳು. ಅವನು "ನಿಮ್ಮ ಮದುವೆಯಾಗಿ ಎಷ್ಟು ವರ್ಷವಾಯಿತು." ಸಹಜ ಕುತೂಹಲದಿಂದ ಕೇಳಿದ.

"ಐದು ವರ್ಷ ಆಯ್ತು, ಈ ಮೇಗೆ. ನನ್ನ ಇಪ್ಪತ್ಮೂರು ವರ್ಷಕ್ಕೇ ಮದುವೆ ಆಗಿ ಹೋಯಿತು. ಆಗ ತಾನೆ ಎಂ. ಎ ಮಾಡಿದ್ದೆ. ನನಗೆ ಇಷ್ಟವಾದ ಸಬ್ಜೆಕ್ಟ್. ಸಮಾಜ ಶಾಸ್ತ್ರ. ಪಿ.ಎಚ್‌ಡಿ ಮಾಡ್ಬೇಕು ಅಂತ ಇದ್ದೆ. ಫೆಲೋಶಿಪ್ ಕೂಡ ಸಿಕ್ಕಿತ್ತು. ಅಷ್ಟರಲ್ಲಿ ಎಲ್ಲ ತರಾತುರಿಯಲ್ಲಿ ಆಗಿ ಹೋಯಿತು." ಸ್ವಲ್ಪ ಮಾತನ್ನು ತಡೆದು "ಅಲ್ಲಾ ಸಾರ್, ಎಲ್ಲಾ ನಾವಂದು ಕೊಂಡಂತೆ ಜೀವನದಲ್ಲಿ ಆಗುತ್ತದೆಯೇ ?" ಎಂದು ಪ್ರಶ್ನಿಸಿದಳು.

ಭೂಮಿಗೌಡ ಈ ಪ್ರಶ್ನೆಗೆ ಉತ್ತರಿಸುವುದು ಹೇಗೆ ಎಂದು ಚಿಂತಿಸಿದ. ಜೀವನ ಆಕಸ್ಮಿಕಗಳ ಮೊತ್ತ. ಸರಿಯಾದ ರೀತಿಯಲ್ಲಿ ಯೋಜನೆಗಳನ್ನು ರೂಪಿಸಿ, ಅವುಗಳನ್ನು ಶಿಸ್ತು ಬದ್ಧವಾಗಿ ಕಾರ್ಯರೂಪಕ್ಕೆ ತಂದು ಯಶಸ್ವಿಯಾದರೆ ಜೀವನದಲ್ಲಿ ನಾವಂದು ಕೊಂಡಂತೆಯೇ ಆಗುತ್ತದೆ. ವಿವರಗಳಲ್ಲಿ, ಕ್ರಿಯೆಗಳಲ್ಲಿ, ಹೋಗುವ ದಾರಿಗಳಲ್ಲಿ ಸ್ವಲ್ಪ ಅದಲು ಬದಲಾಗಬಹುದು. ಆದರೆ ಅಂದುಕೊಂಡ ಗುರಿಯನ್ನು ಮುಟ್ಟಬಹುದು. ಆದರೆ ಇದಕ್ಕೆ ಮನೋಬಲ ಬೇಕು; ಅದಕ್ಕೆ ಪೂರಕವಾದ ಕೌಟುಂಬಿಕ ವಾತಾವರಣ ಬೇಕು. ಆರ್ಥಿಕ ಸ್ವಾವಲಂಬನೆಬೇಕು. ನಮ್ಮ ದೇಶದಲ್ಲಿ ಅಂದುಕೊಂಡಂತೆ ಆಗುವುದು ಅಥವಾ ಜೀವಿಸುವುದು ಲಿಂಗದ ಮೇಲೂ

ಭಿನ್ನವಾಗುತ್ತದೆ. ಗಂಡಸಿಗಿರುವ ಸ್ವಾತಂತ್ರ್ಯ ಹೆಣ್ಣಿಗೆ ಸಿಗದೆ ಇರುವ ಸಂದರ್ಭಗಳೇ ಹೆಚ್ಚು. ಅಪ್ಪ ಅಮ್ಮಂದಿರ ಮನೋಭಾವ, ಹೆಣ್ಣಿನ ಆತ್ಮಸ್ಥೈರ್ಯಗಳು ಮುಖ್ಯಕೆಲಸ ಮಾಡುತ್ತವೆ.

ಚಂದ್ರಿಕಾಳ ಪ್ರಶ್ನೆ ಸರಳವೆಂಬಂತೆ ತೋರಿದರೂ ಸರಳವಲ್ಲ. ತನ್ನ ಜೀವನ ಎರಡು ಕವಲಾಗಿ ಒಡೆದು ಹೋಗಿದೆ. ತನ್ನ ವೃತ್ತಿ ಬದುಕಿನಲ್ಲಿ ತಾನಂದು ಕೊಂಡಂತೆಯೇ ಆಗಿದೆ. ಆದರೆ ತನ್ನ ವೈಯಕ್ತಿಕ ಬದುಕಿನಲ್ಲಿ ? ತಾನಂದುಕೊಂಡಂತೆ ಆಗಿದೆಯೇ ? ನನ್ನ ರಾಗ ಭಾವಗಳು ಸಂತೃಪ್ತಿಗೊಂಡಿದ್ದಾವೆಯೇ ? ದಾಂಪತ್ಯದ ಕನಸು, ಹೆಂಡತಿ, ಮಕ್ಕಳು ? ಎಲ್ಲವೂ ಕನಸಾಗಿಯೇ ಉಳಿದವು ಅಂದರೆ ಅಂದುಕೊಂಡಂತೆ ಆಗಲಿಲ್ಲ.

ಆದರೆ ಅವನು ಬದುಕನ್ನು ಅದು ಇರುವ ಹಾಗೆ ಸ್ವೀಕರಿಸಿದ; ಅದು ಬಂದ ಹಾಗೆ ಅನುಭವಿಸಿದ. ಬಾರದ್ದಕ್ಕೆ ವ್ಯಥೆಪಡಲಿಲ್ಲ. ಕಳೆದದ್ದು ಕೇವಲ ನೆನಪು ಮಾತ್ರ. ಆಗಾಗ್ಗೆ ಬೀಸುವ ವಿಷಾದದ ಮಾರುತವದು. ಎದೆಯಲ್ಲಿ ಮೂಡಿದ ಗಾಯ ವಾಸಿಯಾದರೂ ಅದರ ಗುರುತು ಮಾತ್ರ ಕಣ್ಣಿಗೆ ಬಿದ್ದು ನೆನಪಾಗಿ ವಿಷಾದ ಮೂಡಿಸುತ್ತದೆ.

ಈ ಅಂಶಗಳನ್ನು ಚಂದ್ರಿಕಾಳಿಗೆ ಹೇಗೆ ಹೇಳುವುದು ? ನೆರವಿಗೆ ಬರುವಂತೆ ಕೋರಿ ಆಕಾಶದಲ್ಲಿದ್ದ ಚಂದ್ರನನ್ನು ತಲೆ ಎತ್ತಿ ನೋಡಿದ. ನೆರವಿಗೆ ಚಂದ್ರ ಬರುವುದಿಲ್ಲವೆಂದು ಅವನಿಗೆ ಗೊತ್ತು. ಬೆಳ್ಳಿ ಅವನ ತೋಳ ತೆಕ್ಕೆಯಲ್ಲಿ ಚಂದ್ರನ ಪ್ರತಿರೂಪದಂತೆ ಕಾಣುತ್ತಿತ್ತು. ಚಂದ್ರನಿಂದ ಅವನ ನೋಟ ಚಂದ್ರಿಕಾಳೆಡೆ, ಅಲ್ಲಿಂದ ಬೆಳ್ಳಿಯೆಡೆ ಸಾಗಿ ನಿಂತಿತು.

ಅವನ ನೆರವಿಗೆ ಬಂದವರಂತೆ ರೆಡ್ಡಿ ಮತ್ತವನ ಗೆಳೆಯರು ಸುಮೊ ಬಳಿ ಬಂದರು. "ಹೊರಡೋಣ ಸಾರ್, ಸಾರಿ. ನಿಮಗೆ ತಡವಾಯ್ತೆಂದು ತೋರುತ್ತದೆ. ನಮ್ಮ ವ್ಯವಹಾರವೇ ಹೀಗೆ. ಎಲ್ಲಾ ನಾವಂದು ಕೊಂಡಂತೆ ಆಗೋಲ್ಲ, ಏನೇನೂ ಅಡೆತಡೆಗಳು. ಅದು ಬಿಡಿ, ನಮಗೆ ಅಭ್ಯಾಸವಾಗಿದೆ. ನಿಮ್ಮ ಹಾಗೆ ನಾವು ಟೈಮ್ ಟೇಬಲ್ ಇಟ್ಟು ಕೊಂಡು ಕೆಲಸ ಮಾಡಬೇಕೆ ? ಸ್ವಲ್ಪ ಹೆಚ್ಚು, ಕಡಿಮೆ ಆದರೂ ನಡೆಯುತ್ತೆ" ಎಂದ ರೆಡ್ಡಿ.

ಮಹೇಶ ಮೊದಲಿಗಿಂತಲೂ ಗಂಭೀರನಾಗಿದ್ದ. ಗಹನವಾದ ಚಿಂತೆ ಅವನ ಮುಖದಲ್ಲಿ ಕಾಣುತ್ತಿತ್ತು. ಶರಣ್ ಕೂಡ ಗಂಭೀರ ಭಾವದಿಂದ ಕೂಡಿದ್ದ. ಆತ ತನ್ನ ತಂಗಿ ಕುಳಿತುಕೊಳ್ಳಲೆಂದು ಸುಮೊದ ಮಧ್ಯದ ಬಾಗಿಲನ್ನು ತೆರೆದು ನಿಂತ. ಚಂದ್ರಿಕಾ "ಅಣ್ಣ ನಾನು ಹಿಂದುಗಡೆಯೇ ಕುಳಿತುಕೊಳ್ಳುತ್ತೇನೆ. ಪ್ರೊಫೆಸರ್ ಸರ್‌ಗೆ ಬೆಳ್ಳಿ ಕಾಟಕೊಡ್ತಾಳೆ" ಎಂದಳು.

ಆಗ ತಕ್ಷಣ ಗೌಡ "ಛೇ ಛೇ, ನನಗೇನೂ ತೊಂದರೆಯಿಲ್ಲ. ನೀವು ಹೋಗಿ ಅಲ್ಲಿ ಕುಳಿತುಕೊಳ್ಳಿ. ಬೆಳ್ಳಿಯನ್ನು ನಾನು ನೋಡಿಕೊಳ್ತೇನೆ" ಎಂದ.

ಅವನ ಮಾತನ್ನು ಲೆಕ್ಕಿಸದೆ ಅವಳು ಹಿಂದಿನ ಬಾಗಿಲಿಂದ ಸುಮೊ ಹತ್ತಿ ಕುಳಿತಳು. ಅನಿವಾರ್ಯವೆಂಬಂತೆ ಅವನು ಅವಳನ್ನು ಹಿಂಬಾಲಿಸಿ ಅವಳ ಎದುರಿಗೆ ಮುಖ ಮಾಡಿ ಕುಳಿತ. ಬೆಳ್ಳಿಯನ್ನು ತನ್ನ ಪಕ್ಕದ ಖಾಲಿ ಸೀಟಿನಲ್ಲಿ ಕೂರಿಸಿದ. ರೆಡ್ಡಿ ತಾನು ಸೇದುತ್ತಿದ್ದ ಸಿಗರೇಟನ್ನು ಬಿಸಾಕಿ, ಡ್ರೈವಿಂಗ್ ಸೀಟಿನಲ್ಲಿ ಕುಳಿತ. ಹೊರಗೆ ನಿಂತು ಸಿಗರೇಟು ಸೇದುತ್ತಿದ್ದ ಮಹೇಶ

ಶರಣ್‌ನನ್ನು "ಸ್ವಲ್ಪ ನೀರು ಕೊಡು" ಎಂದ. ಶರಣ್ ತನ್ನ ತಂಗಿಯ ಬ್ಯಾಗಿನಲ್ಲಿದ್ದ ನೀರಿನ ಬಾಟಲನ್ನು ತೆಗೆದು ಅವನಿಗೆ ನೀಡಿದ. ಮಹೇಶ ತನ್ನ ಜೇಬಿನಿಂದ ಮಾತ್ರೆಯೊಂದನ್ನು ತೆಗೆದು, ಅದರ ಮೇಲಿನ ಸಿಪ್ಪೆಯನ್ನು ಸುಲಿದು ಎಸೆದು, ಅದನ್ನು ಬಾಯಿಯಲ್ಲಿ ಇಟ್ಟುಕೊಂಡು ಬಾಟಲಿನಿಂದ ನೀರನ್ನು ಕುಡಿದನು.

"ಏಕೆ ಗುರು ? ಈಗ ಮಾತ್ರೆ ನುಂಗ್ತಿದ್ದೀಯಾ ?" ಎಂದ ಶರಣ್. ರೆಡ್ಡಿ ಮಹೇಶನ ಕ್ರಿಯೆಗಳನ್ನು ಗಮನಿಸುತ್ತಿದ್ದರೂ ಏನೂ ಮಾತನಾಡದೆ ಕುಳಿತಿದ್ದ.

"ಯಾಕೋ ಸ್ವಲ್ಪ ಎದೆ ಉರಿ. ಎಡ ತೋಳು ಜುಮುಗುಡ್ತಿದೆ. ಮೈಯೆಲ್ಲಾ ವಡ್ತಾ" ಎಂದ ಮಹೇಶ. ಬಾಟಲನ್ನು ಶರಣ್‌ಗೆ ನೀಡಿ ಮುಂದಿನ ಸೀಟಿನಲ್ಲಿ ಕುಳಿತ.

ರೆಡ್ಡಿ ಸುಮೊ ಸ್ಟಾರ್ಟ್ ಮಾಡಿದ. ಹೊರಗೆ ರಾತ್ರಿಯ ತಂಪು ಕ್ರಮೇಣವಾಗಿ ಏರುತ್ತಿತ್ತು. ಸುಮೋ ವೇಗ ಹೆಚ್ಚಿಸಿಕೊಂಡಂತೆ ಗಾಳಿ ಕಿಟಕಿಗಳಿಂದ ಒಳ ನುಗ್ಗಿ ಹಿತವೆನ್ನಿಸಿತು. ರೆಡ್ಡಿ ತನ್ನ ಮುಂದಿನ ರಸ್ತೆಯನ್ನೇ ನೋಡುತ್ತಾ "ಶರಣ್, ನಿದ್ದೆ ಮಾಡ್ಬೇಡ್ರಿ ಮತ್ತೆ. ರಾತ್ರಿ ಒಂದೇ ಸಾರಿ ಮಲಗೋವ್ರಂತೆ"- ಎಂದು ನಗುತ್ತಾ "ಸಿಸ್ಟರ್, ಈ ಶರಣ್‌ಗೆ ಮೊದಲಿಂದಲೂ ಸ್ವಲ್ಪ ನಿದ್ದೆ ಜಾಸ್ತಿನಾ ?" ಎಂದು ಪ್ರಶ್ನಿಸಿದ.

ಚಂದ್ರಿಕಾ ಸ್ವಲ್ಪ ನಕ್ಕು "ಹಾಗೇನಿಲ್ಲ. ರಾತ್ರಿಯೆಲ್ಲಾ ನಿದ್ದೆಗೆಟ್ಟು ಓದುತ್ತಿದ್ದ. ಹಗಲೆಲ್ಲಾ ಸ್ನೇಹಿತರು ಅದು ಇದು ಅಂತ ತಿರುಗಾಡುತ್ತಿದ್ದ. ಅವನು ಕೆಲಸಕ್ಕೆ ಸೇರಿದ ಮೇಲೇ ಹೀಗೆ. ಬಹುಶಃ ಕೆಲಸದ ಒತ್ತಡ ಇರ್ಬೇಕು." ಎಂದಳು.

ಶರಣ್ ಸೀಟಿನ ಮಧ್ಯೆದಲ್ಲಿ ಕುಳಿತು ಒಮ್ಮೆ ಮೈಮುರಿದು ಆಕಳಿಸಿ "ನನಗೆ ಫೀಲ್ಡ್ ಕೆಲಸದಿಂದಾಗಿ ಹೀಗಾಯ್ತು. ಕಲ್ಲು ಮುಳ್ಳುಗಳ ಹಾದಿಯ ಕೆಲಸ. ಹಳ್ಳ ತಟ್ಟುಗಳಲ್ಲಿ ಪ್ರಯಾಣ. ಅನಂತರ ಲ್ಯಾಬ್‌ನಲ್ಲಿನ ಆಯಾಸ. ಹೀಗಾಗಿ ನಿದ್ದೆ ಸ್ವಲ್ಪ ಜಾಸ್ತಿಯಾಗಿದೆ" ಎಂದು "ಸ್ವಲ್ಪ ಬೇಗ ನಡಿಯಪ್ಪ, ಬೇಗ ಮನೆಗೆ ಹೋಗೋಣ" ಎಂದು ರೆಡ್ಡಿಯನ್ನು ಉದ್ದೇಶಿಸಿ ಹೇಳಿದ.

ರಸ್ತೆಯ ಮೇಲೆ ದೃಷ್ಟಿ ನೆಟ್ಟಿದ್ದ ರೆಡ್ಡಿ ಉತ್ತಮ ಚಾಲಕನೆಂಬುದು ಅವನ ಕೈ ಕಾಲುಗಳ ಕ್ರಿಯೆಯಿಂದಲೇ ಗೊತ್ತಾಗುತ್ತಿತ್ತು. ಭೂಮಿಗೌಡ ಅವನನ್ನೊಮ್ಮೆ ನೋಡಿದ. ಅವನು ಕಾಣುವಷ್ಟು ಸರಳನಲ್ಲ; ಅನುಭವವಿದೆ ಎನ್ನಿಸಿತು. ಈ ಮೂರು ಮಂದಿಯೂ ಒಂದು ವೃತ್ತದಲ್ಲಿ ಬದುಕುತ್ತಿದ್ದಾರೆ. ಅವನಿಗೆ ಇದ್ದಕ್ಕಿದಂತೆ ಒಂದು ಪ್ರಶ್ನೆ ಕೇಳಬೇಕೆನ್ನಿಸಿತು. ಅವನು ಕೇಳಿಯೇ ಬಿಟ್ಟ.

"ಮಿ. ರೆಡ್ಡಿ, ಈಗ ನಿಮ್ಮ ಮೈಸೂರು ಪ್ರವಾಸದ ಉದ್ದೇಶವೇನು ? ಸುಮ್ಮನೆ ಸ್ನೇಹಿತರನ್ನು ಅವರ ಮನೆಗೆ ಬಿಡುವುದೋ ಅಥವಾ ಕೆಲಸದ ಮೇಲೋ ?"

"ಎರಡೂ ಮಿಕ್ಸ್ ಆಗಿವೆ ಪ್ರೊಫೆಸರ್, ನಾನು ಮತ್ತು ಮಹೇಶ್ ಬಹಳ ದಿನಗಳಿಂದ ಮೈಸೂರಿನ ಬಳಿ ಒಂದು ಅತ್ಯಾಧುನಿಕ ರೆಸಾರ್ಟ್ ಮಾಡಬೇಕೆಂದು ಪ್ಲಾನ್ ಮಾಡಿದ್ದೆವು. ಆದರೆ ನಮ್ಮ ಬಿಸಿನೆಸ್‌ನ ಒತ್ತಡದಲ್ಲಿ ಆ ಕಡೆ ಗಮನ ಹರಿಸಲಾಗಿರಲಿಲ್ಲ. ಆದರೆ ಈಗ ಸ್ವಲ್ಪ ರಿಲ್ಯಾಕ್ಸ್ ಆಗಿದ್ದೇವೆ. ಕಾರಣಗಳು ನಿಮಗೆ ತಿಳಿದಿರುತ್ತವೆ; ಹೊಸ ಸರ್ಕಾರ ನಮ್ಮ ಕೈ

ಕಟ್ಟಿ ಹಾಕಿದೆ. ಈಗ ರೆಸಾರ್ಟ್ ಬಗ್ಗೆ ಮತ್ತೆ ಚಿಂತಿಸಿದ್ದೇವೆ. ಬೆಳಗೊಳದ ಬಳಿ ಕಾವೇರಿ ತೀರದಲ್ಲಿ ಹತ್ತು ಎಕರೆ ಜಮೀನು ಕೊಳ್ಳಲು ಮಾತುಕತೆ ನಡೆಸುತ್ತಿದ್ದೇವೆ. ಕಾವೇರಿ ತೀರದಲ್ಲಿ ಬಲಮುರಿ ಆಸುಪಾಸಿನಲ್ಲಿದೆಯಂತೆ. ಬೆಳಿಗ್ಗೆ ನಮ್ಮ ಏಜೆಂಟ್ ಬಂದು ಕರೆದುಕೊಂಡು ಹೋಗಿ ತೋರಿಸುತ್ತಾನೆ"- ಎಂದ ರೆಡ್ಡಿ.

ಮೈಸೂರಿನ ಸುತ್ತ ಮುತ್ತ ಹಲವಾರು ರೆಸಾರ್ಟ್‌ಗಳು ತಲೆಎತ್ತಿದ್ದವು. ಅವುಗಳೆಲ್ಲಾ ಲಾಸ್‌ನಲ್ಲಿ ನಡೆಯುತ್ತಿವೆಯೆಂದು ಭೂಮಿಗೌಡ ಕೇಳಿದ್ದ. "ಅಲ್ಲ ರೆಡ್ಡಿಯವರೆ, ಈಗಾಗಲೇ ಮೈಸೂರಿನ ಸುತ್ತ ಮುತ್ತ ಅನೇಕ ರೆಸಾರ್ಟ್‌ಗಳಿವೆ. ಅವುಗಳಿಗೇ ಗಿರಾಕಿಗಳಿಲ್ಲವೆಂದು ಜನ ಮಾತನ್ನಾಡುತ್ತಾರೆ. ಅದೂ ನೀವೂ ಹೇಳ್ತಿರೋ ಜಾಗ ಮೈಸೂರಿಂದ ಬಹಳ ದೂರವಿದೆ. ಅಂಥ ಏಕಾಂತದಲ್ಲಿ ರೆಸಾರ್ಟ್ ಪ್ರಾರಂಭ ಮಾಡಿದರೆ ಕ್ಲಿಕ್ ಆಗುತ್ತದೆಯೇ ?" ತನ್ನ ಅನುಮಾನವನ್ನು ವ್ಯಕ್ತಪಡಿಸಿದ.

ರೆಡ್ಡಿ ಒಮ್ಮೆ ರಸ್ತೆಯನ್ನು ದಿಟ್ಟಿಸಿ ನೋಡಿದ. ಮತ್ತೆ ರಸ್ತೆಯ ಕಡೆ ದೃಷ್ಟಿಹಾಯಿಸಿ ಭೂಮಿಗೌಡನನ್ನು ನೋಡಿದ. ಮತ್ತೆ ರಸ್ತೆಯ ಕಡೆ ದೃಷ್ಟಿ ಹಾಯಿಸಿ "ಅವರಿಗೆಲ್ಲ ಬಿಸಿನೆಸ್ ಮಾಡೋಕ್ ಬರೋಲ್ಲ ಸಾರ್. ಮೈಸೂರಿನ ಜನರನ್ನು ನಂಬಿ ಬಿಸಿನೆಸ್ ಮಾಡೋಕಾಗುತ್ತ ? ಮೈಸೂರಿನ ಜನಕ್ಕೆ ದುಡ್ಡು ಖರ್ಚು ಮಾಡಿ ಮಜ ಮಾಡುವ ಚೈತನ್ಯವಿಲ್ಲ. ಅವರನ್ನು ಗ್ರಾಹಕರು ಅಂತ ನಂಬಿಕೊಂಡರೆ ದೇವರೇಗತಿ. ನಮ್ಮ ಗ್ರಾಹಕರು ಬೇರೆಯೇ ಇದ್ದಾರೆ. ವಿದೇಶಿ ಪ್ರವಾಸಿಗರು, ಉತ್ತರ ಇಂಡಿಯಾದ, ನೆರೆ ರಾಜ್ಯಗಳ ಶ್ರೀಮಂತರು, ಐಟಿ ಬಿಟಿ ಉದ್ಯಮದಲ್ಲಿರುವ ಹೊಸ ಪೀಳಿಗೆಯ ಹುಡುಗರು- ಇವರು ನಮ್ಮ ಗಿರಾಕಿಗಳಾಗಬೇಕು. ಅವರ ಆಸೆಗಳೇನೆಂದು ತಿಳಿದು ನಾವು ಪೂರೈಸಬೇಕಷ್ಟೆ. ಅದಕ್ಕೆ ಸಾಕಷ್ಟು ಪ್ರಚಾರ, ಬೆಂಗಳೂರಿನಲ್ಲಿ ಬುಕ್ಕಿಂಗ್ ವ್ಯವಸ್ಥೆ, ಅಲ್ಲಿಂದ ಕರೆತಂದು ಬಿಡುವ ವ್ಯವಸ್ಥೆ- ಎಲ್ಲವನ್ನು ಸರಿಯಾಗಿ ಪ್ಲಾನ್ ಮಾಡಬೇಕು. ಪ್ಲಾನ್ ಮಾಡಿ ಮಾಡಿದರೆ ಏಕೆ ಲಾಸ್ ಆಗುತ್ತದೆ ? ನೀವೇ ಹೇಳಿ ಸಾರ್ ?" ಎಂದ.

ಭೂಮಿಗೌಡನಿಗೆ ಮತ್ತೆ ಏನನ್ನು ಹೇಳಲು ತೋಚಲಿಲ್ಲ. "ಇರಬಹುದು ರೆಡ್ಡಿಯವರೆ, ವ್ಯವಹಾರ ನನ್ನ ಕ್ಷೇತ್ರವಲ್ಲ. ನಿಮ್ಮ ಹೊಸ ಸಾಹಸದಲ್ಲಿ ನಿಮಗೆ ಯಶಸ್ಸು ಸಿಗಲಿ" ಎಂದ.

ಅವನು ಮಹೇಶನ ಕಡೆ ನೋಡಿದ. ಅವನು ನನ್ನನ್ನು ಗುರುತು ಹಿಡಿದ ಹಾಗೆ ತೋರಲಿಲ್ಲ. ಅದು ಹೇಗೆ ತಾನೆ ಸಾಧ್ಯ ? ನನಗೂ ಅವನ ಗುರುತು ಅವನ ಕಿವಿಯಿಂದ ದೊರೆಯಿತು. ಜೊತೆಗೆ ಇವನು ಪೀಕೆಯ ತಮ್ಮನೆಂದು ತಿಳಿದ ಮೇಲಂತೂ ಇವರ ಚರಿತ್ರೆ ಕಣ್ಮುಂದೆ ತೆರೆದುಕೊಂಡಿತು. ಮೈಸೂರಿನಲ್ಲಿದ್ದರೂ ಊರು-ತಾಲ್ಲೂಕುಗಳ ಬಗ್ಗೆ ಸದಾ ತೆರೆದ ಮನಸ್ಸಿನವನಾಗಿದ್ದ. ಅಲ್ಲಿನ ರಾಜಕೀಯ-ಗಣಿಗಾರಿಕೆಯ ವ್ಯವಹಾರಗಳು ಅವನಿಗೆ ತಿಳಿದಿದ್ದವು. ತನ್ನ ಊರ ಸುತ್ತ ಮುತ್ತಲಿನ ಗಣಿಗಾರಿಕೆಯ ಸಂಪೂರ್ಣ ಸ್ವಾಮ್ಯ ಪೀಕೆ ಕೈಯಲ್ಲಿದೆಯೆಂದೂ ಅದರ ಉಸ್ತುವಾರಿಯನ್ನು ಅವನ ತಮ್ಮ ನೋಡಿಕೊಳ್ಳುತ್ತಿದ್ದಾನೆಂದೂ

ತಿಳಿದುಕೊಂಡಿದ್ದ. ಅವರು ನಡೆಸುತ್ತಿದ್ದ. ಹೊಸ ಬಗೆಯ ಪಾಳೇಗಾರಿಕೆ ಬಗ್ಗೆ ಸಾಕಷ್ಟು ಕೇಳಿದ್ದ.

ಇಲ್ಲ. ಮಹೇಶ ನನ್ನ ಗುರುತು ಹಿಡಿದಿಲ್ಲ. ತಾನು ನಿನ್ನ ನಾಲ್ಕನೆಯ ತರಗತಿಯ ಸಹಪಾಠಿ ಅಂದು ಹೇಳಿ ಬಿಡಲೆ ? ಭೂಮಿಗೌಡನಿಗೆ ಏಕೋ ಬೇಡವೆನ್ನಿಸಿತು. ಹೀಗೆ ಅಪರಿಚಿತ ಮುಖವಾಡಗಳಲ್ಲೇ ಮೈಸೂರಿನವರೆಗೆ ಪ್ರಯಾಣ ಮಾಡಿ ಮುಟ್ಟಿದರೆ ಸಾಕು. ಪರಿಚಯ ಮಾಡಿಕೊಂಡು ಸ್ನೇಹ ಬೆಳೆಸುವಷ್ಟು ಅಕಾಡೆಮಿಕ್ ವ್ಯಕ್ತಿಗಳೇ ಇವರು ?

ಅವನು ತನ್ನ ತೊಡೆಯ ಮೇಲೆ ತಲೆ ಇಟ್ಟು ನಿದ್ರೆಮಾಡುತ್ತಿದ್ದ ಬೆಳ್ಳಿಯ ಮೈಯನ್ನು ಮೃದುವಾಗಿ ಸವರಿದ.

## ಅಧ್ಯಾಯ : ಹತ್ತು

ರೆಡ್ಡಿ ಸುಮೊವನ್ನು ಡ್ರೈವ್ ಮಾಡುತ್ತಿದ್ದ. ಆದರೆ ಅವನ ಮನಸ್ಸಿನ ತುಂಬಾ ಬರೀ ವ್ಯವಹಾರವೇ ತುಂಬಿಕೊಂಡಿತ್ತು. ಅವನು ಹುಟ್ಟಿದಾಗಿನಿಂದಲೂ ಅವನು ಅದನ್ನೇ ಜೀವಿಸುತ್ತಾ ಬಂದಿದ್ದಾನೆ. ವ್ಯಾಪಾರ-ಲಾಭ-ನಷ್ಟ ಅವನ ಉಸಿರು. 'ವ್ಯಪಾರಂ ದ್ರೋಹಂ ಚಿಂತನಂ' ಎಂಬುದು ಅವನಿಗರಿವಿಲ್ಲದಂತೆ ಅವನ ರಕ್ತದಲ್ಲಿ ಹರಿದಾಡುತ್ತಿತ್ತು. ವ್ಯಾಪಾರದಲ್ಲೂ ನೀತಿನಿಯತ್ತು ಮನುಷ್ಯತ್ವ ಇರುತ್ತದೆ ಎಂದು ಅವನಿಗನ್ನಿಸಿರಲಿಲ್ಲ. ಪ್ರತಿಯೊಂದಕ್ಕೂ ಒಂದು ಬೆಲೆ ಇರುತ್ತದೆ; ಬೆಲೆ ಕೊಟ್ಟು ಅದನ್ನು ಖರೀದಿಸಬಹುದೆಂದು ಅವನು ನಂಬಿದ್ದ. ಅವನ ತಂದೆ ಮುನಿರಾಮಿ ರೆಡ್ಡಿ ಅವನಿಗೆ ವ್ಯವಹಾರ ಮರ್ಮಗಳನ್ನೆಲ್ಲಾ ತಿಳಿಸಿದ್ದಾನೆ. ಆದರೆ ಮುನಿರಾಮಿ ರೆಡ್ಡಿಗಿದ್ದ ಲೋಕಾನುಭವದ ಕೊರತೆ ಇವನಲ್ಲಿತ್ತು. ಮುನಿರಾಮಿರೆಡ್ಡಿ ಬಡತನದಲ್ಲಿ ಬೆಂದಿದ್ದ ; ಅವಮಾನಗೊಂಡಿದ್ದ. ತನ್ನ ಬಾಲ್ಯದಲ್ಲಿ ಜನರ ನೋವುಗಳನ್ನು ಕಂಡಿದ್ದ. ಬಡತನವನ್ನು ಒದ್ದೋಡಿಸುವ ಭೂತ ಸಾಮಾಜಿಕ ನ್ಯಾಯವೂ ಅಲ್ಲ, ಸಮಾನತೆಯೂ ಅಲ್ಲ; ಅದು ಹಣ ಎಂದು ಅವನು ನಂಬಿದ್ದು ಹಣವೊಂದಿದ್ದರೆ ಮಾನ ಮರ್ಯಾದೆ ಅಂತಸ್ತು ಎಲ್ಲ ತನಗೆ ತಾನೆ ಬರುತ್ತವೆ ; ಅಧಿಕಾರ ಗೌರವ ಕೊಡುತ್ತದೆ; ಮಾತು ಕೇಳುತ್ತದೆ ಎಂದು ಅವನು ತೀರ್ಮಾನಿಸಿದ್ದ. ಅದಕ್ಕೆ ಹಣ ಬೇಕು- ಅದನ್ನು ಸಂಪಾದನೆ ಮಾಡಬೇಕು, ಅಷ್ಟೆ.

ರೆಡ್ಡಿಗೆ ತನ್ನ ತಂದೆಯ ನೆನಪಾಯಿತು. ಮುನಿರಾಮಿ ರೆಡ್ಡಿ ಸತ್ತು ಒಂದು ವರ್ಷದ ಮೇಲಾಯಿತು. ಹೊಸ ಸರ್ಕಾರ ಬಂದು ಬಹುಶಃ ಆರೇಳು ತಿಂಗಳಾಗಿತ್ತೋ ಏನೋ. ಬೆಂಗಳೂರಿನ ಹೊರವಲಯದ ಹೊಸಕೋಟೆ ರಸ್ತೆಯಲ್ಲಿ, ರಾತ್ರಿ ಹನ್ನೊಂದು-ಹನ್ನೆರಡು ಗಂಟೆಯ ಸರಿಸುಮಾರು ಹೊತ್ತಿನಲ್ಲಿ ಅವನನ್ನು ಗುಂಡಿನಿಂದ ಹೊಡೆದು ಸಾಯಿಸಿದ್ದರು. ಈ ಕೊಲೆಯುನ್ನು ಗ್ರಾನೈಟ್ ಲಾಬಿ ಮಾಡಿಸಿದ್ದು ಎಂದು ಕೆಲವರು ಅಂದರೆ, ಮತ್ತೆ ಕೆಲವರು ಇದು ರಿಯಲ್ ಎಸ್ಟೇಟ್ ವ್ಯವಹಾರದಲ್ಲಿ ಉಂಟಾದ ಭಿನ್ನಾಭಿಪ್ರಾಯದಿಂದ ಆದ ಕೊಲೆ ಎಂದರು. ನಮ್ಮ ಸುದ್ದಿ ವಾಹಿನಿಗಳು ಬಗೆ ಬಗೆಯ ಸ್ಟೋರಿಗಳನ್ನು ಮಾಡಿ ಜನರ ಕುತೂಹಲವನ್ನು ಹೆಚ್ಚಿಸಿದ್ದರು. ನಮ್ಮ ಯುವ ಜನನಾಯಕ, ಶಿಕ್ಷಣ ತಜ್ಞ, ಗಣಿ ಉದ್ಯಮಿ ಪೀಕೆಯ ಹೆಸರು ಕೊಲೆಯ ವಿಷಯದಲ್ಲಿ ಕಡ್ಡಾಯವಾಗಿ ಪ್ರಸ್ತಾಪವಾಗುತ್ತಿತ್ತು. ರೆಡ್ಡಿಯ ಆಪ್ತ ಸ್ನೇಹಿತನೆಂದು ಕೆಲವರು ವ್ಯಾಖ್ಯಾನಿಸಿದರೆ, ಮತ್ತೆ ಕೆಲವರು ಇವರು ಸ್ನೇಹಿತರು ನಿಜ, ಗ್ರಾನೈಟ್ ವ್ಯವಹಾರದಲ್ಲಿ ಇತ್ತೀಚೆಗೆ ಅವರಲ್ಲಿ ಭಿನ್ನಾಭಿಪ್ರಾಯ ಮೂಡಿತ್ತು. ಬಹುಶಃ ರೆಡ್ಡಿಯ ಕೊಲೆಯಲ್ಲಿ ಪೀಕೆಯ ಕೈವಾಡ ಇದ್ದಿರಬಹುದೆಂದು ಗುಮಾಸಿ ಬರುವ ಹಾಗೆ ಮಾತನಾಡಿದರು. ವಾಹಿನಿಯೊಂದು ಈ ಬಗ್ಗೆ ಪೀಕೆಯ ಅಭಿಪ್ರಾಯವನ್ನು ಕೇಳಿದಾಗ, ಪೀಕೆ ಗಳಗಳನೆ ಅತ್ತೇಬಿಟ್ಟ. "ಅವನನ್ನು ನಾನು ಕೊಲೆ ಮಾಡಿಸುವುದೇ ? 'ಶಾಂತಂ ಪಾಪಂ ಶಾಂತಂ ಪಾಪಂ'. ರೆಡ್ಡಿ ಯಾರೆಂದು ತಿಳಿದಿರಿ. ನಾವು

ಜೊತೆಯಲ್ಲಿ ಹುಟ್ಟಲಿಲ್ಲ, ಅಷ್ಟೆ, ಅವನು ನಮ್ಮ ಅಣ್ಣ ಇದ್ದ ಹಾಗೆ. ನನ್ನನ್ನು ಬೆಂಗಳೂರಿನಲ್ಲಿ ಸಾಕಿದವನೇ ಅವನು. ನನ್ನ ವ್ಯವಹಾರದ ಮಾರ್ಗದರ್ಶಕ, ಅದೇನೋ ಮೆಂಟಾರ್ ಅಂತೀರಲ್ಲ, ಹಾಗೆ. ಇದೆಲ್ಲಾ ನನ್ನನ್ನು ಕಂಡರೆ ಆಗದವರು ಹೇಳುವ ಮಾತು, ಅಪಪ್ರಚಾರ. ಈಗಿನ ಸರ್ಕಾರ ರೆಡ್ಡಿಯಂಥ ಸಮಾಜ ಸೇವಾ ಧುರೀಣರ ಕೊಲೆಗಾರರನ್ನು ಪತ್ತೆ ಹಚ್ಚಿ ಶಿಕ್ಷಿಸಬೇಕು" ಎಂದು ಹೇಳಿದನು.

ಪೀಕೆಯ ಮಾತುಗಳನ್ನು ಜೂನಿಯರ್ ರೆಡ್ಡಿ ಆಲಿಸುತ್ತಿದ್ದ. ಅವನ ಕಣ್ಣಲ್ಲಿ ರೋಷವಿತ್ತು. ತನ್ನ ಎದುರಿಗಿದ್ದ ಟೀಪಾಯಿ ಮೇಲೆ ವಿಸ್ಕಿ ಇತ್ತು. ಅವನು ಎಷ್ಟು ಪೆಗ್ ಹಾಕಿದರೂ ತಂದೆಯನ್ನು ಕೊಂದವರ ಮೇಲಿನ ರೋಷ ಕಡಿಮೆಯಾಗುತ್ತಿರಲಿಲ್ಲ. ಅವನಿಗೆ ಹಲವಾರು ವ್ಯಕ್ತಿಗಳ ಮೇಲೆ ಅನುಮಾನವಿತ್ತು. ಮಾವನ ಕೊಲೆಯಾದ ನಂತರ ರೆಡ್ಡಿಯ ಹೆಂಡತಿ ಅವನನ್ನು ಸ್ವಲ್ಪ ದಿನ ಮನೆ ಯಾಚೆ ಹೋಗಲು ಬಿಟ್ಟಿರಲಿಲ್ಲ. ಅವನ ಆತ್ಮೀಯರು ಅದನ್ನೆ ಹೇಳಿದರು. ಅಪ್ಪನ ಶವಸಂಸ್ಕಾರಕ್ಕೆ ಪೀಕೆ ಬಂದು, ರೆಡ್ಡಿಗೆ ಸಾಂತ್ವನ ಹೇಳಿದ್ದ. ಮಹೇಶ ಪ್ರತಿದಿನ ಬಂದು ಮಾತನಾಡಿ, ಗುಂಡು ಹಾಕಿ ಹೋಗುತ್ತಿದ್ದ.

ಮುನಿರಾಮಿ ರೆಡ್ಡಿಯ ಗ್ರಾನೈಟ್ ವ್ಯವಹಾರಕ್ಕೆ ಬರುವ ಮೊದಲು ಪ್ರಾರಂಭ ಮಾಡಿದ್ದೇ ರಿಯಲ್ ಎಸ್ಟೇಟ್ ವ್ಯವಹಾರ. ಬೆಂಗಳೂರಿನ ಹೊರವಲಯದಲ್ಲಿ ರೈತರಿಂದ ಜಮೀನು ಖರೀದಿಸಿ, ಸೈಟುಗಳನ್ನು ಮಾಡಿ ಮಾರುವುದು ಮುಖ್ಯ ದಂದೆ. ಕೆಲವು ಆಯಕಟ್ಟಿನ ಸ್ಥಳಗಳ ಮೇಲೆ ಮೂರು ನಾಲ್ಕು ಜನರ ಕಣ್ಣು ಸಹಜವಾಗಿಯೇ ಇರುತ್ತಿತ್ತು. ಅಂಥ ಸಂದರ್ಭಗಳಲ್ಲಿ ರೈತರಿಗೆ ಸಹಜವಾಗಿ ಹೆಚ್ಚು ಬೆಲೆ ಸಿಗುತ್ತಿತ್ತು. ಒಬ್ಬರನ್ನು ಏಮಾರಿಸಿ ಮತ್ತೊಬ್ಬರು ಮೇಲುಗೈ ಸಾಧಿಸಲು ಏಜೆಂಟರುಗಳು ಯತ್ನಿಸುತ್ತಿದ್ದರು. ರೆಡ್ಡಿ ಪ್ರಾರಂಭದಲ್ಲಿ ಬರಿ ಸೈಟು ಮಾರುತ್ತಿದ್ದವನು. ನಂತರ ಬಡಾವಣೆಗಳನ್ನು ನಿರ್ಮಾಣ ಮಾಡಿ, ನಾಗರೀಕ ಸೌಲಭ್ಯಗಳನ್ನು ಸೃಷ್ಟಿಸಿ ಹೆಚ್ಚು ಹೆಚ್ಚು ಲಾಭಕ್ಕೆ ಸೈಟುಗಳನ್ನು ವಿಲೇವಾರಿ ಮಾಡುತ್ತಿದ್ದ.

ಈ ಹೊಸ ಲೇಔಟ್‌ಗಳಲ್ಲಿ ದುಭಾರಿ ಬೆಲೆ ತೆತ್ತು ಸೈಟುಕೊಳ್ಳಲು ಸ್ಥಳೀಯರಿಗೆ ಸಾಧ್ಯವಾಗುತ್ತಿರಲಿಲ್ಲ. ಬಹುಪಾಲು ಅವನ ಗ್ರಾಹಕರು ಆಂಧ್ರದವರು, ಮಾರ್ವಾಡಿಗಳು. ಪೀಕೆಯಂಥ ತನ್ನ ರಾಜಕೀಯ ಮಿತ್ರರು ಹೇಳಿದವರಿಗೆ ಅಲ್ಲೊಂದು ಇಲ್ಲೊಂದು ಸೈಟುಗಳನ್ನು ನೀಡುತ್ತಿದ್ದ. ಈ ದಂದೆಯಲ್ಲಿ ಅಪಾರ ಹಣವನ್ನು ಸಂಪಾದನೆ ಮಾಡಿದ. ಅಪಾರ ಶತ್ರುಗಳನ್ನೂ ಸಂಪಾದನೆ ಮಾಡಿದ.

ಈ ದಂದೆಯಲ್ಲಿ ಕ್ರೌರ್ಯಕ್ಕೇನು ಕೊರತೆಯಿರಲಿಲ್ಲ. ಆಗದವರನ್ನು ಹೆದರಿಸುವುದು, ಕೈಕಾಲು ಮುರಿಸುವುದು, ಕಣ್ಣು ತೆಗೆಯುವುದು, ನಾಲಗೆ ಕತ್ತರಿಸುವುದು, ಕೊನೆಗೆ ಎತ್ತಿಸುವುದು- ಎಲ್ಲಾ ನಡೆಯುತ್ತಿತ್ತು. ಇವೆಲ್ಲಾ ಹಂತಗಳು ವ್ಯಕ್ತಿಯ ಅಪರಾಧ(?)ದ ಮೇಲೆ ನಿಂತಿರುತ್ತವೆ. ಎದುರಾಳಿಗಳ ಮೇಲಿನ ಹಲ್ಲೆಗಳನ್ನು 'ಪಾರ್ಟ್ ಆಫ್‌ದ ಗೇಮ್' ಎನ್ನುತ್ತಿದ್ದರೆ, ತಮ್ಮವರ ಮೇಲೆ ನಡೆಯುವ ಹಲ್ಲೆಗಳನ್ನು ಅಪಾರಧಕ್ಕೆ ಶಿಕ್ಷೆ ಎನ್ನುತ್ತಿದ್ದರು. ನಮ್ಮ ಕ್‌ಹರಾಮಿಗಳನ್ನು 'ಎತ್ತುವುದು' ಕಡಿಮೆ ಆದರೆ ಶಿಕ್ಷೆ ಕ್ರೂರವಾಗಿರುತ್ತಿತ್ತು. ಅದು ಶಾಶ್ವತ ಅಂಗ ವೈಕಲ್ಯತೆಯನ್ನುಂಟು ಮಾಡುವುದು.

ತನ್ನ ತಂದೆಯವರನ್ನು ಹೊರಗಿನವರು ಮುಗಿಸಿರಬಹುದು ಎಂದು ರೆಡ್ಡಿಗೆ ಮೊದ ಮೊದಲು ಅನ್ನಿಸುತ್ತಿತ್ತು. ಸುದ್ದಿ ಮಾಧ್ಯಮದವರ ಅನುಮಾನಗಳು, ಕೆಲವು ಆತ್ಮೀಯರು ವ್ಯಕ್ತಪಡಿಸುತ್ತಿದ್ದ ಗುಮಾನಿಗಳು ಒಮ್ಮೊಮ್ಮೆ ನಿಜವಿರಬಹುದೇ ಎಂಬ ಆತಂಕವನ್ನು ಸೃಷ್ಟಿಮಾಡಿತ್ತು.

ಪೀಕೆಯ ಮೇಲೆ ಅನುಮಾನ ಪಡುವುದೇ ಮೊದ ಮೊದಲು ಅವನಿಗೆ ಹಿಂಸೆಯಾಗುತ್ತಿತ್ತು. ಪೀಕೆಯನ್ನು ಅವನು ಅಣ್ಣನೆಂದು ಭಾವಿಸಿದ್ದ. ಪೀಕೆ ತನ್ನನ್ನು ಯಾವಾಗಲು ಮಹೇಶನಿಗಿಂತ ಒಂದು ಕೈ ಹೆಚ್ಚಾಗಿಯೇ ನಡೆಸಿಕೊಳ್ಳುತ್ತಿದ್ದ. ಪೀಕೆಗೆ ತನ್ನ ಅಪ್ಪನನ್ನು ಕಂಡರೆ ಬಲು ಪ್ರೀತಿ. ಯಾವುದೇ ವ್ಯವಹಾರವನ್ನಾಗಲೀ ತನ್ನ ಅಪ್ಪನೊಡನೆ ಚರ್ಚಿಸದೆ ಮುಂದಾಗುತ್ತಿರಲಿಲ್ಲ.

ಮಧ್ಯೆ ಸಣ್ಣ ಪುಟ್ಟ ಭಿನ್ನಾಭಿಪ್ರಾಯಗಳು ಬಂದಿರಬಹುದು. ಇಲ್ಲವೆಂದಲ್ಲ. ವ್ಯವಹಾರ ಎಂದ ಮೇಲೆ ಅವು ಇದ್ದದ್ದೇ. ಆದರೆ ಅವನ್ನು ಅಪ್ಪ ಮತ್ತು ಪೀಕೆ ದೊಡ್ಡದು ಮಾಡುತ್ತಿರಲಿಲ್ಲ. ಚರ್ಚಿಸಿ ಒಂದು ನೆಲೆಗೆ ಬಂದು ಮುಟ್ಟುತ್ತಿದ್ದರು. ಅವರ ಒಡನಾಟಕ್ಕೆ, ಸ್ನೇಹಕ್ಕೆ ಇದರಿಂದೇನೂ ಚ್ಯುತಿ ಬರುತ್ತಿರಲಿಲ್ಲ. ಇವನ್ನೆಲ್ಲಾ ತಾನೇ ಕಣ್ಣಾರೆ ನೋಡಿದ್ದೇನೆ. ಪೀಕೆಯನ್ನು ಅನುಮಾನಿಸುವುದು ಹೇಗೆ ? ರೆಡ್ಡಿ ಒಮ್ಮೊಮ್ಮೆ ಗೊಂದಲದಲ್ಲಿ ಬೀಳುತ್ತಿದ್ದ.

ಒಂದು ದಿನ ರಾತ್ರಿ ನೆಲಮಂಗಲ ಬಳಿ ಇರುವ ರೆಸಾರ್ಟ್ ಒಂದರಲ್ಲಿ ದುಬೈ ಪಾರ್ಟಿಯೊಂದಿಗೆ ಗುಂಡು ಹಾಕುತ್ತಾ ವ್ಯವಹಾರ ಕುದುರಿಸುತ್ತಾ ಇದ್ದ. ಆಗ ವೇಯ್‌ಟರ್ ಒಳಬಂದು ಬಗ್ಗಿ ಕಿವಿಯಲ್ಲಿ "ಅಣ್ಣ, ನಿಮ್ಮನ್ನು ದಿನಕರ್ ನೋಡಬೇಕಂತೆ. ಅಲ್ಲಿ ಆ ಮರದ ಕೆಳಗಿನ ಟೇಬಲ್‌ನಲ್ಲಿ ಒಬ್ಬರೇ ಕೂತಿದ್ದಾರೆ" ಎಂದು ಮರದ ಕಡೆ ಕೈ ತೋರಿ ಹೋದ. ದಿನಕರನ್ ಯಾರೆಂದು ಅವನಿಗೆ ಗೊತ್ತು. ಅವನೊಡನೆ ಒಂದೆರಡು ಬಾರಿ ಕಲ್ಲಿನ ವ್ಯವಹಾರ ಮಾಡಿದ್ದಾನೆ. ಆದರೆ ಅವನ ಜೊತೆ ವ್ಯವಹಾರ ನಡೆಸುವುದು ಕಷ್ಟವೆಂದು ತೋರಿದ್ದರಿಂದ ಸಂಬಂಧ ಕಡಿದುಕೊಂಡಿದ್ದ. ದಿನಕರನ್‌ಮುಖ್ಯವಾಗಿ ಗ್ರಾನೈಟ್ ವ್ಯವಹಾರಸ್ಥ. ಬಿಜಾಪುರ, ಬಳ್ಳಾರಿ, ಚಾಮರಾಜನಗರಗಳ ಕಡೆಯಿಂದ ಕಲ್ಲನ್ನು ತರಿಸುತ್ತಿದ್ದ. ಬೆಂಗಳೂರು, ಕೋಲಾರದ ಕಡೆ ಅವನು ತಲೆ ಹಾಕಿರಲಿಲ್ಲ. ಅವನಿಗೂ ರಾಜಕೀಯದಲ್ಲಿ ಸಂಪರ್ಕವಿತ್ತು. ಹೊಸ ಸರ್ಕಾರದಲ್ಲಿ ಅವನ ಕೈ ನಡೆಯುತ್ತಿದೆ.

ಈಗ ದಿನಕರನ್ ನನ್ನೊಡನೆ ಏನು ಮಾತಾಡಬೇಕು ?. ಒಬ್ಬನೇ ಹೇಗೆ ಹೋಗುವುದು ? ರೆಸಾರ್ಟ್‌ನ ಸುತ್ತಲೂ ಕಣ್ಣಾಡಿಸಿದ. ಅಂಥ ಅನುಮಾನಾಸ್ಪದ ಚಲನವಲನಗಳು ಗೋಚರಿಸಲಿಲ್ಲ. ತನ್ನೊಡನಿದ್ದ ಪಾರ್ಟಿಗೆ "ಸಾರಿ, ಒಂದೈದು ನಿಮಿಷ" ಎಂದು ದಿನಕರನ್ ಬಳಿಗೆ ಬಂದ. ದಿನಕರನ್ ರೆಡ್ಡಿಯನ್ನು ತನ್ನೆದುರಿನ ಚೇರಿನಲ್ಲಿ ಕುಳಿತುಕೊಳ್ಳುವಂತೆ ಸೂಚಿಸಿದ. ದಿನಕರನ್ ತೆಳುವಾದ ನೀಟಾದ ಆಳು. ಬುಲ್ಗೇರಿಯನ್ ಗಡ್ಡ ಬಿಟ್ಟಿದ್ದ. ಮುಕ್ಕಾಲುವಾಸಿ ಬಾಲ್ಡಿಯಾಗಿದ್ದ. ರಾತ್ರಿಯ ದೀಪದ ಬೆಳಕು ಅವನ ತಲೆಯಲ್ಲಿ ಪ್ರತಿಫಲಿಸುತ್ತಿತ್ತು. ದಿನಕರ ರೆಡ್ಡಿಗಿಂತ ಹತ್ತು ವರ್ಷಕ್ಕೆ ದೊಡ್ಡವನು. ಆವನಿಗೆ ಹೋಲಿಸಿದರೆ ಬಲಾಢ್ಯ ಆಳು.

ರೆಡ್ಡಿ ಯಾವ ಪೂರ್ವ ಪೀಠಿಕೆಯನ್ನು ಹಾಕಲಿಲ್ಲ, ನೇರವಾಗಿ ದಿನಕರನ ಮುಖವನ್ನು ದಿಟ್ಟಿಸಿ "ನೀವು ನನ್ನನ್ನು ನೋಡಬೇಕು ಅಂದ್ರಂತೆ ?" ಎಂದ.

ಅವನು ವಿಸ್ಕಿಯನ್ನು ಗುಟುಕರಿಸಿ ಗ್ಲಾಸನ್ನು ಟೇಬಲ್ ಮೇಲಿಟ್ಟು ಉಪ್ಪು ಮೆಣಸು ಬೆರೆಸಿದ ಕರಿದ ಗೋಡಂಬಿಯನ್ನು ಬಾಯಿಗಿಟ್ಟು ಕೊಂಡು ಜಗಿದ. ಮತ್ತೆ ರೆಡ್ಡಿ "ಒಬ್ಬರೇ ಬಂದಿದ್ದೀರಾ ?" ಎಂದು ಪ್ರಶ್ನಿಸಿದ.

ದಿನಕರ್ ತನ್ನ ಗ್ಲಾಸಿನ ಕಡೆ ಕೈ ತೋರಿಸಿ "ಒಂದು ಪೆಗ್ ಹೇಳಲೆ ?" ಎಂದ.

"ಇಲ್ಲ, ಬೇಡ. ಪಾರ್ಟಿ ಜೊತೆಯಲ್ಲಿದ್ದೇನೆ. ಏನು ವಿಷಯ ಹೇಳಿ ?" ರೆಡ್ಡಿ ಅವಸರ ಮಾಡಿದ.

"ಮೊದಲು ನಿನ್ನ ಮೊದಲು ಪ್ರಶ್ನೆಗೆ ಉತ್ತರ : ಇಂಥ ಸ್ಥಳಗಳಿಗೆ ಮೊದಲೆಲ್ಲಾ ಒಬ್ಬನೇ ಬರುತ್ತಿದ್ದೆ. ಈಗ ಇಲ್ಲ. ನಿಮ್ಮ ತಂದೆ ಕೊಲೆ ಆದ ಮೇಲೆ ರಿಸ್ಕ್ ತೆಗೆದುಕೊಳ್ಳಲು ಮನಸ್ಸು ಒಪ್ಪುತ್ತಿಲ್ಲ. ನಮ್ಮ ಹುಡುಗರು ಇದ್ದಾರೆ" ಎಂದು ಹತ್ತು ಅಡಿ ದೂರದ ಟೇಬಲ್ಲಿನ ಸುತ್ತ ಕುಳಿತ ನಾಲ್ವರತ್ತ ದೃಷ್ಟಿ ಬೀರಿದ.

ರೆಡ್ಡಿ ಅವರನ್ನು ನೋಡಿದ. ಹೌದು, ಆಸಾಮಿಗಳನ್ನು ನೋಡಿದರೆ ಗೊತ್ತಾಗುತ್ತದೆ. ನಾನು ಗಮನಿಸಲೇ ಇಲ್ಲ ಎಂದು ಕೊಂಡ.

"ಇನ್ನು ನಿನ್ನ ಎರಡನೆಯ ಪ್ರಶ್ನೆ : ನಿನ್ನನ್ನು ಇಲ್ಲಿಗೆ ಬರಹೇಳಿದ ವಿಷಯ. ಅದು ಕೇವಲ ಕರ್ಟಸಿ ಕಾಲ್. ಸ್ವಲ್ಪ ರಿಲ್ಯಾಕ್ಸ್ ಆಗೋಣ ಅಂತ ಇವೊತ್ತು ರಾತ್ರಿ ಇಲ್ಲೇ ಇರ್ತೀನಿ. ಕೆಲಸದ ಒತ್ತಡ, ಹೆಂಡತಿ ಮಕ್ಕಳು, ಫ್ರೆಂಡ್ಸ್, ಗಿರಾಕಿಗಳು - ಎಲ್ಲರಿಂದ ದೂರ ಇರ್ಬೇಕು ಅಂತ ಆಗಾಗ್ಗೆ ನನಗೆ ಅನ್ನಿಸುತ್ತದೆ. ಆಗ ಇಂಥ ಸ್ಥಳಗಳಲ್ಲಿ ಬಂದು ಒಂದು ರಾತ್ರಿ ಗುಂಡು ಹಾಕಿ, ಒಬ್ಬನೇ, ತಿಳ್ಕೋ, ಯಾವ 'ಪೀಸು' ಕೂಡ ಜೋತೇಲಿರೋಲ್ಲ, ರಿಲ್ಯಾಕ್ಸ್ ಮಾಡ್ಕೋತ್ತೀನಿ. ಒಮ್ಮೆ ಬಂದ ಸ್ಥಳಕ್ಕೆ ಮತ್ತೊಂದು ಸಾರಿ ಬರೋಲ್ಲ. ನಮ್ಮ ಜಾಡು ಜನಕ್ಕೆ ಗೊತ್ತಾಗಬಾರದಲ್ಲ."

ದಿನಕರನ್ ಗೋಡಂಬಿ ಬೀಜಗಳಿದ್ದ ತಟ್ಟೆಯನ್ನು ರೆಡ್ಡಿಯತ್ತ ತಳ್ಳಿ "ಕಂಪನಿ ಕೊಡೋಲ್ಲಾಂತಿ, ಒಂದೆರಡು ಗೋಡಂಬಿನಾದರೂ ತಿನ್ನು" ಎಂದು ಬಲವಂತಿಸಿದ. ರೆಡ್ಡಿ ಒಂದು ಗೋಡಂಬಿಯನ್ನೆತ್ತಿ, ಬಾಯಿಗಿಟ್ಟ.

"ಇಲ್ಲಿ ಬಂದಾಗ ನೀನ್ ಯಾವುದೋ ಗಲ್ಫ್ ಪಾರ್ಟಿ ಜೊತೆ ಬಂದಿರುವ ವಿಷಯವನ್ನು ನಮ್ಮ ಹುಡುಗರು ಕಿವಿಗೆ ಹಾಕಿದರು. ನಿಮ್ಮ ಅಪ್ಪ ಸತ್ತಾಗ ನಾನು ಬಾಡಿ ನೋಡಲೂ ಬರಲಿಲ್ಲ. ಅನಂತರ ನಿನ್ನನ್ನು ನೋಡಿರಲಿಲ್ಲ. ಸನ್ನಿವೇಶ ಹಂಗಿತ್ತು. ನಾನು ಪೀಕೆಯ ವಿರೋಧಿಗಳ ಜೊತೆ ಗುರುತಿಸಿಕೊಂಡಿದ್ದೆ. ಮೊದಲೆಲ್ಲಾ ಪೀಕೆ ಅಧಿಕಾರ ನಡೀತಿದ್ದಾಗ ನಮ್ಮನ್ನು ಬೆಳೆಯಲು ಬಿಡಲೇ ಇಲ್ಲ. ಈ ಬಿಸಿನೆಸ್ ಹೆಚ್ಚು ಕಡಿಮೆ ನಿಮ್ಮಪ್ಪನ ಕೈಯಲ್ಲೇ ಇತ್ತು. ಈಗ ನೋಡು ನಮ್ಮವರ ಸರ್ಕಾರ ಬಂದಿದೆ. ಆದರೂ ಬಿಸಿನೆಸ್ ಇಲ್ಲವೇ ಇಲ್ಲ. ಬರೀ ಮನೆ ಕಟ್ಟುವರಿಗೆ ಒಂದು ಹತ್ತೋ ಇಪ್ಪತ್ತೋ ಚದುರಕ್ಕೆ ಗ್ರಾನೈಟ್ ಒದಗಿಸುವುದು. "ಸ್ವಲ್ಪ ಹೊತ್ತು ಮೌನವಹಿಸಿದ. ಮಾತು ಮುಂದುವರಿಸಿ "ನಿಮ್ಮ ಸ್ಥಿತಿಯೂ ಹೀಗೇ ಇರಬೇಕು. ಜಲ್ಲಿ ಮರೆಯಲ್ಲಿ ಅಲ್ಲೊಂದು ಇಲ್ಲೊಂದು ಲಾಗ್ ತರ್ತೀರಾ ಅಂತ ನಮಗೆಲ್ಲಾ ಗೊತ್ತಿದೆ" ಸ್ವಲ್ಪ ಬಗ್ಗಿ ನಗುತ್ತಾ ರೆಡ್ಡಿಯ ಮುಖದ ಬಳಿ ಪಿಸುಗುಟ್ಟಿದ.

"ತಪ್ಪಿಲ್ಲ ಬಿಡು. ಬಿಸಿನೆಸ್‌ನಲ್ಲಿ ಇವೆಲ್ಲ ಇದ್ದದ್ದೇ. ಮಾಡ್ಲಿಲ್ಲ ಅಂದ್ರೆ ಬದುಕೋಕೆ ಆಗೋಲ್ಲ "- ಎಂದ.

ದಿನಕರನ್ ಮುಖ ಗಂಭೀರವಾಯಿತು. ರೆಡ್ಡಿಯನ್ನು ನೇರವಾಗಿ ದೃಷ್ಟಿಸಿ "ನೋಡು, ಈ ರಾಜಕೀಯದವರನ್ನು ನಂಬಬಾರ್ದು. ನಾನು ಸೇಲಂನಿದ ಬರಿಗೈಲಿ ಬಂದು ವ್ಯಾಪಾರ ಸುರುಮಾಡ್ದೆ. ನಿಮ್ಮಪ್ಪ ನನಗಿಂತ ವಯಸ್ಸಿನಲ್ಲಿ ದೊಡ್ಡೋರು, ಮದನ ಪಲ್ಲಿಯಿಂದ ಬಂದು ಕೂಲಿ ನಾಲಿ ಮಾಡಿ ಮೇಲ್ ಬಂದೋರು. ಬಡತನದ ನೋವು ನಿನಗೆ ಅರ್ಥ ಆಗೋಲ್ಲ. ನಿಮ್ಮಪ್ಪ ನನ್ನಂಥೋರಿಗೆ ಅದು ಕೊಟ್ಟಿರುವ ನೋವು, ಅವಮಾನ ಎಂಥದು ಅಂತ ಗೊತ್ತು. ನಾವು ಪಟ್ಟಿರುವ ನೋವು ಸಂಕಟ ನಮ್ಮ ಮಕ್ಕಳ ಹತ್ತಿರ ಸುಳಿಯಬಾರದು ಎಂದು ನಮ್ಮ ಮಕ್ಕಳನ್ನು ಸುಖವಾಗಿ ಬೆಳೆಸಿದ್ದೇವೆ". ದಿನಕರನ್ ಮತ್ತೆ ಏನನ್ನೋ ಯೋಚಿಸುವವನಂತೆ ಮೌನಧರಿಸಿದ. ಮಾತನ್ನು ಮತ್ತೆ ಆರಂಭಿಸಿ "ನಾನು ಏನು ಹೇಳ್ತಿದ್ದೆ ? ರಾಜಕೀಯಯದವರನ್ನು ನಂಬಬಾರ್ದು ಅಂತ. ಅವರಿಗೆ ನಿಷ್ಠೆ ಇಲ್ಲ. ಅವರಲ್ಲಿ ಸ್ನೇಹಕ್ಕೆ ಬೆಲೆಯಿಲ್ಲ. ಅವರು ಸದಾ ಅಧಿಕಾರದಲ್ಲಿರಬೇಕು. ಅದಕ್ಕೆ ಹಣಬೇಕು. ಕಷ್ಟಪಟ್ಟು ರಿಸ್ಕ್ ತೆಗೆದುಕೊಂಡು ದುಡಿದ ಹಣ ಅವರಿಗೆ ನೀಡಬೇಕು. ಅವರ ಹಣ, ಅಧಿಕಾರ ಆಸೆಯ ಪೀಪಾಯಿ ಎಂದೂ ತುಂಬುವುದೇ ಇಲ್ಲ. ನಮ್ಮಂಥವರು ನಿರಂತರ ಸುರಿಯುತ್ತಲೇ ಇರಬೇಕು. ಅವರು ರಾಜಕಾರಣಿಗಳು ಬೇರೆ ಬೇರೆ ಪಕ್ಷದಲ್ಲಿದ್ದರೂ ಸಾರ್ವಜನಿಕವಾಗಿ ಕಿತ್ತಾಡುತ್ತಿದ್ದರೂ ಅಂತರಂಗದಲ್ಲಿ ಅವರೆಲ್ಲಾ ಒಂದೇ. ಅವರಿಗೆ ತೊಂದರೆಯಾಗುತ್ತದೆಯೆಂದು ಕುಂಡುಬಂದರೆ ನಮ್ಮನ್ನೆ ಕಾನೂನಿನ ಬಂಧನದಲ್ಲಿ ಸಿಲುಕಿಸುತ್ತಾರೆ. ಪ್ರಯೋಜನ ವಿಲ್ಲದವರಂತೆ ಕಂಡು ಬಂದರೆ ತಿಕ ತೊಳೆದ ನೀರಿನಂತೆ ಕಾಣುತ್ತಾರೆ"- ಎಂದು ನಿಟ್ಟುಸಿರು ಬಿಟ್ಟ. ಮತ್ತೊಂದು ಗುಟುಕು ವಿಸ್ಕಿಯನ್ನು ಗುಟುಕಿಸಿ, ನಿಧಾನವಾಗಿ ಗೋಡಂಬಿಯನ್ನು ಬಾಯಿಗಿಟ್ಟು ಕೊಂಡನು.

"ನಾವು ವ್ಯವಹಾರಸ್ಥರು. ಒಬ್ಬರ ದಂಧೆಗೆ ಇನ್ನೊಬ್ಬರು ಕೈ ಹಾಕ್ಬಾರ್ದು ಅನ್ನೋ ತಿಳಿವಳಿಕೆ ಇದೆ. ನನ್ನೇ ನೋಡು, ನಿಮ್ಮ ಏರಿಯಾಕ್ಕೆ ತಲೆ ಹಾಕಲಿಲ್ಲ. ಅಲ್ಲ ನೀವು ಮಾಡ್ತಿದ್ದೀರಿ. ನಾನ್ಯಾಕ್ ಅಲ್ಲಿ ಬರ್‍ಲಿ ? ನನಗೆ ಬೇರೆ ಏರಿಯಾ ಇದೆ. ಅಲ್ಲಿ ವ್ಯವಹಾರ ಮಾಡೋಣ ಅನ್ನೋ ನೀತಿ. ಆದರೆ ರಾಜಕಾರಣಿಗಳಿಗೆ ಆ ನಿಯತ್ತಿಲ್ಲ. ಎಲ್ಲರ ಬೆವರನ್ನು ತಮ್ಮ ಸ್ವತ್ತೆಂದು ಭಾವಿಸುತ್ತಾರೆ"- ದಿನಕರನ್ ಮತ್ತೆ ರೆಡ್ಡಿಯನ್ನು ನೋಡಿ "ನಿನಗೆ ಬೋರ್ ಹೊಡೆಸುತ್ತಿದ್ದೇನೆಂದು ತೋರುತ್ತದೆ, ಅಲ್ಲವೆ ?" ಎಂದನು.

ದಿನಕರನ್ ಸತ್ಯವನ್ನೇ ಮಾತನಾಡುತ್ತಿದ್ದಾನೆ ಅನ್ನಿಸಿತು. "ಇಲ್ಲ ದಿನಕರನ್ ಅವರೆ, ನಿಮ್ಮ ಅನುಭವ ದೊಡ್ಡದು. ಅದನ್ನು ಹೇಳ್ತಿದ್ದೀರಿ. ಮಾತನಾಡಿ" ಎಂದ.

ದಿನಕರನ್ ಗ್ಲಾಸಿನಲ್ಲಿರುವ ವಿಸ್ಕಿಗೆ ಮತ್ತೊಂದು ಐಸ್ ತುಂಡನ್ನು ಸೇರಿಸಿ ಅದನ್ನು ಗ್ಲಾಸಿನಲ್ಲಿ ವೃತ್ತಾಕಾರವಾಗಿ ಆಡಿಸುತ್ತಾ "ಈಗ ಮುಖ್ಯ ವಿಷಯಕ್ಕೆ ಬರ್‍ತೀನಿ. ನಿಮ್ಮ ತಂದೆಯನ್ನು ಕೊಂದದ್ದು ಜನಾರ್ಧನ ನಾಯ್ಡು ಗ್ಯಾಂಗ್" ಎಂದನು.

ರೆಡ್ಡಿಗೆ ಇದ್ದಕ್ಕಿದಂತೆ ಕೋಪ, ರೋಷ ನಾಭಿಮೂಲದಿಂದ ಬುಸುಗುಡುತ್ತಾ ಮೇಲೆದ್ದಿತು. ಅದು ಅವನ ಮುಖದಲ್ಲಿ ಕಣ್ಣುಗಳಲ್ಲಿ ಕಾಣಿಸಿತು. ಈ ಮೊದಲು ಇದು ಏಕೆ ನನಗೆ

ಹೊಳೆಯಲಿಲ್ಲ. ನಾಯ್ಡು ಬಗ್ಗೆ ತನಗೆ ಅನುಮಾನವೇ ಬರಲಿಲ್ಲವಲ್ಲ ? ರೆಡ್ಡಿ ದಿನಕರನ್‌ನನ್ನು ಪ್ರಶ್ನಿಸಿದ : "ಇದು ನಿಜವೆ ? ಏನು ಆಧಾರ ?"

"ರೆಡ್ಡಿ ಮೊದಲಿಗೆ ನೀನು ನಾರ್ಮಲ್ ಆಗಿ ಬಿಹೇವ್ ಮಾಡು. ಕೋಪವನ್ನು ತೋರಿಸಬಾರ್ದು. ಎದೆಯಲ್ಲಿ ಬರುವುದೆಲ್ಲಾ ಮುಖದಲ್ಲಿ ತೋರಬಾರ್ದು. ಮುಖದಲ್ಲಿ ಕಂಡದ್ದೆಲ್ಲಾ ಮಾತಲ್ಲಿ ಆಡಬಾರ್ದು. ಇದು ಬಿಸಿನೆಸ್ ಮ್ಯಾನ್‌ಗೆ ಇರಬೇಕಾದ ಮುಖ್ಯ ಲಕ್ಷಣ" ಎಂದು ಕೈಯನ್ನು ಮೇಲೆತ್ತಿ ಬೆರಳುಗಳನ್ನಾಡಿಸಿದ. ಎಲ್ಲಿದ್ದನೋ ಗೊತ್ತಿಲ್ಲ. ಶಿಷ್ಯನೊಬ್ಬ ಪ್ರತ್ಯಕ್ಷನಾಗಿ "ಅಣ್ಣಾ" ಎಂದ. "ನನಗಿನ್ನೊಂದು ಲಾರ್ಜ್ ಹೇಳು. ಹ್ಞಾ, ರೆಡ್ಡಿ ಅವರಿಗೊಂದು ಲಾರ್ಜ್. ಮತ್ತೊಂದು ಪ್ಲೇಟ್ ಗೋಡಂಬಿ" ಎಂದ. ಡ್ರಿಂಕ್ಸ್ ಅನ್ನು ಬೇಡವೆಂದು ರೆಡ್ಡಿ ಈ ಸಾರಿ ಹೇಳಲಿಲ್ಲ. ದಿನಕರನ್ ಹೇಳಿದ ಮಾತುಗಳ ತೀಕ್ಷ್ಣತೆಯನ್ನು ಜೀರ್ಣಿಸಿಕೊಳ್ಳಲು ಸ್ಟ್ರಾಂಗ್ ಆದದ್ದು ಬೇಕಿತ್ತು.

'ನಿಮ್ಮ ತಂದೆಯನ್ನು ಕೊಂದಿದ್ದು ನಾಯ್ಡು ಗ್ಯಾಂಗ್ ಅನ್ನೋದು ನಿಜ. ಅದಕ್ಕೆ ಆಧಾರ ಕೊಡೋಕಾಗಲ್ಲ. ಸುದ್ದಿ ಹರಡುತ್ತೆ. ಸುದ್ದಿಯ ಮೂಲಕ ಶೋಧಿಸಬೇಕು, ಅಷ್ಟೆ. ಆ ಸುದ್ದಿಯನ್ನು ನಮ್ಮ ವಿವೇಚನೆಯ ಮೂಲಕ ಅಳೆಯಬೇಕು. ಅದರಲ್ಲಿ ಸುಳ್ಳಿನ ಭಾಗವೆಷ್ಟು? ಸತ್ಯದ ಭಾಗವೆಷ್ಟು? ಪತ್ತೆ ಹಚ್ಚುವ ಕೆಲಸವನ್ನು ನಾವೇ ಮಾಡಬೇಕು. ಅದೇನೋ ಜಡ್ಜ್‌ಮೆಂಟು ಅಂತಾರಲ್ಲ, ಅದು ಮುಖ್ಯವಾಗಿರಬೇಕು". ದಿನಕರನ್ ಮಾತು ನಿಲ್ಲಿಸಿದ. ವೆಯ್‌ಟರ್ ಟ್ರೇನಲ್ಲಿ ಡ್ರಿಂಕ್ಸ್ ಮತ್ತು ಗೋಡಂಬಿ ತಂದು ಟೇಬಲ್ಲಿನ ಮೇಲೆ ಇಟ್ಟ. ಖಾಲಿಯಾಗಿದ್ದ ಲೋಟ ಮತ್ತು ಪ್ಲೇಟ್‌ಗಳನ್ನು ತೆಗೆದುಕೊಂಡು ಹೊರಟ.

"ನೋಡು ರೆಡ್ಡಿ, ನಿನಗೆ ಆಶ್ಚರ್ಯವಾಗಬಹುದು. ನಾಯ್ಡು ಬಗ್ಗೆ ನಾನು ಹೇಳ್ತಿರೋದ್ರ ಬಗ್ಗೆ. ಜೊತೆಗೆ ಅವನು ನಮ್ಮ ಗುಂಪು. ಅಂದ್ರೆ ಈಗ ಅಧಿಕಾರ ನಡೆಸ್ತಿರೋರ ಗುಂಪು. ರಾಜಕಾರಣಿಗಳ ಬೆಂಬಲ ಚೆನ್ನಾಗಿಯೇ ಇದೆ. ಅವನಿಗೆ ನನ್ನ ಕಂಡ್ರೆ ಭಯ, ಗೌರವ ಎಲ್ಲಾ ಇದೆ. ಆದ್ರೂ ಹೇಳ್ತಾ ಇದ್ದೀನಿ. ಏಕೆ ಗೊತ್ತೆ ? ನನಗೆ ನಿಮ್ಮ ತಂದೆ ಮೇಲಿರುವ ಗೌರವ. ಅವರು ನನಗೆ ಅಣ್ಣನ ತರಹ ಎಂದೆ. ಅಣ್ಣಾ ಅಲ್ಲ, ತಂದೆ ಎಂದರೂ ತಪ್ಪಿಲ್ಲ. ಸುಮಾರು ಇಪ್ಪತ್ತುವರ್ಷಗಳ ಹಿಂದಿನ ಮಾತು. ಅವರು ನನ್ನ ಜೀವನದಲ್ಲಿ ಮಾಡಿದ ಸಾಹಾಯದಿಂದ ನಾನು ಮನುಷ್ಯನಾಗಿದ್ದೇನೆ. ಅವರ ಋಣ ತೀರಿಸಲು ಸಾಧ್ಯವಿಲ್ಲ" ದಿನಕರನ್ ಯಾವುದೋ ಲೋಕದಲ್ಲಿ ಮಾತನಾಡುತ್ತಿರುವವನಂತೆ ಮಾತನಾಡುತ್ತಿದ್ದ.

ರೆಡ್ಡಿಗೆ ಕುತೂಹಲವಾಯಿತು. ಒಂದೇ ದಂದೆಯಲ್ಲಿದ್ದರೂ ದ್ವೇಷದ ಲವಲೇಶವೂ ಇವರಲ್ಲಿರಲಿಲ್ಲವೆ ? ಸಂಬಂಧ ಜಟಿಲವಾದುದು ಎಂದೆನ್ನಿಸಿತು.

"ಇಪ್ಪತ್ತು ವರ್ಷಗಳ ಹಿಂದಿನ ಮಾತು. ನಾನು ಸೇಲಂನಿಂದ ತಪ್ಪಸಿಕೊಂಡು ಬೆಂಗಳೂರಿಗೆ ಓಡಿ ಬಂದಿದ್ದೆ. ಬೆಂಗಳೂರು ಸೇರಿ ಐದಾರು ವರ್ಷವಾಗಿತ್ತು. ಶಿವಾಜಿನಗರದ ಗ್ಯಾರೇಜಿನಲ್ಲಿ ನನ್ನ ಕೆಲಸ. ಆದರೆ ರಾತ್ರಿಯ ಹೊತ್ತು ನನ್ನ ಹಿಂದಿನ ಕಸುಬು ಮುಂದುವರಿಸುತ್ತಿದ್ದೆ. ಅದರಲ್ಲಿ ಒಳ್ಳೆಯ ಲಾಭವಿತ್ತು. ಕಂಟೋನ್ಮೆಂಟ್ ಸುತ್ತ ಮುತ್ತ ಕಾರುಗಳ ಪಾರ್ಟ್ಸ್‌ಗಳನ್ನು ಕದ್ದು ಮಾರುವುದು. ಎಂತಹ ಬೀಗವನ್ನಾದರೂ ಚಿಟಿಕಿ ಹೊಡೆಯುವಷ್ಟರಲ್ಲಿ ತೆಗೆಯುತ್ತಿದ್ದೆ. ಕದ್ದ

ಪಾರ್ಟ್ಸ್‌ಗಳನ್ನು ಗುಜರಿಗೆ ಮಾರುವುದು. ಆ ಕಾಲಕ್ಕೆ ಅದು ಒಳ್ಳೆಯ ಹಣವೆ! ಆದರೆ ಕಳ್ಳತನ ಶಾಶ್ವತವಲ್ಲ. ಪೋಲೀಸರಿಗೆ ಸಿಕ್ಕಿ ಬಿದ್ದೆ. ಕೋರ್ಟಿಗೆ ಹಾಜರ್ ಪಡಿಸಿದರು. ನನ್ನ ಹಿನ್ನಲೆ ತಿಳಿದ ಜಡ್ಜ್ ಐದು ತಿಂಗಳ ಸಜೆ ಅಥವಾ ಎರಡು ಸಾವಿರ ರೂಪಾಯಿ ದಂಡ ಎಂದು ವಿಧಿಸಿದರು. ದಂಡ ಕಟ್ಟಲು ನನ್ನಲ್ಲಿ ದುಡ್ಡೆಲ್ಲಿತ್ತು ? ಸರಿ, ಜೈಲಿಗೆ ಹೋಗಲು ಸಿದ್ಧನಾಗಿದ್ದೆ. ಅಷ್ಟರಲ್ಲಿ ಅಲ್ಲಿ ನಿಮ್ಮಪ್ಪ ದೇವರಂತೆ ಕಣ್ಣಿಗೆ ಬಿದ್ದರು. ನಮ್ಮ ಗ್ಯಾರೇಜಿಗೆ ತಮ್ಮ ಸ್ಕೂಟರಿನ ರಿಪೇರಿಗೆ ಬಂದು ಹೋಗುತ್ತಿದ್ದರು. ಅಷ್ಟೇ ಪರಿಚಯ. ನಾನು ಕಾಲು ಹಿಡಿದು ಸಹಾಯ ಮಾಡಿಕೊಡುವಂತೆ ಬೇಡಿಕೊಂಡೆ. ಅವರಿಗೇನನ್ನಿಸಿತೋ ಏನೋ. ತಾವೇ ಎರಡು ಸಾವಿರ ರೂಪಾಯಿಗಳನ್ನು ಜೇಬಿನಿಂದ ತೆಗೆದು ಕೋರ್ಟಿನ ಕಛೇರಿಗೆ ಹೋಗಿ ದಂಡ ಕಟ್ಟಿ ಬಂದರು. ನನ್ನ ಹೆಗಲ ಮೇಲೆ ಕೈಇಟ್ಟು "ನಾಳೆ ನೀನು ಬಂದು ನನ್ನನ್ನು ನೋಡು" ಎಂದರು. ದಿನಕರನ್ ಭಾವಪರವಶನಾದಂತೆ ತೋರಿತು.

"ನಾಳೆ ಅವರನ್ನು ನೋಡಲು ಹೋದೆ. ತಿಂಡಿ ತರಿಸಿಕೊಟ್ಟರು. 'ನೋಡಯ್ಯ ದಿನಕರನ್, ಎಂದೂ ದುಡಿದು ತಿನ್ನಬೇಕು. ಕಳ್ಳತನ ಮಾಡಬಾರದು. ಬೆವರು ಸುರಿಸಿ ಗಳಿಸಿದ್ದೇ ಅನೇಕ ಸಾರಿ ಕೈಮ್ಮೆ ಹತ್ತೋಲ್ಲ. ಇನ್ನು ಕಳ್ಳತನದ್ದು? ನೀನು ಚುರುಕಾಗಿರುವಂತೆ ತೋರುತ್ತದೆ. ವ್ಯಾಪಾರ ಮಾಡು. ಅದಕ್ಕೆ ಮೊದಲು ವ್ಯವಹಾರ ಕಲಿತಿಕೋ. ನಾನು ಬಿಜಾಪುರದ ಗಣಿ ಮಾಲೀಕರೊಬ್ಬರಿಗೆ ಪತ್ರ ಕೊಡ್ತೇನೆ. ಆಗಲೇ ಅವರೊಡನೆ ಮಾತನಾಡಿ ತಿಳಿಸಿದ್ದೇನೆ. ಅಲ್ಲಿ ಹೋಗಿ ಕೆಲಸ ಕಲಿತಿಕೋ. ಹೋಗು' ಎಂದು ಬಸ್‌ಗೆ ದುಡ್ಡು ಕೊಟ್ಟು ಕಳಿಸಿದರು. ನಾನು ಬಿಜಾಪುರಕ್ಕೆ ಹೋದೆ. ಮುಂದೆ ನನ್ನ ಬದುಕಿನಲ್ಲಿ ಬೇರೇನೋ ಆಗಿಹೋಯಿತು. ನಾನು ಬೆಂಗಳೂರಿನಲ್ಲಿಯೇ ಇದ್ದಿದ್ದರೆ ಮತ್ತೆ ಕಳ್ಳತನ ಮಾಡಿ, ಮತ್ತೆ ಜೈಲು ಸೇರುತ್ತಿದ್ದನೆಂದು ತೋರುತ್ತದೆ. ಬಿಜಾಪುರದ ನನ್ನ ಅನುಭವ ನನ್ನ ಬದುಕಿನ ದಿಕ್ಕನ್ನೇ ಬದಲಾಯಿಸಿತು. ಮತ್ತೆ ನಾನು ಬೆಂಗಳೂರಿಗೆ ಬಂದಾಗ ಬೇರೆಯೇ ವ್ಯಕ್ತಿ ಆಗಿದ್ದೆ. ಈ ನನ್ನ ಬೆಳವಣಿಗೆಗೆ ನಿಮ್ಮ ತಂದೆಯೇ ಕಾರಣ".

ದಿನಕರನ್ ಆಕಾಶವನ್ನು ನೋಡಿದ. ನಿಟ್ಟುಸಿರು ಬಿಟ್ಟು. "ಅಂದು ನಿಮ್ಮ ತಂದೆ ನೀಡಿದ್ದ ಎರಡು ಸಾವಿರ ರೂಪಾಯಿಗಳನ್ನು ಅವರಿಗೆ ನೀಡಲೇ ಇಲ್ಲ. ಏಕೆ ಗೊತ್ತೆ ? ಅವರು ನನಗೆ ರೂಪಕೊಟ್ಟರು, ವ್ಯಕ್ತಿತ್ವ ಕೊಟ್ಟರು. ಅವರ ಋಣದಲ್ಲಿ ಎಂದೆಂದೂ ಇರಬೇಕು; ಅವರನ್ನು ನೋಡಿದಾಗಲೆಲ್ಲಾ ಅವರ ಹಂಗಿನಲ್ಲಿದ್ದೇನೆಂಬ ಭಾವನೆ ಬರಬೇಕು ಅಂತ. ಹೀಗಾಗಿ ಅವರನ್ನು ಕಂಡರೆ ಏನೋ ವಿಶೇಷ? ಈಗ ನಿನ್ನನ್ನು ಕಂಡರೂ ಅದೇ ಭಾವನೆ" ಎಂದ.

ರೆಡ್ಡಿ ವಿಸ್ಕಿಯನ್ನು ಸಿಪ್ ಮಾಡುತ್ತಿದ್ದ. ಭಾವ ತರಂಗಗಳು ಅವನಲ್ಲಿ ಏರಿಳಿಯುತ್ತಿದ್ದವು. ತನ್ನ ತಂದೆಯ ಬಗ್ಗೆ ತಿಳಿಯದ್ದು ಬೇಕಾದಷ್ಟಿದೆಯೆಂದು ಅನ್ನಿಸಿತು. ಹೊಸ ಅರ್ಥದಿಂದ ಹೊಸ ವ್ಯಕ್ತಿಯೆಂಬಂತೆ ಅವನು ದಿನಕರನನ್ನು ನೋಡಲಾರಂಭಿಸಿದ.

"ನಾಯ್ಡು ನಿಮ್ಮ ತಂದೆಯನ್ನು ಮುಗಿಸಿದ ಎಂದೆ. ಆದರೆ ನಿಮ್ಮ ತಂದೆಯನ್ನು ಮುಗಿಸುವಂಥ ದ್ವೇಷ ಅವನಲ್ಲಿ ಏನಿತ್ತು ? ನೀನು ಅದನ್ನು ಯೋಚನೆ ಮಾಡಬೇಕು. ನಿಜ, ಅವರಿಬ್ಬರೂ ಒಂದೇ ದಂದೆಯಲ್ಲಿದ್ದರು. ರಿಯಲ್ ಎಸ್ಟೇಟ್. ನಮ್ಮ ಕಲ್ಲಿನ ವ್ಯವಹಾರದಂತೆ

ಅದೂ ಮಣ್ಣಿಗೆ ಸಂಬಂಧಿಸಿದ್ದೇ. ಈ ಮಣ್ಣಿನ ಮೇಲೆ ಜನರಿಗೆ ಮೋಹ! ಆ ಮೋಹದ ಕಾರಣದಿಂದ ಅದರ ವ್ಯಾಪಾರಿಗಳು, ಏಜೆಂಟರು ಉದ್ದಾರವಾದರು, ನನ್ನಂಥವರು ನಿಮ್ಮಂಥವರು, ನಮ್ಮನ್ನು ಸುಲಿಯುವ ರಾಜಕಾರಣಿಗಳು, ಅಧಿಕಾರಿಗಳು ಉದ್ಧಾರವಾದರು. ಮತ್ತೆ ವಿಷಯ ಎಲ್ಲಿಯೋ ಹೋಯ್ತು. ಏನು ಹೇಳ್ತಾ ಇದ್ದೆ ? ಹ್ಞಾ.... ನಿಮ್ಮ ತಂದೆ ಮತ್ತು ನಾಯ್ಡು ಒಂದೇ ದಂದೆಯಲ್ಲಿದ್ದರು ಅಂತ. ಅವರ ನಡುವೆ ದ್ವೇಷವಿರಲಿಲ್ಲ. ಆದರೆ ವೃತ್ತಿಯಲ್ಲಿರಲೇ ಬೇಕಾದ ಸ್ಪರ್ಧೆಯಿತ್ತು. ಸ್ಪರ್ಧೆ ಸಹಜ. ಅದು ನಿನಗೂ ಅರ್ಥವಾಗಿದೆ ಅಂತ ತಿಳಿದಿದ್ದೇನೆ. ಸ್ಪರ್ಧೆಯೊಂದೇ ನಿಮ್ಮ ತಂದೆಯನ್ನು ಕೊಲ್ಲಲು ಕಾರಣವಾಗಲಾರದು" ದಿನಕರನ್ ಮತ್ತೊಮ್ಮೆ ವಿಸ್ಕಿಯನ್ನು ಸವಿದು "ಯೋಚನೆ ಮಾಡಿದ್ದೇನೆ ನಾನು. ನೀನೂ ಯೋಚನೆ ಮಾಡು. ಬೇರೆ ಏನೋ ಕಾರಣ ವಿರಬೇಕು ಅಂತ ನಿನಗನ್ನಿಸೋಲ್ಲವೆ ?" ಎಂದು ಹೇಳಿ ಸುಮ್ಮನಾದ.

ರೆಡ್ಡಿ ದಿನಕರನ್‌ನ ಮುಖವನ್ನೇ ನೋಡುತ್ತಿದ್ದ. ಅವನಿಗೆ ಅರ್ಥವಾಗುತ್ತಿತ್ತು. ಆದರೆ ಸ್ಪಷ್ಟವಾಗುತ್ತಿರಲಿಲ್ಲ. ಹೌದು, ವ್ಯವಹಾರದಲ್ಲಿರುವ ಸ್ಪರ್ಧೆಯಿಂದಾಗಿ ಅವಕಾಶಗಳು ಕೈತಪ್ಪುವುದು, ಕೈಸೇರುವುದು, ಇತರರ ಕೈಸೇರದಂತೆ ಪಿತೂರಿ ನಡೆಸುವುದು- ಇವೆಲ್ಲಾ ಮಾಮೂಲು. ಅದನ್ನು ದ್ವೇಷವೆಂದು ಕರೆಯಲಾಗದು. ಹಾಗಾದರೆ ನಾಯ್ಡು ಅಪ್ಪನನ್ನು ಏಕೆ ಕೊಂದ?

ದಿನಕರನ್ "ನಿಮ್ಮ ತಂದೆಯನ್ನು ಕೊಲ್ಲಲು ನಾಯ್ಡು ಸುಫಾರಿ ಪಡೆದಿದ್ದ. ಅದನ್ನು ನಿರಾಕರಿಸುವಷ್ಟು ಚೈತನ್ಯ ಅವನಿಗಿರಲಿಲ್ಲ. ಅವನ ಮೇಲೆ ಅಂತ ಒತ್ತಡವಿತ್ತು. ರಾಜಕೀಯ ಒತ್ತಡ. ಮಾತು ಕೇಳದಿದ್ದರೆ ಅವನು ಮುಳುಗಿ ಹೋಗುತ್ತಿದ್ದ; ಹೆಂಡತಿ ಮಕ್ಕಳು ಸಹಿತ ಆತ್ಮಹತ್ಯೆ ಮಾಡಿಕೊಳ್ಳಬೇಕಿತ್ತು. ಅವನು ನಿಜವಾದ ಕೊಲೆಗಾರನಲ್ಲ; ಅವನೊಬ್ಬ ಅಸಹಾಯಕ ಅಸ್ತ್ರಮಾತ್ರ. ಅವನಿಗೆ ಸುಫಾರಿ ನೀಡಿದವರು ಯಾರೆಂದು ಗೆಸ್ ಮಾಡಬಲ್ಲೆಯಾ ?"ಎಂದು ಸವಾಲು ಹಾಕುವವನಂತೆ ಕೇಳಿದ.

ರೆಡ್ಡಿಗೆ ಗೆಸ್ ಮಾಡಲು ಸಾಧ್ಯವಿರಲಿಲ್ಲ. ಏನೂ ಮಾತಾಡದೆ ದಿನಕರನ್ ನಿಂದ ಉತ್ತರವನ್ನು ನಿರೀಕ್ಷಿಸುವಂತೆ ನೋಡಿದ.

"ನಿಮ್ಮ ತಂದೆಯನ್ನು ಕೊಲ್ಲಲು ಸುಫಾರಿ ನೀಡಿದವರು ನಿಮ್ಮವರೇ ? ನಿಮ್ಮ ತಂದೆಯ ಆತ್ಮೀಯರು, ಬಿಸಿನೆಸ್ ಪಾರ್ಟನರ್, ಇಂದಿಗೂ ಅವರು ನಿನಗೆ ಪರಮಾಪ್ತರು....." ತನ್ನ ಮಾತನ್ನು ತಡೆತಡೆದು ಹೇಳಿದ : "ಪೀಕೆ!".

ರೆಡ್ಡಿ ನಂಬಲಸಾಧ್ಯವಾದ ಮಾತನ್ನು ಕೇಳಿ ದಿಗ್ಭ್ರಾಂತನಾದ. ಮಾಧ್ಯಮದಲ್ಲಿ ಬರುತ್ತಿದ್ದ ಊಹೆಗಳು, ಗುಮಾನಿಗಳು ನಿಜವೆಂದು ಆಯ್ತು. ಅಥವಾ ನನ್ನ ಮತ್ತು ಪೀಕೆ ಮಧ್ಯೆ ತಂದಿಡಲು ಈ ದಿನಕರನ್ ಪ್ರಯತ್ನಿಸುತ್ತಿದ್ದಾನೆಯೇ ? ವಿಚಿತ್ರವಾದ ಮಾನಸಿಕ ಗೊಂದಲದಿಂದ ಅವನು ನರಳಿದ. ಯಾರನ್ನು ನಂಬುವುದು ? ಯಾರನ್ನು ನಂಬದಿರುವುದು ? ನಾಯ್ಡು ಮೇಲಿದ್ದ ಅವನ ಆವೇಶ ಕ್ರೋಧಗಳು ನಿಧಾನವಾಗಿ ಪೀಕೆಯ ಕಡೆ ವಾಲತೊಡಗಿದವು.

ಅವನ ಮುಖವನ್ನೇ ನೋಡುತ್ತಿದ್ದ ದಿನಕರನ್ ರೆಡ್ಡಿಯ ಕೈಯನ್ನು ಅದುಮಿ "ಆವೇಶಕ್ಕೆ ಒಳಗಾಗಿ ಏನನ್ನು ಮಾಡಲು ಹೋಗಬೇಡ. ಪೀಕೆಗೂ ಇದು ಅನಿವಾರ್ಯವಾಗಿತ್ತೆಂದು ತೋರುತ್ತದೆ.

ಪೀಕೆ ಮಂತ್ರಿ ಪದವಿ ಕಳೆದುಕೊಂಡ ಸಂದರ್ಭವನ್ನು ನೆನೆಸಿಕೋ. ಪಾರ್ಟಿಯೊಳಗಿನ ಅವನ ವಿರೋಧಿಗಳು ಮುಖ್ಯಮಂತ್ರಿಯನ್ನೂ ಪೀಕೆಯನ್ನು ಗುರಿಮಾಡಿದ್ದರು. ಗ್ರಾನೈಟ್ ಲಾಬಿಯ ಬಗ್ಗೆ ಪತ್ರಿಕೆಗಳು ಬರೆದಿದ್ದವು. ಕೇವಲ ಬೆಂಗಳೂರಿಗೆ ಬಂದ ಹತ್ತು ವರ್ಷದಲ್ಲಿ ಅವನು ಕೋಟ್ಯಾಧೀಶನಾಗಿದ್ದು ಹೇಗೆಂದು ಪ್ರಶ್ನಿಸಿದ್ದವು. ಅವನ ಬಗ್ಗೆ ಹೊಸ ಸರ್ಕಾರ ತನಿಖೆ ನಡೆಸಬೇಕೆಂದು ಮಾಧ್ಯಮದವರು ಮತ್ತು ಚಳುವಳಿಗಾರರು ಒತ್ತಾಯಿಸಿದರು. ನೆನಪಿದೆಯಾ ರೆಡ್ಡಿ, ಸರಿಯಾಗಿ ನೆನಪಿಸಿಕೋ. ಆಗ ನಿಮ್ಮ ತಂದೆಯೂ ಹೆದರಿದ್ದರು. ಏಕೆ ಗೊತ್ತೆ. ಪೀಕೆಗೆ ಅದು ಪಾರ್ಟ್ ಆಫ್ ದ ಗೇಮ್ ಆದರೆ, ನಿಮ್ಮ ತಂದೆಗೆ ಪಾರ್ಟ್ ಆಫ್ ದ ಬಿಸಿನೆಸ್! ಅಲ್ಲವೆ ? ಪೀಕೆ. ಮುಳುಗುವಾಗ ನಿಮ್ಮ ತಂದೆಯನ್ನು ಜೊತೆಯಲ್ಲೇ ಕೆರದುಕೊಂಡು ಮುಳುಗುತ್ತಿದ್ದ. ನಿಮ್ಮ ತಂದೆಗೆ ಹೆದರಿಕೆಯಿತ್ತು.

"ನಿಮ್ಮ ತಂದೆ ಒಂದು ವಿಷಯದ ಬಗ್ಗೆ ಹೆಚ್ಚುಗಮನ ಕೊಟ್ಟಿರಲಿಲ್ಲ. ಪೀಕೆ ಅಧಿಕಾರ ಕಳೆದು ಕೊಂಡು ಮಾಜಿಯಾಗಿದ್ದಾನೆ ಎಂದುಕೊಂಡರು. ಆದರೆ ಅವನು ಕೇವಲ ಮಂತ್ರಿ ಪದವಿ ಕಳೆದುಕೊಂಡಿದ್ದ ಅಷ್ಟೆ. ಅವನು ಎಂ. ಎಲ್. ಸಿ ಆಗಿದ್ದ; ಈಗಲೂ ಅವನು ಎಂ ಎಲ್ ಸಿ ಯೇ! ಅಲ್ಲವೇ ರೆಡ್ಡಿ ? ಪೀಕೆಯು ಅಧಿಕಾರ ಕಳೆದುಕೊಂಡಿದ್ದರೂ ಅವನ ಮಾತನ್ನು ಕೇಳುವ ನಾಯಕರು ಹೊಸ ಸರ್ಕಾರದಲ್ಲೂ ಇದ್ದಾರೆ; ಅಧಿಕಾರಿಗಳೂ ಇದ್ದಾರೆ. ಅವರಿಂದ ಇವನಿಗೆ ಒಂದು ಸಲಹೆ ಬಂತು, 'ಸರ್ಕಾರದ ಮೇಲೆ ನಿನ್ನ ಬಗ್ಗೆ ತನಿಖೆ ಆಗಬೇಕು ಅಂತ ಒತ್ತಡ ಬಂದರೆ ನಾವು ತನಿಖೆ ಮಾಡಲೇ ಬೇಕಾಗುತ್ತದೆ. ನಾವೂ ತನಿಖೆ ಮಾಡುವ ನಾಟಕ ಮಾಡುತ್ತೇವೆ. ಹೆದರುವುದು ಬೇಡ. ಆದರೆ ಯಾವುದಕ್ಕೂ ತನಿಖಾ ಸಮಿತಿಗೆ ಪುರಾವೆಗಳು ಸಿಗದಂತೆ ನೋಡಿಕೋ'. ಪೀಕೆಯ ಆಳ ಅಗಲ, ಅವನ ಎಲ್ಲ ವ್ಯವಹಾರ, ಚಿನ್ನ ಬೆಳ್ಳಿ ಸಂಗ್ರಹ, ಬೇನಾಮಿ ಆಸ್ತಿ, ಸೈಟುಗಳು, ಮನೆಗಳು-ಎಲ್ಲವೂ ಗೊತ್ತಿದ್ದುದು ನಿಮ್ಮ ತಂದೆಗೆ ಮಾತ್ರ. ಅನೇಕ ಅವನ ಅಂತರಂಗದ ವಿಚಾರಗಳು ಅವನ ತಮ್ಮನಿಗೆ ಇರಲಿ, ಅವನ ಹೆಂಡತಿಗೂ ಗೊತ್ತಿಲ್ಲ! ನಿನಗೆ ಗೊತ್ತೇ ?" ದಿನಕರ ಪ್ರಶ್ನಿಸಿದ, ರೆಡ್ಡಿಯನ್ನೇ ನೋಡುತ್ತಾ.

ರೆಡ್ಡಿ ನಿರುತ್ತರನಾಗಿದ್ದ, ಗಾಬರಿಯಾಗಿದ್ದ, ಭಾವನೆಗಳ ತಳಮಳದಲ್ಲಿದ್ದ. "ನಿಮ್ಮ ತಂದೆ ಕೇವಲ ಬಿಸಿನೆಸ್‌ಮ್ಯಾನ್ ಆಗಿದ್ದರು. ಆದರೆ ಪೀಕೆ ? ಮೊದಲಿಗೆ ಪೊಲಿಟಿಷಿಯನ್, ನಂತರ ಶಿಕ್ಷಣ ತಜ್ಞ. ಕೊನೆಯಲ್ಲಿ ಬಿಸಿನೆಸ್ ಮ್ಯಾನ್. ಅವನ ಕೊನೆಯ ವ್ಯಕ್ತಿತ್ವದಿಂದ ಮೊದಲ ಎರಡು ವ್ಯಕ್ತಿತ್ವಗಳಿಗೆ ಕುಂದುಬರಬಾರದು. ತನ್ನ ವಿರುದ್ಧದ ಒಂದೊಂದು ಸಾಕ್ಷಿಗಳನ್ನು ನಾಶಮಾಡುತ್ತಾ ಬಂದ. ಅವನ ವಿರುದ್ಧದ ದೊಡ್ಡ ಜೀವಂತ ಸಾಕ್ಷಿ ನಿಮ್ಮ ತಂದೆ! ಅದನ್ನು ನಿವಾರಿಸುವುದು ಅವನಿಗೆ ಅನಿವಾರ್ಯವಾಗಿತ್ತು. ಅದನ್ನೇನು ಅವನು ಸಂತೋಷದಿಂದ ಮಾಡಿಲ್ಲ. ಬಹುಶಃ ಬಹಳ ವ್ಯಥೆ, ಸಂಕಟಪಟ್ಟಿದ್ದಾನೆ. ಆದರೆ ರಾಜಕೀಯದಲ್ಲಿ ಅವನ ಭವಿಷ್ಯ ಇನ್ನು ಉಧ್ಧವಿದೆ. ಅವನಿಗೆ ಈಗ ನಲವತ್ತು ವರ್ಷ. ಅವನ ರಾಜಕೀಯ ಜೀವನ ಇನ್ನೂ ಬೆಳೆಯ ಬೇಕಿದೆ"- ಎಂದನು ದಿನಕರನ್.

ರೆಡ್ಡಿ ಎದ್ದು ನಿಂತ. ಅವನ ಕಣ್ಣುಗಳಲ್ಲಿ ನೀರಿರಲಿಲ್ಲ. ಅದರ ಬದಲು ಯಾವುದೋ ನಿರ್ಧಾರವಿತ್ತು.

ರೆಡ್ಡಿಯ 'ಅಚಲತೆಯನ್ನು ಗಮನಿಸಿದ ದಿನಕರನ್ ತಾನೂ ಎದ್ದು ನಿಂತು ಅವನ ಕೈ ಹಿಡಿದು "ಯಾವುದಕ್ಕೂ ಕೈ ಹಾಕಬೇಡ. ನಿನ್ನ ವ್ಯವಹಾರ ನೀನು ನೋಡಿಕೊಂಡು ಹೋಗು. ಪೀಕೆಯ ಜೊತೆ ಸಂಬಂಧ ಎಂದಿನಂತೆ ಇರಲಿ. ನಿನಗೆ ರಹಸ್ಯಗಳು ಗೊತ್ತು ಅನ್ನುವಂತೆ ವರ್ತಿಸಬೇಡ. ನೆನಪಿರಲಿ, ಪೀಕೆ ಶಕ್ತಿವಂತ. ಅವನು ಏನು ಬೇಕಾದರೂ ಮಾಡಬಲ್ಲ, ಜೀರ್ಣಿಸಿಕೊಳ್ಳಬಲ್ಲ" ಎಂದನು.

"ನಿಮ್ಮ ಮಾತನ್ನು ನೆನಪಿನಲ್ಲಿಟ್ಟು ಕೊಳ್ಳುತ್ತೇನೆ. ನೀವು ನೀಡಿದ ಮಾಹಿತಿಗೆ ಧನ್ಯವಾದಗಳು" ಎಂದು ದಿನಕರನ್‌ನ ಕೈಹಿಡಿದು ನಮಸ್ಕರಿಸಿ ರೆಡ್ಡಿ ನಡೆದನು.

ಅವನು ಹೋಗುವುದನ್ನೇ ನೋಡುತ್ತಾ ನಿಂತಿದ್ದ ದಿನಕರನ್‌ನ ಮುಖದಲ್ಲಿ ಕಂಡರೂ ಕಾಣದಂತಹ ನಗು ಮೂಡಿತ್ತು.

## ಅಧ್ಯಾಯ : ಹನ್ನೊಂದು

ಸುಮೊ ಮಂಡ್ಯವನ್ನು ಪ್ರವೇಶಿಸಿತ್ತು. ನಂದಾ ಟಾಕೀಸ್ ದಾಟಿದ್ದ ಸುಮೊದ ವೇಗ ಅತ್ಯಂತ ಕಡಿಮೆಯಾಗಿತ್ತು. ರಸ್ತೆಗಳಲ್ಲಿ ಜನರ ಒತ್ತಡ ಅಧಿಕವಾಗಿತ್ತು. ವಾಹನಗಳಿಗೆ ಜಾಗ ಬಿಡುವದು ನಮ್ಮ ಕರ್ತವ್ಯವೆಂದು ಅವರು ತಿಳಿದಿರಲಿಲ್ಲ. ಫುಟ್‌ಪಾತು, ರಸ್ತೆ ಅವರಿಗೆ ಒಂದೇ ರೀತಿಯಾಗಿತ್ತು. ಸುಮೊ ನಗರ ಸಭೆಯ ಕಛೇರಿಯನ್ನು ದಾಟಿ ಸಂಜಯ್ ಟಾಕೀಸ್ ಸರ್ಕಲ್‌ಗೆ ಬಂತು. ರೆಡ್ಡಿ ಸುಮೊವನ್ನು ಆ ಸರ್ಕಲ್ಲಿನಲ್ಲಿ ಸ್ವಲ್ಪ ಎಡಕ್ಕೆ ಬನ್ನೂರು ರಸ್ತೆಯ ಕಡೆ ಡ್ರೈವ್ ಮಾಡಿ, ರಸ್ತೆಯ ಎಲ್ಲಾ ಎಡಭಾಗದಲ್ಲಿ ನಿಲ್ಲಿಸಿದ. ಎಂಜಿನ್ ಆಫ್ ಮಾಡಿ ಕೀ ತೆಗೆದು ತನ್ನ ಜೇಬಿನಲ್ಲಿಟ್ಟ.

"ಇಲ್ಲೇ ಒಂದು ಅಂಗಡಿಗೆ ಹೋಗಿ ಬರ್ತೇನೆ. ಐದೇಐದು ನಿಮಿಷ" ಎಂದು ಯಾರ ಪ್ರತಿಕ್ರಿಯೆಗೂ ಕಾಯದೆ, ಬನ್ನೂರು ರಸ್ತೆಯ ಜನಜಂಗುಳಿಯ ನಡುವೆ ಕಣ್ಮರೆಯಾದ.

ಚಂದ್ರಿಕಾ ಅಣ್ಣನನ್ನು ನೋಡಿದಳು. ಆಯಾಸ ಅವನಲ್ಲಿ ಮನೆ ಮಾಡಿದಂತೆ ತೋರುತ್ತಿತ್ತು. ಕಣ್ಣು ಮುಚ್ಚಿ ನಿದ್ದೆ ಮಾಡುತ್ತಿದ್ದ. ಮಹೇಶನನ್ನು ನೋಡಿದಳು. ಸಂಜಯ್ ಚಿತ್ರಮಂದಿರದ ಕಡೆ ಅವನು ನೋಡುತ್ತಿದ್ದ. ಅವನ ಮುಖದಲ್ಲಿದ್ದ ಚಿಂತೆ ಬೀದಿ ದೀಪಗಳ ಮಂದ ಬೆಳಕಿನಲ್ಲಿ ಎದ್ದು ತೋರುತ್ತಿತ್ತು.

ಅವಳು ಗಡಿಯಾರ ನೋಡಿಕೊಂಡಳು. ಆಗಲೇ ಒಂಬತ್ತಾಗಿತ್ತು. ಈ ರೆಡ್ಡಿ ಏಕೆ ಗಾಡಿ ನಿಲ್ಲಿಸಿದ ? ಈಗ ಎಲ್ಲಿಗೆ ಹೋದ ? ಸುಮ್ಮನೆ ಟೈಮ್ ವೇಸ್ಟ್. ಅಣ್ಣನ ಮಾತನ್ನು ಕೇಳಬಾರದಿತ್ತು. ಈಗ ನೋಡಿದರೆ ಏನೂ ಆಗದವನಂತೆ ನಿದ್ದೆ ಮಾಡುತ್ತಿದ್ದಾನೆ. ಅವನ ಮೇಲೆ ರೇಗಾಡಬೇಕೆನ್ನಿಸಿತು.

ಬೆಳ್ಳಿ ನಿದ್ದೆ ಮಾಡುತ್ತಿತ್ತು. ಅದರ ದೇಹ ಭೂಮಿಗೌಡನನ್ನು ಒತ್ತರಿಸಿಕೊಂಡಿತ್ತು. ಅವಳಿಗೆ ಆಶ್ಚರ್ಯವಾಗಿತ್ತು. ಬೆಳ್ಳಿ ಯಾರ ಬಳಿಯೂ ಸಾಮಾನ್ಯವಾಗಿ ಹೊಂದಿಕೊಳ್ಳುತ್ತಿರಲಿಲ್ಲ. ಆದರೆ ಇಂದು ಅದರ ವರ್ತನೆ ವಿಚಿತ್ರವಾಗಿದೆ. ಈ ಪ್ರೊಫೆಸರ್ ಅವರನ್ನು ಕಂಡ ಕೂಡಲೆ ಅವರನ್ನು ಹಚ್ಚಿಕೊಂಡಿದೆ. ನನ್ನ ಬಳಿ ಬರುತ್ತಿಲ್ಲ. ಅದರ ಮೇಲೆ ಕೈಯಾಡಿಸಬೇಕೆಂದು ಅವಳಿಗೆ ಆಸೆಯಾಯಿತು. ಕೋಪವೂ ಬಂತು. ಪ್ರೊಫೆಸರ್ ಮೇಲೆ ಅಸೂಯೆಯೂ ಆಯಿತು. ಇವರಲ್ಲಿ ಏನು ಮೋಡಿ ಇದೆಯೋ ? ಆ ಸೆಳೆತಕ್ಕೆ ಒಳಗಾಗಿದೆ. ಚಂದ್ರಿಕಾಳ ದೃಷ್ಟಿ ಭೂಮಿಗೌಡನ ಕಡೆ ತಿರುಗಿತು. ಅವರು ತನ್ನನ್ನೇ ನೋಡುತ್ತಿದ್ದಾರೆ! ಅವಳಿಗೆ ಮುಜುಗರವಾಯಿತು. ಅವರಿಗೂ ಆಗಿರಬಹುದು. ದೃಷ್ಟಿ ಬದಲಿಸಿದಳು.

ಭೂಮಿಗೌಡನ ಜೇಬಿನಿಂದ ಮೊಬೈಲ್ ಸದ್ದಾಯಿತು. ಅವನು ಅದನ್ನು ಜೇಬಿನಿಂದ ತೆಗೆದು ಕಾಲ್ ರಿಸೀವ್ ಮಾಡಿ "ಹ್ಞಾಂ.....ಹ್ಞಾ....... ಹೌದು. ನಾನೇ ಮಾತಾಡ್ತಾ ಇದ್ದೀನಿ. ಹೇಳಿ....... ನಾಳೆ ಬೆಳಿಗ್ಗೆ ಕಾಲೇಜಿನಲ್ಲಿ ಸಿಗುತ್ತೇನೆ. ಆಯ್ತು......ಆಯ್ತು.........ಬನ್ನಿ"

ಎಂದು ಹೇಳಿ ಮೊಬೈಲ್ ಅನ್ನು ಡಿಸ್‌ಕನೆಕ್ಟ್ ಮಾಡಿ ಮತ್ತೆ ಜೇಬಿನಲ್ಲಿಟ್ಟ.

ಚಂದ್ರಿಕಾ "ನಿಮ್ಮ ಸ್ನೇಹಿತರಾ ?" ಎಂದು ಕೇಳಿದಳು.

"ಇಲ್ಲ ಮೇಡಂ, ಮದ್ರಾಸ್ ವಿಶ್ವವಿದ್ಯಾನಿಲಯದ. ಪ್ರಾಧ್ಯಾಪಕರು. ಮೈಸೂರಿಗೆ ಬಂದಿದ್ದಾರಂತೆ. ನನ್ನನ್ನು ಭೇಟಿ ಮಾಡಬೇಕಂತೆ. ನಾಳೆ ಬೆಳಿಗ್ಗೆ ಕಾಲೇಜಿನಲ್ಲಿ ಸಿಗುತ್ತೇನೆ ಎಂದೆ" ಎಂದುತ್ತರಿಸಿದ ಭೂಮಿಗೌಡ.

ಭೂಮಿಗೌಡ ತನ್ನನ್ನು 'ಮೇಡಂ' ಎಂದು ಕರೆಯುವುದು ಏಕೋ ಇಷ್ಟವಾಗುತ್ತಿಲ್ಲ. 'ಹಾಗೆ ಕರೆಯಬೇಡಿ, ಚಂದ್ರಿಕಾ ಎಂದು ಕರೆಯಿರಿ" ಎಂದು ಹೇಳಬೇಕು. ಆದರೆ ಹೇಗೆ ಹೇಳುವುದು? ಆದರೆ ಅವಳು ಪ್ರೊಫೆಸರ್. ನಾನು ಅವರಿಗಿಂತ ಚಿಕ್ಕವಳು. ಇವರಿಗೆ ಎಷ್ಟು ವರ್ಷ ವಯಸ್ಸಾಗಿರಬಹುದು ? ನಮ್ಮ ಮನೆಯವರಿಗಿಂತ, ನಮ್ಮ ಅಣ್ಣನಿಗಿಂತ ಯಂಗ್ ಆಗಿ ಕಾಣುತ್ತಾರೆ. ನನಗಿಂತ ಐದಾರು ವರ್ಷ ದೊಡ್ಡವರಿರಬಹುದು. ಭೂಮಿಗೌಡ ಕಿಟಕಿಯಿಂದ ಹೊರಗಿನ ಜನರನ್ನು ಗಮನಿಸುತ್ತಿದ್ದ. ಅವಳು ಅವನನ್ನು ಅಳೆಯುತ್ತಿದ್ದಳು. ತಲೆಯ ತುಂಬ ಕೂದಲು. ನೀಳವಾದ ಮೂಗು, ಮೇಲ್ತುಟಿಗಿಂತ ಕೆಳ ತುಟಿ ಸ್ವಲ್ಪ ದಪ್ಪ. ನುಣುಪಾಗಿ ಶೇವ್ ಮಾಡಿದ ಕೆನ್ನೆ. ಮೇಲ್ತುಟಿಯ ಮೇಲೆ ಹದವಾಗಿ ಟ್ರಿಮ್ ಮಾಡಿದ ಮೀಸೆ, ತೀರಾ ಬಿಳುಪೂ ಅಲ್ಲದ, ಕಪ್ಪು ಅಲ್ಲದ ಸ್ಥಳೀಯ ವರ್ಣ. ಅವಳ ದೃಷ್ಟಿ ಅವನ ದೇಹವನ್ನು ಸ್ಪರ್ಶಿಸುತ್ತಿತ್ತು. ತುಂಬುದೋಳಿನ ಷರ್ಟ್‌ನ್ನು ಇನ್‌ಷರ್ಟ್ ಮಾಡಿದ್ದ. ಷರ್ಟಿನ ಜೇಬಿನಲ್ಲಿ ಪೆನ್ನು ಕಾಣುತ್ತಿತ್ತು. ಕ್ರೀಮ್ ಬಣ್ಣದ ಷರ್ಟ್. ಅವನು ಆ್ಯಷ್ ಕಲರ್ ಪ್ಯಾಂಟ್ ಧರಿಸಿದ್ದ. ಅವನ ಕಾಲಲ್ಲಿ ಸ್ಪೋರ್ಟ್ಸ್ ಷೂಗಳು.

ಅವಳು ಒಮ್ಮೆ ಕಣ್ಣು ಮುಚ್ಚಿ. ಅವನ ಅಂಗಸೌಷ್ಠವವನ್ನು ಕಲ್ಪಿಸಿಕೊಂಡಳು. ಸದೃಢವಾದ ದೇಹ, ಬಲವಾದ ತೋಳುಗಳು, ಉಬ್ಬಿದ ಎದೆ. ತೆಳುವಾದ ಹೊಟ್ಟೆ, ನಡು. ಅವಳಿಗೆ ಆಶ್ಚರ್ಯವಾಯಿತು. ತನ್ನ ಮನೆಯವರು, ತನ್ನಣ್ಣ - ಇವರಿಗೆಲ್ಲ ಆಗಲೇ ಹೊಟ್ಟೆ ಬಂದಿದೆ. ಆದರೆ ಈ ಪ್ರೊಫೆಸರ್‌ಗೆ ತೆಳುವಾದ ಹೊಟ್ಟೆ! ಸದೃಢವಾದ ತೊಡೆಗಳು. ಕಣ್ಣು ತೆರೆದಳು. ಅವಳ ಕಲ್ಪನೆಯಲ್ಲಿ ಸುಳ್ಳಿಲ್ಲವೆಂದು ದೃಢಪಡಿಸಿಕೊಂಡಳು.

ಛೇ ! ನಾನು ಏನು ಮಾಡುತ್ತಿದ್ದೇನೆ ? ಪರಪುರುಷನ ಎದುರು ಕುಳಿತು ಅವನ ದೇಹ ಸೌಂದರ್ಯವನ್ನು ಸವಿಯುತ್ತಿದ್ದೇನೆಯೇ? ನನ್ನಂಥ ಒಂದು ಮಗುವಿರುವ ತಾಯಿಗೆ ಇದು ಸರಿಯೇ? ಯಾವುದು ತಪ್ಪು? ಯಾವುದು ಸರಿ ? ಅವಳು ಗೊಂದಲದ ಗೂಡಾದಳು. ಅದರಿಂದ ಅವಳು ಹೊರಬರಬೇಕು. ಅದಕ್ಕೆ ಏನಾದರೂ ಮಾತಾಡಬೇಕು. ಭೂಮಿಗೌಡನ ಮುಖವನ್ನು ನೋಡಿ "ತುಂಬಾ ತಡವಾಗ್ತಿದೆ. ನನ್ನ ಮಗ ಮಲಗಿರ್ತಾನೆ. ಸಾರ್, ನೀವು ಮನೆಗೆ ಫೋನ್ ಮಾಡಿ ಬರುವುದು ತಡವಾಗುತ್ತೇ ಅಂತ ತಿಳಿಸಬಹುದಲ್ಲಾ" ಎಂದಳು.

ಭೂಮಿಗೌಡ ಅವಳ ಕಡೆ ನೋಡಿ ಮೃದುವಾಗಿ ನಕ್ಕ. ಅವನು ತುಂಬ ಮೋಹಕವಾಗಿ ನಗುತ್ತಾನೆ ಅನ್ನಿಸಿತು. ಅವಳನ್ನು ಕುರಿತು ಅವನು "ನನಗೆ ಮನೆಯಲ್ಲಿ ಕಾಯುವವರು ಯಾರು ಇಲ್ಲ ಮೇಡಂ" ಎಂದ.

"ಏಕೆ ? ನಿಮ್ಮ ಮನೆಯವರು ತವರಿಗೆ ಹೋಗಿದ್ದಾರೆಯೇ ?" ಪ್ರಶ್ನೆಮಾಡಿದಳು ಚಂದ್ರಿಕಾ.

"ನೋ ಹೆಂಡತಿ ಮಕ್ಕಳು. ನನಗೆ ಮದುವೆಯೇ ಆಗಿಲ್ಲ" ಎಂದ ನಗುತ್ತಾ.

"ಏಕೆ ಮದುವೆಯಾಗಿಲ್ಲ ? ಬ್ರಹ್ಮಚರ್ಯ ವ್ರತವೋ ? ಅಥವಾ ನಿಮಗೆ ಮದುವೆ ಯಾಗಲು ಟೈಮೇ ಸಿಗಲಿಲ್ಲವೋ" ಅವಳು ಕೂಡ ತಮಾಷೆಯಾಗಿ ಕೇಳಿದಳು.

"ನನಗೆ ಬ್ರಹ್ಮಚರ್ಯೆಯಂಥ ಆದರ್ಶದಲ್ಲಿ ನಂಬಿಕೆಯಿಲ್ಲ, ಮೇಡಂ. ಮದುವೆಯಾಗಿದ್ದರೆ ಐದಾರು ವರ್ಷದ ಹಿಂದೆಯೇ ಆಗಬೇಕಿತ್ತು. ಆದರೆ ಯಾವುದೋ ಕಾರಣಕ್ಕೆ ಆಗಲಿಲ್ಲ. ಅನಂತರ ಅದರ ಬಗ್ಗೆ ಯೋಚಿಸುವುದನ್ನು ಬಿಟ್ಟೆ. ನನ್ನ ಸಂಪೂರ್ಣ ಮನಸ್ಸನ್ನು ಅಧ್ಯಯನ, ಸಂಶೋಧನೆ ಕಡೆ ತೊಡಗಿಸಿಕೊಂಡೆ" ಎಂದ ಗೌಡ. ಅವನ ದನಿಯು ಸಹಜತೆಯಿಂದ ಕೂಡಿದ್ದರೂ ಎಲ್ಲೋ ಒಂದು ಬಗೆಯ ವಿಷಾದದ ಛಾಯೆಯ ಎಳೆ ಅಲ್ಲಿರುವಂತೆ ಚಂದ್ರಿಕಾಳಿಗೆ ತೋರಿತು.

ಚಂದ್ರಿಕಾ ಅವನ ಮುಖದಲ್ಲಿ ಭಾವಗಳು ಹರಿದಾಡುವುದನ್ನು ಗುರುತಿಸಿದಳು. ಅವಳಿಗೆ ಅವನಿಗೆ ಮದುವೆಯಾಗಿಲ್ಲವೆಂದು ತಿಳಿದು ಒಂದು ವಿಚಿತ್ರವಾದ ನೆಮ್ಮದಿಯಾಯಿತು. ತಕ್ಷಣ ಮನದಲ್ಲೇ ಬೆಚ್ಚಿದಳು. ಅವನು ಮದುವೆಯಾಗದಿರುವುದಕ್ಕೆ ತನಗೇಕೆ ನೆಮ್ಮದಿಯಾಗಬೇಕು. ಅವನ್ಯಾರು? ಈಗ ಒಂದೆರಡು ಗಂಟೆಯ ಹಿಂದೆ ಪರಿಚಯವಾದವನು. ಅವನ ಬಗ್ಗೆ ನನಗೇನು ಗೊತ್ತು ? ಆದರೆ.....ಆದರೆ.......ಅವನಲ್ಲಿ ಏನೋ ವಿಶೇಷ ಆಕರ್ಷಣೆಯಿದೆ. ದೈಹಿಕ ವಾದದ್ದಕ್ಕೆ ಮಿಗಿಲಾದದ್ದು. ಅದು ನನ್ನನ್ನು ಸೆಳೆಯುತ್ತಿದೆ. ತನ್ನ ಕನಸು, ತನ್ನ ಆದರ್ಶಕ್ಕೆ ಸಂಬಂಧಿಸಿದ್ದು ಇರಬಹುದೆ ? ಅವಳಿಗರಿವಿಲ್ಲದಂತೆ ಅವಳ ಗಂಡನ ಬಗ್ಗೆ ಅವಳ ಮನಸ್ಸು ಹರಿಯಿತು.

ಮದುವೆಯಾಗಿ ಐದು ವರ್ಷವಾಯಿತು. ಚಂದ್ರಶೇಖರ್‌ನನ್ನು ನಾನು ಮನಸಾರೆ ಮೆಚ್ಚಿ ಮದುವೆಯಾಗಲಿಲ್ಲವೆಂಬುದು ನಿಜ. ಅದು ಅಪ್ಪ ಅಮ್ಮ ಒಪ್ಪಿ, ತನ್ನನ್ನು ಒಪ್ಪಿಸಿ ಮಾಡಿದ ಮದುವೆ ! ನಮ್ಮ ಸಮಾಜದಲ್ಲಿ ಇಂಥ ಮದುವೆಗಳೇ ಅಲ್ಲವೆ ನೂರಕ್ಕೆ ನೂರು ನಡೆಯುವುದು. ಎಲ್ಲೋ ಅಲ್ಲೊಂದು ಇಲ್ಲೊಂದು ಪ್ರೇಮವಿವಾಹ ಆಗಬಹುದು. ಅವಕ್ಕೂ ನೂರೆಂಟು ವಿಘ್ನಗಳು!" ಹುಡುಗ ಕೆ ಎ ಎಸ್ ಪಾಸು ಮಾಡಿದ್ದಾನೆ. ಒಳ್ಳೆಯ ಮನೆತನ. ಸಮಾಜದಲ್ಲಿ ನಿನಗೆ ಒಳ್ಳೆಯ ಸ್ಥಾನಮಾನ ಸಿಗುತ್ತೆ. ಒಪ್ಪಿಕೊ" ಎಂದು ತನ್ನನ್ನು ಕೂರಿಸಿಕೊಂಡು ಅಪ್ಪ ಅಮ್ಮ ಹೇಳಿದಾಗ ಅವಳು 'ಆಗದು' ಎಂದಿದ್ದಳು. ತನ್ನ ಆಸೆ ತೋಡಿಕೊಂಡಿದ್ದಳು. ತಾನು ಈಗ ತಾನೆ ಎಂ. ಎ ಪಾಸುಮಾಡಿದ್ದೇನೆ. ಸಮಾಜಶಾಸ್ತ್ರ ವಿಷಯದಲ್ಲಿ ರಿಸರ್ಚ್ ಮಾಡಬೇಕು, ಲೆಕ್ಚರರ್ ಆಗಬೇಕು. ಅವು ನನ್ನ ಆಸೆ. ಮದುವೆಯಾದರೆ ಅವೆಲ್ಲಾ ಆಗೋಲ್ಲ. ಆದರೆ ಅಪ್ಪ ಖಡಾಖಂಡಿತವಾದಿ. ಕಡ್ಡಿ ತುಂಡು ಮಾಡಿದಂತೆ ಹೇಳಿದರು : "ಹುಡುಗ ಶರಣ್ ಕಡೆಯಿಂದ ಬಂದಿದ್ದಾನೆ. ಶರಣ್ ಒಪ್ಪಿದ್ದಾನೆ. ನಿನ್ನ ಫೋಟೋನ ಹುಡುಗನಿಗೆ ತೋರ್ಸಿದ್ದಾನೆ. ಅವನು, ಅವನ ಮನೆಯವರು ಒಪ್ಪಿದ್ದಾರೆ. ನಿನ್ನ ನೋಡಲು ಮುಂದಿನ ಭಾನುವಾರ ಬರ್ತಾರೆ. ಎಲ್ಲ ಸರಿಕೂಡಿ ಬಂದರೆ ಯಾಕೆ ತಡಮಾಡ್ಬೇಕು ?" ಅವಳ ಮುಖವನ್ನು ನೋಡುತ್ತಾ "ನೀನು ರಿಸರ್ಚ್ ಮಾಡಿ ಸಂಪಾದನೆ ಮಾಡುವುದು ಅಷ್ಟರಲ್ಲೇ ಇದೆ. ಅಷ್ಟಕ್ಕೂ ನಿನ್ನ ಸಬ್ಜೆಕ್ಟ್‌ಗೆ ಕರೆದು ಕೆಲಸ ಕೊಡೋರು ಯಾರು ? ಸುಮ್ಮನೆ ಬಾಯ್ಮುಚ್ಚಿಕೊಂಡು ಒಪ್ಪಿಕೊ" ಎಂದರು.

ಒಂದು ಭಾನುವಾರ ಗಂಡಿನ ಕಡೆಯವರು ಬಂದರು. ನಮ್ಮ ಮನೆ, ಮನೆತನ, ಸಂಪತ್ತು

ಎಲ್ಲವೂ ಅವರಿಗಿಷ್ಟವಾಯಿತು. ಅಪ್ಪ ಅಮ್ಮನಿಗೆ ಗಂಡು ಸರಿ ಎನ್ನಿಸಿತು. ತನಗೂ ಅವನನ್ನು ತಿರಸ್ಕರಿಸುವ ಯಾವ ಅವಗುಣವೂ ಅಂದು ಕಾಣಲಿಲ್ಲ. ಸಾಧಾರಣ ಎತ್ತರ. ಗುಂಡು ಮುಖ. ಅವರ ತಂದೆ ತಾಯಿಗೆ ಹೋಲಿಸಿದರೆ ಸ್ವಲ್ಪ ದಪ್ಪಗೇ ಇದ್ದ. ಅವರಿಗಿಂತ ಸ್ವಲ್ಪ ಬೆಳ್ಳಗೂ ಇದ್ದ. ಎಂದಾದರೂ ಮದುವೆಯಾಗಬೇಕಲ್ಲ ! 'ಆಯ್ತು' ಅಂದದ್ದಾಯ್ತು. ಕೊಡೋದು ಬಿಡೋದು ಅದು ಇದು ಅಂತ ಮಾತು ಕತೆಯಾಗಿ ಮೈಸೂರಿನಲ್ಲಿ ಅದ್ದೂರಿಯಾಗಿ ಮದುವೆಯೂ ಆಯ್ತು. ಚಂದ್ರಶೇಖರ್ ಪ್ರೊಬೇಷನರಿ ಮುಗಿಸುವವರೆಗೆ ಅವಳು ಮೈಸೂರಿನಲ್ಲೇ ಇದ್ದಳು. ಅವನು ಬಂದು ಹೋಗುತ್ತಿದ್ದ. ಅವನ ಮೊದಲ ಪೋಸ್ಟಿಂಗ್ ಕನಕಪುರಕ್ಕೆ ಆಯ್ತು, ನಾಲ್ಕು ವರ್ಷದ ಹಿಂದೆ. ಅಷ್ಟೊತ್ತಿಗಾಗಲೇ ಅವಳು ಐದು ತಿಂಗಳ ಗರ್ಭಿಣಿ! ವಿಚಿತ್ರ ಎಂದರೆ ಅವಳು ಗಂಡನ ಜೊತೆ ಸಂಸಾರ ಮಾಡ ತೊಡಗಿದ್ದೇ ಕಳೆದ ಮೂರು ವರ್ಷಗಳಿಂದ. ಐದು ವರ್ಷದ ದಾಂಪತ್ಯದಲ್ಲಿ ಮೂರು ವರ್ಷಗಳ ಸಂಸಾರ ! ಸಂಸಾರ ಮಾಡುವ ಹೊತ್ತಿಗೆ ಆರು ತಿಂಗಳ ಮಗು!

ಅವಳು ಸಾಹಿತ್ಯ ಸಂಗೀತಗಳ ಅಭಿಮಾನಿ. ಚಂದ್ರಶೇಖರ್‌ಗೆ ಅವುಗಳ ಬಗ್ಗೆ ಆಸಕ್ತಿಯೂ ಇರಲಿಲ್ಲ; ಸಾಹಿತ್ಯ ಓದಲು ಸಂಗೀತ ಕೇಳಲು ಸಮಯವೂ ಇರಲಿಲ್ಲ. ಆತ ಮನೆಗೆ ಬರುವುದಕ್ಕೆ ಹೋಗುವುದಕ್ಕೆ ಒಂದು ಸಮಯವೂ ಇರುತ್ತಿರಲಿಲ್ಲ. ಅವನ ಕೆಲಸವೇ ಅಂಥಾದ್ದು ಎಂದುಕೊಂಡು ಸಾಮಾಧಾನ ಪಟ್ಟುಕೊಳ್ಳುತ್ತಿದ್ದಳು. ಕಾಲ ಕಳೆಯಲು ಮಗನಿದ್ದ; ಪುಸ್ತಕಗಳು, ಸಂಗೀತದ ಕ್ಯಾಸೆಟ್‌ಗಳು, ಸಿಡಿಗಳು, ಟೀವಿ ಅವಳ ಸಂಗಾತಿಗಳಾಗಿದ್ದವು. ಗಂಡ ತಹಸೀಲ್ದಾರ್ ಆಗಿದ್ದರಿಂದ ಮನೆ ಕೆಲಸಕ್ಕೆ ಆಳುಕಾಳುಗಳಿದ್ದರು.. ಒಂದಷ್ಟು ಅಡುಗೆ ಮಾಡಿದರಾಯ್ತು. ಅದೇ ಎರಡೆರಡು ದಿನಕ್ಕಾಗುತ್ತಿತ್ತು. ಅವನು ಬೆಳಿಗ್ಗೆ ತಿಂಡಿ ತಿಂದು ಹೋದರೆ ಮಧ್ಯಾಹ್ನ ಊಟಕ್ಕೆ ಬಂದರೆ ಬಂದ, ಇಲ್ಲದಿದ್ದರೆ ಇಲ್ಲ. ಕೇಳಿದರೆ ಕೆಲಸದ ಒತ್ತಡದ ಕಾರಣ ಮುಂದೆ ಬರುತ್ತಿತ್ತು. ರಾತ್ರಿ ಯಾವತ್ತೂ ಬೇಗ ಬಂದುದಿಲ್ಲ. ದಿನಾಲು ಪಾರ್ಟಿಗಳು. "ನಮ್ಮ ಸ್ಥಾನ ಅಂಥಾದ್ದು ಪಾರ್ಟಿಗಳಿಗೆ ಹೋಗಬೇಕಾಗುತ್ತದೆ. ಹೋಗದಿದ್ದರೆ ಬುದ್ದುಗಳು ಅನ್ನಿಸಿಕೊಳ್ತೇವೆ. ನಮ್ಮ ಅನೇಕ ಕಾರ್ಯಗಳು ರೂಪ ತಳೆಯುವುದೇ ಪಾರ್ಟಿಗಳಲ್ಲಿ. ಅಲ್ಲಿ ದೊಡ್ಡ ದೊಡ್ಡ ಉದ್ಯಮಿಗಳು, ಅಧಿಕಾರಿಗಳು, ರಾಜಕಾರಣಿಗಳು ಪರಿಚಯವಾಗ್ತಾರೆ. ಕಾಂಟಾಕ್ಟ್ ಬೆಳೆಯುತ್ತೆ. ನಮ್ಮ ಕೆಲಸ ಆಗುತ್ತೆ . ಇಲ್ದೆ ಇದ್ದರೆ ನಾವು ಬೆಳೆಯೋಕಾಗಲ್ಲ" ಎಂದು ಅವನು ಪಾರ್ಟಿಗಳನ್ನು ಸಮರ್ಥಿಸಿಕೊಳ್ಳುತ್ತಿದ್ದ. ಅನಂತರ ಅವಳು ರಾತ್ರಿ ಊಟಕ್ಕೆ ಅವನಿಗಾಗಿ ಕಾಯುವುದನ್ನು ಬಿಟ್ಟಳು. ಒಬ್ಬಳೇ ಬದುಕುವುದನ್ನು ರೂಢಿಸಿಕೊಂಡಳು.

ಅವಳ ಗಂಡ ಕೆಟ್ಟವನೇನಲ್ಲ. ಅವನು ಕುಡಿದು ಬಂದರೂ ಎಂದೂ ಬಯ್ದವನಲ್ಲ; ಹೊಡೆದವನಲ್ಲ. ಅವಳ ಮೈ ಮೇಲೆ ಚಿನ್ನ; ಬೆಲೆ ಬಾಳುವ ಬಟ್ಟೆ ಇರುವುದನ್ನು ಆಸೆಪಡುತ್ತಿದ್ದ. ಹೆಣ್ಣಿಗಿನ್ನೇನು ಬೇಕು ? ಬಟ್ಟೆ ಬರೆ, ಒಡವೆ, ಆಸ್ತಿ ಪಾಸ್ತಿ ಅಷ್ಟೇ ತಾನೆ ? ಅದು ಅವನ ತಿಳಿವಳಿಕೆ. ಅದನ್ನ ಅವನು ನಿಷ್ಠೆಯಿಂದ ಪೂರೈಸುತ್ತಿದ್ದ. ಕೆಲಸಕ್ಕೆ ಸೇರಿದ ಕೇವಲ ನಾಲ್ಕೇ ವರ್ಷಕ್ಕೆ ಬೆಂಗಳೂರಿನ ಬಸವೇಶ್ವರ ನಗರದಲ್ಲಿ ಅರವತ್ತು-ನಲ್ವತ್ತರ ಸೈಟುಕೊಂಡಿದ್ದ. ಅದರಲ್ಲಿ

ಮೇಲೆ-ಕೆಳಗೆ ಎಲ್ಲಾ ಸೇರಿ ಇಪ್ಪತ್ತೊಂದು ಚದರ ಮನೆ ಕಟ್ಟಿಸಿದ್ದ. ಸಂಸಾರವನ್ನೂ ಈ ವರ್ಷದಿಂದ ಬೆಂಗಳೂರಿನಲ್ಲೇ ಹೂಡಲು ನಿರ್ಧರಿಸಿದ್ದ. ಹೊಸ ಸರ್ಕಾರ ಬಂದದ್ದರಿಂದ ಅಲ್ಲಿನ ರಾಜಕೀಯ ಶಕ್ತಿಗಳು ತನ್ನ ವರ್ಗಾವಣೆಗೆ ಒತ್ತಾಯ ಮಾಡುತ್ತಿವೆ. ಇಲಾಖೆ ಎಲ್ಲಿಗಾದರು ದೂರಕ್ಕೆ ಮಾಡುವ ಮೊದಲು ನಾವೇ ಬೆಂಗಳೂರಿಗೆ ಮಾಡಿಸಿಕೊಳ್ಳಬೇಕು ಎಂದು ಶರಣ್ ಜೊತೆ ಹೇಳುತ್ತಿದ್ದುದು ಅವಳಿಗೆ ಕೇಳಿಸಿತ್ತು.

ಅವಳು ಎಂದೂ ಅವನ ವೃತ್ತಿಯ ಬಗ್ಗೆ ಕೇಳಿದವಳಲ್ಲ. ಅವನು ತನ್ನ ಕೆಲಸದ ಬಗ್ಗೆ ಹೆಂಡತಿಯ ಜೊತೆ ಮಾತನಾಡಲು ಇಷ್ಟಪಡುತ್ತಿರಲಿಲ್ಲವೆಂದು ಅವಳಿಗೆ ಅವನ ವರ್ತನೆಯಿಂದ ಗೊತ್ತಾಗುತ್ತಿತ್ತು. ಹೆಂಡತಿಯೂ ಒಂದು ಸ್ಥಾನ; ಅವಳು ಸುಂದರವಾಗಿರಬೇಕು; ಆದರ್ಶ ಗೃಹಿಣಿಯಾಗಿರಬೇಕು; ಹೇಳಿದಂತೆ ಕೇಳುವವಳಾಗಿರಬೇಕು; ಅನಾವಶ್ಯಕವಾಗಿ ವ್ಯವಹಾರಗಳಲ್ಲಿ ಮೂಗುತೂರಿಸುವವಳಾಗಿರಬಾರದು- ಇವು ಅವನು ಬಯಸುವ ಪತ್ನಿಯ ಗುಣಗಳಾಗಿದ್ದವು. ಚಂದ್ರಿಕಾ ಒಮ್ಮೆ ಅಪ್ಪನ ಮನೆಗೆ ಬಂದಿದ್ದಾಗ ಅಣ್ಣ ಶರಣ್‌ನನ್ನು ಕೇಳಿದ್ದಳು : "ಅಣ್ಣ, ಅವರು ಕೆಲಸಕ್ಕೆ ಸೇರಿ ಇನ್ನು ನೆಟ್ಟಗೆ ಐದು ವರ್ಷ ಆಗಿಲ್ಲ. ಬಸವೇಶ್ವರ ನಗರದ ಸೈಟಿಗೆ ಅರವತ್ತು ಲಕ್ಷವಾಗಿದೆ. ಈಗ ಕಟ್ಟಿಸುತ್ತಿರೋ ಮನೆಗೆ ಏನಿಲ್ಲಾ ಅಂದರೂ ಐವತ್ತು ಲಕ್ಷ ಆಗಿರಬಹುದು. ಹಣ ಎಲ್ಲಿಂದ ಬರುತ್ತದೆ ? ಅವರಿಗೆ ಈಗ ಹದಿನೆಂಟು-ಇಪ್ಪತ್ತು ಸಾವಿರ ಬರಬಹುದು" ಆಗ ಶರಣ್ ತಂಗಿಯ ಮುಖ ನೋಡುತ್ತಾ "ಏನಿದು ನಿನ್ನ ತಲಹರಟೆ ?ಅದೆಲ್ಲಾ ನಿನಗ್ಯಾಕೆ ? ಅವನು ಗಂಡಸು. ಹೊರಗೆ ವ್ಯವಹಾರ ಮಾಡ್ತಾನೆ. ಕೈಯಲ್ಲಿ ಅಧಿಕಾರ ಇದೆ. ನಾಲ್ಕು ಕಾಸು ಸಂಪಾದನೆ ಆಗುತ್ತೆ. ಬ್ಯಾಂಕಿನಲ್ಲಿ ಸಾಲ ಮಾಡಿದ್ದಾನೆ. ಸೈಟು-ಮನೆ ಮಾಡಿದ್ದಾನೆ. ನೀನು ಸುಮ್ಮನೆ ಬಾಯ್ಮುಚ್ಚಿಕೊಂಡು ಸುಖವಾಗಿರೋದ್ನ ಕಲಿ" ಎಂದ.

"ಯಾಕ್ ರೇಗ್ತಿಯಾ ನೀನು ? ಹೆಂಡತಿಯಾಗಿ ನನ್ ಗಂಡನ ಸಂಪಾದನೆ ಬಗ್ಗೆ ತಿಳಕೊಂಡ್ರೆ ತಪ್ಪೇನು ?" ಎಂದಳು ಚಂದ್ರಿಕಾ.

"ಹೋಗು. ನನ್ನನ್ ಏನ್ ಕೇಳ್ತಿಯಾ ? ನಿನ್ ಗಂಡನ್ನೇ ಕೇಳು" ಎಂದು ಅಸಮಾಧಾನದಿಂದ ಶರಣ್ ಉತ್ತರಿಸಿದ.

ಚಂದ್ರಿಕಾಳಿಗೆ ಮೊದಲಿಂದಲೂ ಒಂದು ಸತ್ಯ ಗೊತ್ತಿತ್ತು. ಶರಣ್ ಮತ್ತು ಅವಳ ಗಂಡ ಸ್ನೇಹಿತರು ಅಂತ. ಅವನೇ ತಾನೇ ನನ್ನ ಮದುವೆಯನ್ನು ಇವರ ಜೊತೆ ನಿಂತು ಮಾಡಿಸಿದ್ದು, ಅಪ್ಪ ಅಮ್ಮರ ಮೇಲೆ ಒತ್ತಾಯ ತಂದಿದ್ದು. ತನ್ನ ಗಂಡನ ವ್ಯವಹಾರಗಳೆಲ್ಲಾ ಇವನಿಗೆಗೊತ್ತು. ಇವನೇ ಸೈಟ್ ಕೊಡಿಸಿದ್ದು, ಮನೆ ಕಟ್ಟಲು ಕಂಟ್ರಾಕ್ಟರ್ ಗೊತ್ತುಪಡಿಸಿದ್ದು. ಈಗ ಕೇಳಿದರೆ ರೇಗುತ್ತಾನೆ. ಚಂದ್ರಿಕಾ ಮುಂದೆ ಗಂಡನನ್ನು ಯಾವುದರ ಬಗ್ಗೆಯೂ ಏನನ್ನೂ ಕೇಳಲಿಲ್ಲ. ಅವಳು ಸಮಾಜಶಾಸ್ತ್ರ ಓದಿದ್ದಳು, ಮಹಿಳಾ ಸಾಹಿತ್ಯ ಓದಿದ್ದಳು. ಭಾರತೀಯ ಗೃಹಿಣಿಯ ಇತಿಮಿತಿಗಳನ್ನು ಗ್ರಹಿಸಿದ್ದಳು. ಒಮ್ಮೊಮ್ಮೆ ತನ್ನ ಹಣೆಯಲ್ಲಿ ಬರೆದಿರುವುದು ಹೀಗೇನೆ ಎಂದು ಅಸಹಾಯಕತೆಯ ಮೊರೆಹೋಗುತ್ತಿದ್ದಳು.

ಚಂದ್ರಶೇಖರ್ ಕೇವಲ ಐದು ವರ್ಷಗಳಲ್ಲೇ ಎಷ್ಟು ಬದಲಾಗಿದ್ದ ? ಮನೆಯಲ್ಲಿ ಹೆಚ್ಚು

ಮಾತನಾಡುತ್ತಿರಲಿಲ್ಲ. ಹೌದು, ಇಲ್ಲ, ಆಯ್ತು, ಸರಿ, ಬೇಕು, ಬೇಡ- ಇಂಥ ಎರಡಕ್ಷರದ ಮಾತುಗಳೇ ಜಾಸ್ತಿ. ಆಕಾರದಲ್ಲೂ ಅಷ್ಟೆ. ನೋಡು ನೋಡುತ್ತಲೇ ಅವನು ಮೊದಲಿಗಿಂತ ದಪ್ಪಗೆ, ಕುಳ್ಳಗೆ ಕಾಣಲಾರಂಭಿಸಿದ, ಅವನ ನಡು ದಪ್ಪವಾಗಿ ಬಾನಿಯಾಕಾರದಲ್ಲಿ ಅವನ ಹೊಟ್ಟೆ ಎದ್ದು ಕಾಣಲಾರಂಭಿಸಿತು. ತನ್ನ ಪಕ್ಕದಲ್ಲಿ ಮಲಗಿ ವಿಚಿತ್ರವಾಗಿ ಗೊರಕೆ ಶಬ್ದ ಹೊರಡಿಸುತ್ತಿದ್ದ ಅವನನ್ನು ನೋಡಿ ಅವಳು ನಿಶ್ಯಬ್ದವಾಗಿ ನಗುವುದನ್ನು ಕಲಿತಿದ್ದಳು ; ತನ್ನೊಳಗೇ ಮಾತನಾಡುವುದನ್ನು ಕಲಿತಿದ್ದಳು. ಆತ್ಮ ಸಾಂಗತ್ಯಕ್ಕೆ ಪುಸ್ತಕಗಳು ಸೃಷ್ಟಿಸುತ್ತಿದ್ದ ಜಗತ್ತು ಸದಾ ಅವಳ ಮನದಲ್ಲಿ ಜೀವಂತವಾಗಿತ್ತು.

ಅವಳ ವೈಚಾರಿಕ ಮನಸ್ಸು ಅವಳನ್ನು ಆಗಾಗ್ಗೆ ಎಚ್ಚರಿಸುತ್ತಿತ್ತು; 'ನೀನು ಭ್ರಮಾತ್ಮಕ ಬದುಕಿನಲ್ಲಿ ಜೀವಿಸುತ್ತಿರುವೆ. ಅನುಕೂಲಗಳನ್ನೇ ಸುಖವೆಂದು ಕೊಂಡಿರುವೆ. ಪುಸ್ತಕಗಳು ಸೃಷ್ಟಿ ಮಾಡುವ ಬದುಕು ವಾಸ್ತವಲ್ಲ. ಅದು ವಾಸ್ತವಾಗಬೇಕಾದರೆ ನೀನೂ ವಾಸ್ತವಕ್ಕೆ ಬಂದು ಬದುಕನ್ನು ಕಾಣಬೇಕಾಗಿದೆ. ಪುಸ್ತಕದ ಭ್ರಾಮಕ ಜಗತ್ತು ಭ್ರಮೆಯಾಗಿಯೇ ಕನಸಾಗಿಯೇ ಉಳಿದು ಬಿಡುತ್ತೆ. ಹೊರಗೆ ಬಾ.... ನಿನ್ನೊಳಗೆ ಖಾಲಿಯಾಗಿರುವ ಏನನ್ನೋ ಹುಡುಕು......ಅದನ್ನು ತುಂಬಿಕೊ'. ಆ ಮಾತುಗಳು ಅವಳಿಗೆ ಅರ್ಥವಾಗುತ್ತಿದ್ದವು. ಆದರೆ ಅನುಕೂಲಗಳು ತಂದು ಕೊಟ್ಟಿರುವ ಭೌತಿಕ ಸುಖ, ಸಮಾಜ ತಂದುಕೊಟ್ಟಿರುವ ಸಾಮಾಜಿಕ ಸುಖ ಇವನ್ನು ಬಿಟ್ಟು ಹೊರಬರುವುದು ಹೇಗೆ ? ಪುಸ್ತಕದ ಜಗತ್ತಿಗಿಂತ ಹೊರ ಜಗತ್ತು ಅತ್ಯಂತ ಕಟುವಾಗಿರುವುದು ಅವಳಿಗೆ ಗೊತ್ತಿತ್ತು. ಅದನ್ನು ಎದುರಿಸುವ ಎದೆಗಾರಿಕೆ ತನ್ನಲ್ಲಿದೆಯೇ ಎಂದು ಪ್ರಶ್ನಿಸಿಕೊಂಡು ಉತ್ತರ ಕಂಡುಕೊಳ್ಳಲು ವಿಫಲವಾಗಿದ್ದಳು.

ಬೆಳ್ಳಿ ಏಕೋ ಕಿಟಕಿಯ ಹೊರಗಡೆ ನೋಡಿ ತನ್ನ ಕೀರಲು ದನಿಯಿಂದ 'ಬೊವ್ ವವೌ'.... ಎಂದಿತು. ಚಂದ್ರಿಕಾ ಬೆಚ್ಚಿದಳು. ತಾನು ಯಾವ ಯೋಚನೆಯಲ್ಲಿ ಮುಳುಗಿದ್ದೆ ? ಈಗ ಇವೆಲ್ಲಾ ನೆನೆಪುಗಳು ಏಕೆ ?ಒಮ್ಮೆ ತನ್ನ ಮೈಮುರಿದು ಲವಲವಿಕೆ ಬರಿಸುಕೊಳ್ಳುವಂತೆ ಮನಸ್ಸಿಗೆ ಸೂಚನೆ ಕೊಟ್ಟಳು.

ಭೂಮಿಗೌಡ ಅವಳನ್ನು ಕುರಿತು "ಹೊರಗೆ ಯಾರೋ ಒಂದು ನಾಯಿಯನ್ನು ಹಿಡಿದುಕೊಂಡು ಹೋಗುತ್ತಿದ್ದಾರೆ. ಅದೂ ಪೊಮೇರಿಯನ್. ಸ್ವಜಾತಿ ಪ್ರೇಮವೋ ದ್ವೇಷವೋ ಏನೋ ಇರಬೇಕು. ಮಲಗಿ ನಿದ್ದೆ ಮಾಡುತ್ತಿದ್ದುದು, ಅದನ್ನು ಹೇಗೋ ಗುರುತಿಸಿ, ಕಿಟಕಿಯಿಂದ ತನ್ನ ಅಭಿಪ್ರಾಯವನ್ನು ಸೂಚಿಸಿತು" ಎಂದ.

ಅವಳು ಯಾವ ಮುಜುಗರವೂ ಇಲ್ಲದೆ ಅವನನ್ನೂ ನೋಡಿದಳು. ಅವನು ಅವಳಿಗೆ ತೀರಾ ಹತ್ತಿರದವನಂತೆ ಕಂಡ. ಹೌದೆ ? ಅವನು ತನ್ನ ಬಂಧುವಲ್ಲ, ಸ್ನೇಹಿತನಲ್ಲ, ತನ್ನ ಜಾತಿಯವನಲ್ಲ. ಅವಳಿಗೆ ಜಾತಿ ಬಗ್ಗೆ ಅಪಾರವಾದ ಶ್ರದ್ಧೆಯೇನು ಇರಲಿಲ್ಲ. ಅದೊಂದು ಹುಸಿಮೌಲ್ಯವೆಂದು ಅವಳು ನಂಬಿದ್ದಳು. ಸಾಂಪ್ರದಾಯಿಕ ಕುಟುಂಬದಲ್ಲಿ ಜನಿಸಿದ್ದ ಅವಳು ಪ್ರತಿಭಟಿಸುವ, ಪ್ರಶ್ನಿಸುವ ಗೋಜಿಗೆ ಹೋಗಿರಲಿಲ್ಲ ಅಥವಾ ಅವಳಿಗೆ ಅಂಥ ಸಂದರ್ಭಗಳೇ

ಸೃಷ್ಟಿಯಾಗಿರಲಿಲ್ಲ.

ಇದ್ದಕ್ಕಿದಂತೆ ಅವಳಿಗೆ ತನ್ನ ವರ್ತನೆಯಲ್ಲಿ ಆಗಿರುವ ಬದಲಾವಣೆ ಗಮನಕ್ಕೆ ಬಂದಿತು. ಬಹಳ ದಿನಗಳ ನಂತರ ತಾನು ಹೆಚ್ಚು ಮಾತನಾಡುತ್ತಿದ್ದೇನೆ. ಆಶ್ಚರ್ಯ! ಹೌದು, ನಾನು ಮತ್ತೆ ನಿರುಮ್ಮಳವಾಗಿ ಮಾತನಾಡುತ್ತಿದ್ದೇನೆ. ಅಷ್ಟೇ ಅಲ್ಲ. ಮಾತನಾಡಬೇಕು ಅನಿಸುತ್ತಿದೆ. ಮತ್ತೊಂದು ಅಂಶ - ನನ್ನ ವರ್ತನೆಯನ್ನು ಕುರಿತದ್ದು. ತಾನು ಅವನು ಅಜ್ಜಿಕೊಂಡು ತಿಂದ ಚಟ್ನಿಯ ಬಟ್ಟಲಲ್ಲೇ ಬಜ್ಜಿಯನ್ನು ಅಜ್ಜಿಕೊಂಡು ತಿನ್ನುವ ಅವಶ್ಯಕತೆ ಏನಿತ್ತು ?ಅಣ್ಣ ಗಮನಿಸಿದ್ದರೆ, ಏನೆಂದು ಕೊಂಡಿದ್ದಾನೋ ? ಈಗ, ಇಲ್ಲಿ, ಈ ಸುಮೊದಲ್ಲಿ ತಾನು ಅಣ್ಣನ ಜೊತೆಯಲ್ಲೇ ಕುಳಿತು ಕೊಳ್ಳಬಹುದಿತ್ತು. ತಾನೇಕೆ ಹಿಂದುಗಡೆ ಈ ಅಪರಿಚಿತ ಭೂಮಿಗೌಡನ ಜೊತೆ ಎದುರು ಕುಳಿತುಕೊಳ್ಳಬೇಕಿತ್ತು ? ನಿಜಕ್ಕೂ ಬೆಳ್ಳಿ ಕಾರಣವೇ ? ಒಂದು ನೆಪವೇ ? ಚಂದ್ರಿಕಾ ತನ್ನ ಮನದಾಳವನ್ನು ತಡಕಾಡುವ ಪ್ರಯತ್ನವನ್ನೂ ಮಾಡಿದಳು.

ಚಂದ್ರಿಕಾ ಕಣ್ಣು ಮುಚ್ಚಿದಳು. ಅಲ್ಲಿ ತನ್ನ ಮಗ ಶೋಭಿತ್ ಕಂಡ; ಗಂಡ ಕಂಡ- ಅವಳಿಗೆ ಕಸಿವಿಸಿಯಾಯಿತು. ಬಾಯಾರಿಕೆ ಆದಂತೆ ಭಾಸ. ಕಣ್ಣು ತೆರೆದು ತನ್ನ ವ್ಯಾನಿಟಿಬ್ಯಾಗಿನಿಂದ ನೀರಿನ ಬಾಟಲನ್ನು ತೆಗೆದು ಸ್ವಲ್ಪ ಕುಡಿದಳು. ಎದುರು ಕುಳಿತಿದ್ದ ಭೂಮಿಗೌಡನನ್ನು ಕುರಿತು "ನೀರು ಬೇಕೆ ?" ಎಂದು ಕೇಳಿದಳು. ಅವನು ಬೇಡವೆನ್ನಲಿಲ್ಲ. ಅದರ ಬದಲು ತನ್ನ ಕೈ ನೀಡಿ ಬಾಟಲನ್ನು ತೆಗೆದುಕೊಂಡು ನೀರು ಕುಡಿದು ಅವಳಿಗೆ ಬಾಟಲನ್ನು ವಾಪಸ್ಸು ನೀಡಿ "ಥ್ಯಾಂಕ್ಸ್" ಎಂದ. "ಥ್ಯಾಂಕ್ಸ್ ಏಕೆ ?" ಎಂದಳು ಅವಳು. ಅವನು ಅವಳನ್ನೇ ನೋಡಿ ಸುಮ್ಮನೆ ನಕ್ಕ.

ಚಂದ್ರಿಕಾ ಗಡಿಯಾರ ನೋಡಿ "ಒಂಬತ್ತೂ ನಲವತ್ತಾಯ್ತು. ಎಲ್ಲಿ ಹೋದರು ಈ ರೆಡ್ಡಿ. ಅಣ್ಣ ಸ್ವಲ್ಪ ನೋಡು ಲೇಟಾಗ್ತಿದೆ" ಎಂದು ಶರಣ್‌ನನ್ನು ಕುರಿತು ಹೇಳಿದಳು. ಶರಣ್ ತಾನೂ ಗಡಿಯಾರ ನೋಡಿ "ಮಹೇಶ, ಇವನ್ನೆಲ್ಲಿ ಹೋದ ? ಐದು ನಿಮಿಷ ಅಂತ ಹೋದೋನು ಮುಕ್ಕಾಲು ಗಂಟೆ ಆಯ್ತು. ಇನ್ನೂ ಬಂದಿಲ್ಲ. ಎಲ್ಲಾದರೂ ಗುಂಡು ಗಿಂಡು ಹಾಕ್ಕೊಂಡು ಕುಂತನೋ" ಎಂದ. ಮಹೇಶ ತಾನು ಕೂತಲ್ಲಿಯೇ ಮಿಸುಕಾಡಿದ. ಅವನ ಮುಖದಲ್ಲಿ ಗೆಲುವಿರಲಿಲ್ಲ. ಪ್ರಯಾಸದಿಂದ ಮಾತನಾಡುತ್ತಿರುವವನಂತೆ "ಎಲ್ಲಿ ಹಾಳಾಗಿ ಹೋದನೋ, ಬಡ್ಡೀಮಗ" ಎಂದನು.

ಅಷ್ಟರಲ್ಲಿ ಎಲ್ಲಿಂದಲೋ ಮೂಡಿಬಂದವನಂತೆ ಬಂದ ರೆಡ್ಡಿ ಪ್ರತ್ಯಕ್ಷನಾದ. ಡ್ರೈವರ್ ಸೀಟಿನಲ್ಲಿ ಕುಳಿತು ತನ್ನ ಕಡೆ ಪ್ರಶ್ನಾರ್ಥಕವಾಗಿ ನೋಡುತ್ತಿದ್ದ ಮಹೇಶನನ್ನು ಒಮ್ಮೆ ನೋಡಿ ಗಾಡಿಯನ್ನು ಸ್ಟಾರ್ಟ್ ಮಾಡಿದ.

## ಅಧ್ಯಾಯ : ಹನ್ನೆರಡು

ಸುಮೊವನ್ನು ಹೆದ್ದಾರಿಗೆ ತಂದವನು ರಸ್ತೆಯ ಮೇಲೆ ಗಮನವಿಟ್ಟು ರೆಡ್ಡಿ ಡ್ರೈವ್ ಮಾಡತೊಡಗಿದ. ಅವಸರಬೇಡ, ಇನ್ನೂಬೇಕಾದಷ್ಟು ಟೈಮಿದೆ. ಅವನಿಗೆ ಗೊತ್ತು : ಗಾಡಿಯಲ್ಲಿ ಕೂತವರ ತಳಮಳ. ಒಬ್ಬೊಬ್ಬರಿಗೆ ಒಂದೊಂದು ತರಹ. ಚಂದ್ರಿಕಾ ಬೇಗನೆ ಅಮ್ಮನ ಮನೆ ಸೇರಬೇಕು;ಮಗ ಕಾಯ್ತಾ ಇರ್ತಾನೆ. ಶರಣ್ ತಂಗಿಯಿರುವ ಕಾರಣ ಆತುರ ತೋರ್‍ತಾನೆ. ಇಲ್ಲದಿದ್ದರೆ ಸುಮ್ಮನೆ ಇರ್ತಿದ್ದ. ಅದಕ್ಕೂ ಎಂದು ತಾನೆ ಮಧ್ಯರಾತ್ರಿಗೆ ಮುನ್ನ ಮನೆಗೆ ಹೋಗ್ತಿದ್ದ. ಅವನ ತಂಗಿ ನಮ್ಮ ಜೊತೆ ಬರುವುದು ತನಗೆ ಇಷ್ಟ ಇರಲಿಲ್ಲ. ಆದರೆ 'ಹೆಂಗಿದ್ದರೂ ಮೈಸೂರಿಗೆ ಹೋಗ್ತಾ ಇದ್ದೀವಿ. ಅವಳೂ ಬರ್‍ತಾಳೆ. ಕರ್‍ಕೊಂಡು ಹೋಗೋಣ' ಅಂತ ಅವನು ಹೇಳಿದಾಗ ಬೇಡ ಅನ್ನೋದು ಹೇಗೆ ? ಅಲ್ಲದೆ, ಅವಳು ಅಪರಿಚಿತಳೇನಲ್ಲ. ಕನಕಪುರದಲ್ಲಿ ನಾಲ್ಕಾರು ಬಾರಿ ಅವರ ಮನೆಗೆ ಹೋಗಿದ್ದೇನೆ. ಟೀಕಾಫಿ ಅಂತ ಕೊಟ್ಟಿದ್ದಾಳೆ. ಆ ಕಿರಾತ ಚಂದ್ರಶೇಖರನ ಹೆಂಡತಿ ಬೇರೆ !

ಕನಕಪುರ ರಾಮಗನರದ ಹಾಗೆಯೇ ಗಣಿ ಮಾಡುವವರ ಸ್ವರ್ಗ. ಅಗೆದ ಕಡೆ ಚಿನ್ನ ಸಿಗುತ್ತದೆ. ಚಿನ್ನದಂಥ ಭೂಮಿಯನ್ನು ಕರಾಬು ಜಮೀನು ಎಂದೋ ಮತ್ತೊಂದೋ ಕಾರಣ ನೀಡಿ ದಾಖಲೆ ನಿರ್ಮಿಸುವುದರಲ್ಲಿ ಈ ಚಂದ್ರಿಕಾಳ ಗಂಡ ನಿಸ್ಸೀಮ. ಆದರೆ ಅವನ ಬೇಡಿಕೆ ಮಾತ್ರ ಅಪಾರ. ಬರಿ ಹಣವೊಂದೆ ಸಾಲುತ್ತಿರಲಿಲ್ಲ. ವಿದೇಶಿ ಮದ್ಯ ಅವನ ಪ್ರೀತಿಯ ದಾಹ ! ಬಡ್ಡಿ ಮಗ! ಮನೆಯಲ್ಲಿ ಚಿನ್ನದಂಥ ಹೆಂಡತಿ ಇದ್ದರೂ ಹೆಣ್ಣುಗಳ ವ್ಯಾಮೋಹ ಕಡಿಮೆಯಿಲ್ಲ. ಈ ವಿಚಾರ ಶರಣ್‌ಗೆ ಗೊತ್ತಿರಲಿಲ್ಲವೆಂದಲ್ಲ. ಗೊತ್ತಿದ್ದು ಸುಮ್ಮನಿದ್ದ . ಹಣದ ವಿಚಾರದಲ್ಲಿ ಬಾವ ಬಾಮೈದ ಎಲ್ಲಾ' ಒಂದೇ. ಇವೆಲ್ಲಾ ಬದುಕಲು ಅನಿವಾರ್ಯ ಆಟಗಳು ಎಂದು ತಿಳಿದಿದ್ದರು ಅಂತ ಕಾಣುತ್ತದೆ. ಈಗ ತಾನು ಮಾಡುತ್ತಿರುವುದು ಏನನ್ನು ? ಅದೇ ಆಟ ! ಮತ್ತೊಂದು ಬಗೆಯ ಆಟ !

ಆದರೆ ಈ ಮೈಸೂರಿನ ಟ್ರಿಪ್‌ನಲ್ಲಿ ಚಂದ್ರಿಕಾ ಒಂದು ತಡೆ. ಅವಳು ಬೇಕಿರಲಿಲ್ಲ. ಜೊತೆಗೆ ರಾಮನಗರದಲ್ಲಿ ಈ ಪ್ರೊಫೆಸರ್ ಬೇರೆ ತಗುಲಿಹಾಕಿಕೊಂಡ. ನೋಡಲು ಸರಳವಾಗಿ ಕಂಡರೂ ಸರಳನಲ್ಲ, ಗಟ್ಟಿಮುಟ್ಟಾಗಿದ್ದಾನೆ. ಅವನ ಮುಖ ನೋಡಿ ಅವನನ್ನು 'ಹಿಂಗೆ ಇವನು' ಅಂತ ಹೇಳೋಕ್ಕಾಗಲ್ಲ. ಅದೇನೋ ಜಿಯಾಲಜಿ ಮೇಷ್ಟ್ರಂತೆ. ಕಲ್ಲಿನ ಬಗ್ಗೆ ಚೆನ್ನಾಗಿ ತಿಳಿದು ಕೊಂಡಿರುವಂತೆ ತೋರುತ್ತಾನೆ. 'ನಾವೆಲ್ಲ ಒಂದೇ ವೃತ್ತಿಯವರು' ಅಂತ ಬೇರೆ ಹೇಳ್ತಾನೆ. ಹೌದು ವೃತ್ತಿ ಒಂದೇ. ಭೂಮಿಯೇ ನಮ್ಮ ಜೀವನಾಧಾರ. ಅವನು ಅದನ್ನು ಅಧ್ಯಯನ ಮಾಡ್ತಾನೆ; ಅದರ ಬಗ್ಗೆ ಪಾಠ ಮಾಡ್ತಾನೆ. ನಾವು ಅದನ್ನು ಸೀಳಿ ಮಾರಾಟ ಮಾಡ್ತೇವೆ. ಶರಣ್, ಬಸಂತಕುಮಾರ್. ಚಂದ್ರಶೇಖರ್, ಇಂಥವರು ನಮಗೆ ಸಹಾಯ ಮಾಡ್ತಾರೆ. ಈ

ಪ್ರೊಫೆಸರ್‌ಗೆ ಬಸಂತಕುಮಾರ್ ಫ್ರೆಂಡಂತೆ ! ಕರೆದು ಕೊಂಡು ಹೋಗಿ ಅಂತ ಅವನು ಹೇಳಿದಾಗ ಇಲ್ಲಾ ಅಂತ ಹೇಗೆ ಹೇಳೋದು ? ಆಯ್ತು ಅಂದದ್ದಾಯಿತು. ಈಗ ಈ ಟ್ರಿಪ್‌ನಲ್ಲಿ ಇವನು ಮತ್ತೊಂದು ತಡೆ - ಚಂದ್ರಿಕಾಳನ್ನು ಹೇಗಾದರೂ ನಿಭಾಯಿಸಬಹುದು; ಇವನು ಅಷ್ಟು ಸರಳನಲ್ಲ; ಇವನನ್ನು ನಿಭಾಯಿಸುವುದು ಕಷ್ಟ. ಇದೆಂಥ ಕಾಕತಾಳೀಯ, ಎಂಥ ವಿಪರ್ಯಾಸ. ಈ ಪ್ರೊಫೆಸರ್ ನಾವು ಕೆಲಸ ಮಾಡುವ ಕಾರ್ಯಕ್ಷೇತ್ರದಲ್ಲೇ ಹುಟ್ಟಿಬೆಳೆದಿದ್ದಾನೆ. ಆ ಪ್ರದೇಶದ ಎಲ್ಲ ಸೂಕ್ಷ್ಮಗಳು ಇವನಿಗೆ ಗೊತ್ತಿರುವಂತೆ ಕಾಣುತ್ತದೆ. ಇವನಿಗೆ ಪೀಕೆ ಬಗ್ಗೆ ತಿಳಿವಳಿಕೆ ಇರುತ್ತದೆ. ಅವನ ವ್ಯವಹಾರ, ಅವನು ನಡೆಸುವ ಚಟುವಟಿಕೆ ಸೂಕ್ಷ್ಮವಾಗಿ ಅಲ್ಲದಿದ್ದರೂ ಸ್ಥೂಲವಾಗಿಯಾದರೂ ಗೊತ್ತಿರುತ್ತದೆ. ಈ ಮಹೇಶ ಅವನ ತಮ್ಮ ಅಂತ ಬೇರೆ ಈಗ ಗೊತ್ತಾಗಿದೆ.

ಪೀಕೆ ತಮ್ಮ ಮಹೇಶ, ಗಣಿ ಅಧಿಕಾರಿ ಶರಣ್, ಕಲ್ಲು ವ್ಯಾಪಾರಿಯಾದ ತಾನು ಜೊತೆಯಾಗಿದ್ದಾರೆ ಅಂದರೆ ಏನೋ ವ್ಯವಹಾರವಿದೆ ಎಂದು ಎಂಥವರಿಗೂ ಗೊತ್ತಾಗುತ್ತದೆ. ಇನ್ನು ಈ ಪ್ರೊಫೆಸರ್‌ಗೆ ಹೊಳೆಯುವುದಿಲ್ಲವೆ ? 'ಏನ್ ವ್ಯವಹಾರ' ಅಂತ. ಅದೇನು ಕೆಟ್ಟ ಕುತೂಹಲ ಅಲ್ಲ. ಯಾರ್ ಬೇಕಾದರೂ ಕೇಳ್ತಾರೆ. ಉತ್ತರ ನೀಡಿಯೂ ಆಯ್ತು. ಇತ್ತರ ಸುಳ್ಳೂ ಅಲ್ಲ.

ಈ ಮಹೇಶ ಬೇರೆ ಗುರುಗುರು ಅಂತಾ ಅವನೆ. ಏಕೋ ಎದೆ ಒತ್ತುತಾ ಇದೆ. ಸಂಕಟವಾಗ್ತಿದೆ ಅಂತಾ ಅವನೆ. ಆಗಲೇ ಬೇಕು ನನ್ಮಗನಿಗೆ! ತಿನ್ನೋದು ಕಡಿಮೇನಾ! ಅಣ್ಣ ಹೊಟ್ಟೆಗೆ ತಿನ್ನೋದರಲ್ಲಿ ಹುಷಾರು, ಆದರೆ ಈ ಮಹೇಶ ಹೊಟ್ಟೇಗೂ ತಿಂತಾನೆ, ದುಡ್ಡನ್ನು ತಿಂತಾನೆ. ತಿನ್ನೊದ್ರಲ್ಲಿ ಮುಖಮೋರೆ ನೋಡೋದಿಲ್ಲ. ಇವನ ಈ ತಿನ್ನುವ ಚಟದಿಂದಲೇ ಈ ಸ್ಥಿತಿಗೆ ಬಂದು ಕುಂತವನೆ. ಇವನು ತನಗೆ ಪರಿಚಯವಾಗಿ ಹತ್ತು ವರ್ಷವಾಗಿರಬೇಕು. ಮಾತು ಸ್ವಲ್ಪ ಕಡಿಮೇನೆ. ಆದರೆ ಕೆಲಸದಲ್ಲಿ ಅಣ್ಣನಿಗೆ ತಕ್ಕ ತಮ್ಮ. ಲಕ್ಷ್ಮಣ ಇದ್ದ ಹಾಗೆ. ಅಣ್ಣ ಹೇಳಿದ್ದನ್ನು ಶಿರಸಾವಹಿಸಿ ಜಾರಿಗೆ ತರುವುದು ಇವನ ಕೆಲಸ! ಆದರೆ ಅಣ್ಣನಿಗಿಲ್ಲದ ಕೆಲವು ದೌರ್ಬಲ್ಯಗಳು ಇವನಿಗಿವೆ. ಹೆಣ್ಣು ಇವನಿಗೆ ಅತ್ಯಂತ ಪ್ರಿಯವಾದ ವಸ್ತು; ಬೆಲೆಬಾಳುವ ಮಧ್ಯ ಇರಲೇಬೇಕು. ಜೊತೆಗೆ ತನ್ನ ಸಹವಾಸಕ್ಕೆ ಬಿದ್ದ ಮೇಲೆ - ಬೆಂಗಳೂರಿನ ಅದ್ದೂರಿ ಶ್ರೀಮಂತ ಜೂಜುಕಟ್ಟೆಯಲ್ಲಿ ಆಟವಾಡುವುದು. ಬಡ್ಡಿಮಗನಿಗೆ ಆಟದಲ್ಲಿ ಹುಷಾಗಿರಬೇಕು ಅಂತಾ ಗೊತ್ತಾಗುವುದೇ ಇಲ್ಲ. ಸೋಲ್ತಾನೆ ಇರ್ತಾನೆ. ಸೋತು ಸೋತು ಬೇಸರವಾಗಿ, ಅದನ್ನೂ ನೀಗಲು ಕುಡಿಯೋದು-ರಾತ್ರಿ ವೇಳೆ ಹುಡುಗೀರ ಜೊತೆ ಮಲಗೋದು. ಮಹೇಶನ ಈ ದೌರ್ಬಲ್ಯದ ಬಗ್ಗೆ ತನ್ನೊಡನೆ ಒಂದು ದಿನ ಅಪ್ಪ "ನೋಡು ಮಗನೆ, ಈ ಮಹೇಶನನ್ನು ಯಾವಾಗಲೂ ಅಂತರಂಗದ ವ್ಯಕ್ತಿಯಂತೆ ನೋಡಿಕೋ. ಪೀಕೆ ಮ್ಯಾಲೆ ನಮಗಿರುವ ಹಿಡಿತ ಇವನೊಬ್ಬನೇ. ವ್ಯವಹಾರದಲ್ಲಿ ಅವರು ಎಷ್ಟೇ ಆತ್ಮೀಯರೇ ಆಗಿರಲಿ, ಅವರ ದೌರ್ಬಲ್ಯಗಳನ್ನು ಮೊದಲು ನಾವು ಗುರುತಿಸಬೇಕು ಮತ್ತು ಅವನ್ನು ನಾವು ನೀರೆರೆದು ಬೆಳೆಸಬೇಕು. ಮಹೇಶ ಪೀಕೆಯ ವೀಕ್‌ಪಾಯಿಂಟ್. ತಮ್ಮನ ಎಲ್ಲ ವೀಕ್‌ನೆಸ್‌ಗಳು ಗೊತ್ತಿದ್ದರೂ ಅದನ್ನು ತಡೆಯಲು ಪೀಕೆ ಪ್ರಯತ್ನಿಸಿಲ್ಲ ಏಕೆ ?

ಯೋಚಿಸು. ಅದಕ್ಕೆ ಎರಡು ಮೂರು ಕಾರಣ ಇರಬಹುದು. ಮೊದಲನೆಯದು ಅವನು ತಮ್ಮ. ರಕ್ತ ನೋಡು ಅದರ ಪ್ರೀತಿ, ವ್ಯಾಮೋಹ ಎಲ್ಲವನ್ನು ಕ್ಷಮಿಸಿಬಿಡುತ್ತೆ. ಎರಡನೆಯದು, ಪೀಕೆ ವ್ಯವಹಾರಸ್ಥ. ಅವನು ಏನು ಮಾಡಿದರೂ ಅಲ್ಲಿ ವ್ಯವಹಾರ ಇರುತ್ತೆ! ತಮ್ಮ ತನ್ನ ದೌರ್ಬಲ್ಯಗಳಿಂದ ನಾಶವಾದರೆ ಲಾಭ ಪೀಕೆಗೇನೆ. ಅರ್ಥಮಾಡಿಕೋ. ಮೂರನೆಯದು, ಪೀಕೆ ಕಣ್ಣಿಗೆ ಕಾಣದ ವ್ಯವಹಾರದಲ್ಲಿ ಎಂದೂ ನೇರವಾಗಿ ಭಾಗವಹಿಸಿಲ್ಲ. ಅಂದರೆ ಕತ್ತಲೆ ದಂದೆಯ ವಿಚಾರ. ವ್ಯವಹಾರದಲ್ಲಿ ನಿನಗೂಗೊತ್ತು : ಬ್ಲಾಕೂ ಇದೆ ವೈಟೂ ಇದೆ. ಬರೀ ವೈಟ್ನಲ್ಲಿ ಉದ್ಧಾರ ಆಗೋಕ್ಕೆ ಆಗಲ್ಲ. ಪೀಕೆ ತನ್ನೆಲ್ಲ ಬ್ಲಾಕ್ ವ್ಯವಹಾರನ ತಮ್ಮನ ಮೂಲಕ ಮಾಡ್ಸಿದ್ದಾನೆ. ಮಹೇಶ ಪೀಕೆಗೆ ಒಂದು ರೀತಿಯ ಶೀಲ್ಡ್, ರಕ್ಷಾಕವಚ! ಏಟು ಬಿದ್ದರೆ ಮಹೇಶನಿಗೆ ಬೀಳುತ್ತದೆ. ಪೀಕೆ ಬಚಾವಾಗುತ್ತಾನೆ"- ಎಂದು ಹೇಳಿದ್ದ. ಅಪ್ಪನ ರಕ್ತದಲ್ಲಿ ವ್ಯವಹಾರ ಹುಟ್ಟುತ್ತಲೇ ಬಂದಿತ್ತು. ಅಪ್ಪನ ಮಾತನ್ನು ಇವನು ಪಾಲಿಸಿದ್ದ. ಮಹೇಶನಿಗೆ ಹೊಸದಾಗಿ ಏನನ್ನೂ ಹೇಳಿಕೊಡಬೇಕಿರಲಿಲ್ಲ. ತನಗೆ ಪರಿಚಯವಾಗುವ ಹೊತ್ತಿಗೆ ಎಲ್ಲ ಗುಣಗಳೂ ಇದ್ದವು. ತಾನು ಅವನ್ನು ಚೆನ್ನಾಗಿ ಬೆಳೆಸಿದ್ದ. ಒಳ್ಳೊಳ್ಳೆ ಹೋಟೆಲ್ಲುಗಳು, ರೆಸಾರ್ಟುಗಳು, ಕತ್ತಲಲ್ಲಿ ನಡೆಯುವ ಬೆತ್ತಲೆ ಪಾರ್ಟಿಗಳು, ಜೂಜು ಕಟ್ಟೆಗಳು. ಕಳೆಯುತ್ತಲೇ ಬಂದ. 'ಕೂತು ಉಂಡ್ರೆ ಕುಡಿಕೆ ಹಣಾನೂ ಸಾಲದು' ಅನ್ನುವಂತೆ ಕೈಬರಿದಾಗುತ್ತಾ ಬರುತ್ತಿತ್ತು. ದುಡ್ಡನ್ನು ಅಣ್ಣನ ಬಳಿ ಕೇಳುವಂತಿರಲಿಲ್ಲ. ದುಡ್ಡು ಏನಾಯ್ತು ? ಏನಕ್ಕೆ ಖರ್ಚು ಮಾಡ್ದೆ ? ಅಂತ ಕೇಳಿದರೆ ಏನೆಂದು ಉತ್ತರ ಕೊಡೋದು ? ಪೀಕೆ ತಮ್ಮನಿಗಂತಾನೆ ಒಂದೆರಡು ಗಣಿಗಳನ್ನು ವಹಿಸಿದ್ದ. ಅದೂ ಒಳ್ಳೇ ಬ್ಲಾಕ್‌ಸ್ಟೋನ್ ಸಿಗುವಂಥ ಗಣಿಗಳು. ಆದರೆ ಬಂದ ಲಾಭವೆಲ್ಲಾ ರಾತ್ರಿ ವೇಳೆ ಕಳೆದು ಹೋಗುತ್ತಿತ್ತು. 'ಮುಂದಿನ ಲೋಡ್‌ಗೆ ವಜಾ ಹಾಕ್ಕೊ' ಅಂತಾ ತನ್ನ ಬಳಿ ಹಣ ಕೇಳುತ್ತಿದ್ದ. ತಾನು ನೀಡುತ್ತಿದ್ದೆ. ವ್ಯವಹಾರ ಚೆನ್ನಾಗಿ ನಡೆಯುತ್ತಿದ್ದಾಗ ಹೇಗೋ ಹಣ ಹೊಂದಿಕೆಯಾಗುತ್ತಿತ್ತು. ಅಣ್ಣನ ಲೆಕ್ಕದಲ್ಲೂ ಒಂದೆರಡು ಲೋಡ್‌ಗಳು ಏರುಪೇರು ಮಾಡಲಾಗುತ್ತಿತ್ತು. ಅಂತೂ ನಡೆಯುತ್ತಿತ್ತು. ಆದರೆ ಈಗ ಎಲ್ಲವೂ ಬದಲಾಗಿದೆ. ಹೊಸ ಸರಕಾರ ಗಣಿಗಾರಿಕೆ ನಿಷೇದಿಸಿದೆ. ಪೀಕೆ ಹುಷಾರಾಗಿದ್ದಾನೆ. ಗಣಿಗಾರಿಕೆಯನ್ನು ಸಂಪೂರ್ಣವಾಗಿ ನಿಲ್ಲಿಸಿದ್ದಾನೆ. ಗಣಿಗಾರಿಕೆ ಮಾಡಬೇಡ ಅಂತ ತಮ್ಮನಿಗೂ ಎಚ್ಚರಿಕೆ ಕೊಟ್ಟಿದ್ದಾನೆ. ಆದರೆ ಮಹೇಶ ಆಸೆಗಳನ್ನು ಕಟ್ಟಿಹಾಕುವುದು ಹೇಗೆ ? ಅದಕ್ಕೆ ಜಲ್ಲಿ, ಸೈಜುಗಲ್ಲು, ಬೋಲ್ಡರ್ಸ್ ಹೊಡೆಯುವ ಲೈಸನ್ಸ್‌ಲ್ಲಿ ಕರಿಕಲ್ಲು ಸಾಗಿಸುವ ವ್ಯವಹಾರ ನಡೆಯುತ್ತಿತ್ತು. ಕ್ವಾರಿಯಲ್ಲಿ ಕತ್ತಲೆಯಲ್ಲೇ ಕೆಲಸ ಜಾಸ್ತಿ. ಪೊಲೀಸರಿಗೆ, ಗಣಿ ಅಧಿಕಾರಿಗಳಿಗೆ ಕಂದಾಯಾಧಿಕಾರಿಗಳಿಗೆ ಮೊದಲಿಗಿಂತ ಹೆಚ್ಚು ಹೊಟ್ಟೆ ತುಂಬಿಸಬೇಕಾಗಿತ್ತು. ಮಹೇಶ ಅವರನ್ನೆಲ್ಲ ಚೆನ್ನಾಗಿ ಇಟ್ಟುಕೊಂಡಿದ್ದ. ಆದರೆ ಮೊದಲು ರಾಜಾರೋಷವಾಗಿ ನಡೆಸುತ್ತಿದ್ದ ದಂದೆಯನ್ನು ಈಗ ಅದೇ ರೀತಿ ನಡೆಸಲಾಗುತ್ತಿರಲಿಲ್ಲ. ಅಧಿಕಾರಿಗಳು ಹೆದರುತ್ತಿದ್ದರು. ಕಾನೂನಿಗಲ್ಲವಾದರೂ ಜನರಿಗೆ. ಜನರೆ ತಾವಾಗಿ ರಹಸ್ಯ ತಿಳಿದು ದೂರು ನೀಡುತ್ತಿದ್ದರು; ರೈತಸಂಘ, ದಲಿತ ಸಂಘ, ಪರಿಸರ ವಾದಿಗಳ ಸಂಘ- ಇಂಥವರು ಕಳ್ಳನನ್ನ ಮಕ್ಕಳು ಸುಮ್ನೆ ಇರೋಕ್ಕಾಗ್ದೆ ಬಂದು

ಲಾರಿಗಳನ್ನು ಸೀಸ್ ಮಾಡುತ್ತಿದ್ದರು. ಆಗ ಅಧಿಕಾರಿಗಳಿಂದ ರಕ್ಷಣೆ ಸಿಗುತ್ತಿರಲಿಲ್ಲ. ಮಾಧ್ಯಮದವರು ಅದನ್ನೇ ದೊಡ್ಡದಾಗಿ ತುತ್ತೂರಿ ಊದುತ್ತಿದ್ದರು. ಈ ಎಲ್ಲದರ ನಡುವೆ ಕಣ್ಣು ತಪ್ಪಿಸಿ ಕರಿಕಲ್ಲಿನ ವ್ಯವಹಾರ ನಡೆಸಬೇಕಿತ್ತು.

ರೆಡ್ಡಿ ಕರಿ ಕಲ್ಲಿನ ಬಗ್ಗೆ ಯಾವಾಗಲೂ ದಿಗ್ಭ್ರಮೆ ವ್ಯಕ್ತ ಪಡಿಸುತ್ತಿದ್ದ. ಕರಿಕಲ್ಲು ರಾಜ್ಯದ ಬೇರೆಡೆ ಸಿಗುತ್ತಿತ್ತು. ಆದರೆ ಈ ರಾಮನಗರ, ಕನಕಪುರ ಪ್ರದೇಶದಲ್ಲಿ ಸಿಗುವ ಬ್ಲಾಕ್ ಸ್ಟೋನ್, ನಮ್ಮಗಂದು ಬ್ಲಾಕ್ ಬ್ಯೂಟಿ ! ಬ್ಲಾಕ್ ಅಂದ್ರೆ ಬ್ಲಾಕ್. ಜೆಟ್ ಬ್ಲಾಕ್ ! ಯಾವ ಸ್ಪಾಟೂ ಇರೋಲ್ಲ. ಗಲ್ಫ್‌ನಲ್ಲಿ ಈ ಕಲ್ಲಿಗೆ ಭಾರಿ ಬೇಡಿಕೆ. ಆರಡಿ ಮೂರಡಿ ಲಾಗ್ ರೂಪದಲ್ಲಿ ಸಪ್ಲೈ ಮಾಡಿದರೆ ಸಾಕು. ಈ ಕಾರಣದಿಂದಲೇ ಎಂ. ಆರ್. ಗ್ರಾನೈಟ್ಸ್‌ಗೆ ಡಿಮ್ಯಾಂಡು. ಈಗ ಗಲ್ಫ್‌ನಿಂದ ಬೇಡಿಕೆ, ಒತ್ತಡ ಜಾಸ್ತಿಯಾಗಿದೆ. ಆದರೆ ಬೇಡಿಕೆಗೆ ತಕ್ಕ ಮಾಲು ಸಿಗುತ್ತಿಲ್ಲ !

ರೆಡ್ಡಿಗೆ ರಾಮನಗರ-ಕನಕಪುರ ಪ್ರದೇಶದಲ್ಲಿರುವ ಬೆಟ್ಟ ಗುಡ್ಡಗಳನ್ನು ನೋಡಿದಾಗಲೆಲ್ಲಾ ಹೊಟ್ಟೆ ಉರಿಯುತ್ತಿತ್ತು. ಸಾವಿರಾರು ಕೋಟಿಗಳ ಸಂಪತ್ತು ಕೈ ಬೀಸಿ ಕರೆದಂತಾಗುತ್ತಿತ್ತು. ಅವನಿಗೆ ಕೋಪ ಬರುತ್ತಿತ್ತು. ಆದರೆ ಅದನ್ನು ಮುಟ್ಟುವಂತಿರಲಿಲ್ಲ. ಆದರೆ ಕಾಲ ಹೀಗೇ ಇರುತ್ತಾ ? ಮತ್ತೆ ನಮ್ಮವರು ಬರುತ್ತಾರೆ. ಆಗ ನಮ್ಮ ಬಿಸಿನೆಸ್ ಮತ್ತೆ ಚಿಗುರುತ್ತದೆ.

ಅವನು ಡ್ರೈವ್ ಮಾಡುತ್ತಾ ಒಮ್ಮೆ ಮಹೇಶನ ಕಡೆ ತಿರುಗಿ ನೋಡಿದ. ಅವನ ಮುಖದಲ್ಲಿ ಏನೋ ಹೇಳಲಾಗದ ಸಂಕಟವಿರುವುದು ಕಂಡು ಬಂತು. ಅದು ಆರೋಗ್ಯಕ್ಕೆ ಸಂಬಂಧಿಸಿದ್ದೆ ? ಹಣಕಾಸಿಗೆ ಸಂಬಂಧಿದ್ದೇ ? ಇವನು ನನಗೇ ಎರಡು ಕೋಟಿಗೂ ಹೆಚ್ಚು ಹಣ ಕೊಡ್ಬೇಕು. ಬೇರೆ ಕಡೆಯೂ ಸಾಲ ಮಾಡಿರಬೇಕು. ಅದನ್ನು ಹೇಗೆ ತೀರಿಸುತ್ತಾನೋ ಏನೋ. ಆದರೆ ತನಗೆ ಬರುವ ಹಣ ವಸೂಲು ಮಾಡಬೇಕು. ರೆಸಾರ್ಟು ಕಟ್ಟುವ ಸೈಟ್ ನೋಡಿಕೊಂಡು ಬರುವುದು ಈ ಟ್ರಿಪ್‌ನ ಒಂದು ನೆಪ ಅಷ್ಟೆ. ಮಹೇಶನಿಂದ ಬರಬೇಕಾದ ಹಣ ವಸೂಲು ಮಾಡುವುದೆ ಮುಖ್ಯ ಗುರಿ. ಪ್ರತಿಸಾರಿ ಹಣ ಕೇಳಿದಾಗಲೂ "ನೀನೇ ನೋಡ್ತಿದ್ದಿಯಲ್ಲಾ ಗುರು, ಬಿಸಿನೆಸ್ ಎಲ್ಲಿದೆ ? ಮನೇನೆ ಮೆಂಟೇನ್ ಮಾಡಕ್ಕಾಗ್ತಿಲ್ಲ. ಸ್ವಲ್ಪ ಅಡ್ಜೆಸ್ಟ್ ಮಾಡಿಕೊ" ಅಂತಾನೆ. "ನಿಮ್ಮಣ್ಣನ ಹತ್ರ ಸ್ವಲ್ಪ ಹೆಲ್ಪ್ ತಕೊ" ಅಂದರೆ, "ಮನೆ ಖರ್ಚೆಲ್ಲಾ ನಾನೇ ನೋಡ್ಕೋತ್ತೀನಿ. ಬೇಸಾಯದ ಕಡೆ ಗಮನ ಕೊಡು." ಅಂತ ಅಣ್ಣ ಉಪದೇಶ ಮಾಡ್ತಾನೆ ಅಂತ ರಾಗ ಎಳೀತಾನೆ.

ಮಹೇಶ ಕೋಟಿಗಟ್ಟಲೆ ವ್ಯವಹಾರ ಮಾಡಿದವನು. ಅವನು ಅವನ ಅಣ್ಣನ ಕಣ್ಣಿಗೆ ಕಾಣದ ಹಾಗೆ ಬ್ಯಾಂಕಿನಲ್ಲಿ ಬೇನಾಮಿ ಹೆಸರಲ್ಲಿ ಹಣ ಇಟ್ಟಿದ್ದಾನೆ; ಕೆಲವು ಕೋಟಿಗಳನ್ನು ಫಿಕ್ಸೆಡ್‌ನಲ್ಲಿ ತೊಡಗಿಸಿದ್ದಾನೆ. ಅಂತ ಗಾಳಿ ಸುದ್ದಿ ರೆಡ್ಡಿಯ ಕಿವಿಗೆ ಬಿದ್ದಿತ್ತು. ಇದು ನಿಜವೆ ಅಂತ ಮಹೇಶನಿಗೆ ಕೇಳಿದರೆ 'ನನ್ನ ತಾಯಾಣಾಗೂ ಇಲ್ಲ, ಗುರು. ಇದ್ದಿದ್ದರೆ ನಿನ್ನ ಹತ್ರ ಸಾಲ ಯಾಕೆ ಮಾಡ್ತಿದ್ದೆ" ಅಂತ ಆಣೆ ಭಾಷೆ ಹಾಕ್ತಾನೆ. ಆದರೆ ತನ್ನ ಮೂಲಗಳಿಂದ ಪರಿಶೀಲಿಸಲಾಗಿ ಹೆಚ್ ಡಿ ಎಫ್ ಸಿಯಲ್ಲಿ ಖಾತೆ ಇರುವುದಾಗಿಯೂ ಎಷ್ಟು ಹಣ ಇದೆಯೆಂಬುದು ತಿಳಿಯುವುದು ಸ್ವಲ್ಪ ಕಷ್ಟವಾಗುತ್ತದೆಯೆಂದೂ ತಿಳಿದುಬಂತು. ಎಲ್ಲ ಆನ್‌ಲೈನ್ ವ್ಯವಹಾರ.

ಕೋಡ್‌ವರ್ಡ್ರೋ ಪಾಸ್ ವರ್ಡ್ರೋ ಬೇಕು. ಅದನ್ನು ತಿಳಿದು ಕೊಂಡರೆ ಅವನ ರಹಸ್ಯ ಗೊತ್ತಾಗುತ್ತದೆ. ಬಡ್ಡಿಮಗನ ಬಾಯಿಂದ ಇವತ್ತು ಎಲ್ಲಾನು ಕಕ್ಕಿಸ್ತೀನಿ ಅಂದುಕೊಂಡ. ಮಗನಿಗೆ ಗುಂಡುಹಾಕಿಸಿ, ದಮ್ಕಿ ಹಾಕಿದರೆ ಪಾಸ್‌ವರ್ಡ್ ಬಾಯಿ ಬಿಡುತ್ತಾನೆ. ಅದ್ಕೆ ಅಂತಾನೆ ತಾನು ಇಂದು ಲ್ಯಾಪ್‌ಟಾಪ್ ತಂದಿರೋದು. ಆದರೆ ಅದ್ನೆಲ್ಲ ಹೆಂಗೆ ಮಾಡೋದು ? ಈಯಮ್ಮ ಬೇರೆ ಇದ್ದಾಳೆ; ಈ ಪ್ರೊಫೆಸರ್ ಬೇರೆ ವಕ್ರಿಸಿಕೊಂಡಿದ್ದಾನೆ.

ಇವರಿಬ್ಬರನ್ನು ಹೇಗಾದರೂ ಮಾಡಿ ನಿವಾರಿಸಬೇಕು. ಹೇಗೆ ? ಸುಲಭ. ಈಗ ನೇರವಾಗಿ ಮೈಸೂರಿಗೆ ಹೋಗುವುದು; ಚಂದ್ರಿಕಾಳನ್ನು ಅವಳ ಮನೆಗೆ, ಪ್ರೊಫೆಸರ್‌ನ ಅವನ ಮನೆಗೆ ಡ್ರಾಪ್ ಮಾಡುವುದು; ಮೈಸೂರಿನ ಹೊರವಲಯದಲ್ಲಿರುವ ಯಾವುದಾದರೂ ರೆಸಾರ್ಟ್‌ನಲ್ಲಿ ರೂಮು ಮಾಡುವುದು; ಆಗ ಮಹೇಶನಿಗೆ ದಮ್ಕಿ ಮಾಡುವುದು; ಅವನಿಂದ ಬರಬೇಕಾದ ಹಣ ವಸೂಲು ಮಾಡುವುದು.... ರೆಡ್ಡಿಗೆ ಸರಿಯೆನ್ನಿಸಿತು. ಆದರೆ........ಆದರೆ....... ಇಲ್ಲಿ ಎಲ್ಲೋ ಶರಣ್ ಫಿಟ್ ಆಗುತ್ತಿಲ್ಲ ಅನ್ನಿಸಿತು. ಅವನು ತಂಗಿಯೊಡನೆ ಮನೆಗೆ ಹೋಗುತ್ತಾನೋ ಇಲ್ಲವೋ ? ನಿಮ್ಮ ಜೊತೆಯಲ್ಲೇ ಇರುತ್ತೇನೆ ಅಂದರೆ ? ಮಗನಿಗೆ ಗುಂಡು ತುಂಡು ಅಂದ್ರೆ ಪ್ರಾಣ ! ಅದಕ್ಕೆ ಅವನು ಜೀವನದಲ್ಲಿ ಒಂದು ಪೈಸೆ ಖರ್ಚುಮಾಡಿದಂಗೆ ಕಾಣೋಲ್ಲ. ಸರಿಯಾಗಿ ಆಸ್ತಿಮಾಡಿ ಇಟ್ಟಿದ್ದಾನೆ. ಅವನ ಬಾವ ಚಂದ್ರಶೇಖರ್ ತರಾ ಗುಂಡು ತುಂಡು ಪಾರ್ಟಿಯೆಂದರೆ ತಪ್ಪಿಸಿಕೊಳ್ತಾನ ? ಆದರೆ ಅವನನ್ನು ಏಮಾರಿಸಬೇಕು. ಹೇಗೆ ? ಹೇಗೆ ? ರೆಡ್ಡಿಯ ಮೆದುಳು ಯೋಚಿಸಲಾಂಭಿಸಿತು.

ಆಯ್ತು. ಎಲ್ಲರನ್ನೂ ಏಮಾರಿಸಿ ನಾನು ಮಹೇಶ ಇಬ್ಬರೇ ರೂಂ ನಲ್ಲಿದ್ದೆವು ಎಂದು ಕೊಳ್ಳೋಣ. ಹಣ ಕೊಡಲು ನಿರಾಕರಿಸಿದರೆ ಏನು ಮಾಡುವುದು ? ದಮ್ಕಿಗೆ ಹೆದರಿದರೆ ಏನುಮಾಡುವುದು ? ರೆಡ್ಡಿಗೆ ಚಿಂತೆಗಿಟ್ಟುಕೊಂಡಿತ್ತು.

ತನಗೆ ಈಗ ಅರ್ಜೆಂಟಾಗಿ ಹಣ ಬೇಕಾಗಿತ್ತು. ಅಪ್ಪ ಸತ್ತ ನಂತರ ರಿಯಲ್ ಎಸ್ಟೇಟ್ ಹೆಚ್ಚು ಕಡಿಮೆ ನಿಂತುಹೋಗಿತ್ತು. ಅದರಲ್ಲಿ ಮುನ್ನುಗ್ಗಲು ಹೆದರಿಕೆಯಾಗುತ್ತಿತ್ತು. ಸ್ಪರ್ಧೆ ಅಧಿಕ ; ರಿಸ್ಕ್ ಅಧಿಕ; ಲಾಭವೂ ಅಧಿಕ. ಆದರೆ ಅವನು ಆ ಕ್ಷೇತ್ರದಲ್ಲಿ ಶತ್ರುಗಳನ್ನು ಕಟ್ಟಿಕೊಂಡಿದ್ದ. ಶತ್ರುಗಳನ್ನು ಮಿತ್ರರನ್ನಾಗಿಸಿಕೊಳ್ಳುವ, ರಾಜಿ ಮಾಡಿಕೊಳ್ಳುವ ಕಲೆಗಾರಿಕೆ ರೆಡ್ಡಿಯ ಕೈವಶವಾಗಿರಲಿಲ್ಲ. ಈ ರಿಯಲ್ ಎಸ್ಟೇಟ್ ಬಿಸಿನೆಸ್‌ನಲ್ಲಿರುವವರೆಲ್ಲ ಹೆಚ್ಚು ಕಡಿಮೆ ತನ್ನ ಹಾಗೆ ದುಡ್ಡಿಗಾಗಿ ಏನು ಬೇಕಾದರೂ ಮಾಡುತ್ತಿದ್ದರು. ತೆಲುಗು ಮಾತಾನಾಡುವ ಜನ ಬಹುಬೇಗ ಸ್ನೇಹಿತರಾಗುವುದು ; ಪರಸ್ಪರ ಕಷ್ಟಕ್ಕಾಗುವುದು ಮೊದಲಿಂದಲೂ ಇದ್ದದ್ದೇ. ಇಲ್ಲು ತೊಡಕಾದದ್ದು ಪೀಕೆ ಸಂಬಂಧವೇ. ಇವರಪ್ಪ ಪೀಕೆಯ ಬೆಂಬಲವಿದ್ದುದರಿಂದ ರಾಜನಂತೆ ಮೆರೆದಿದ್ದ ; ಬೇರೆಯವರು ತಲೆ ಎತ್ತದಂತೆ ತುಳಿಯಲು ಯತ್ನಿಸಿದ್ದ. ಅವರು ಈಗ ವಾಪಸ್ಸು ತಿರುಗಿಸಲು ಪ್ರಯತ್ನಿಸಿದ್ದರು.

ತನ್ನ ತಂದೆಯನ್ನು ಎತ್ತಿದ್ದು ನಾಯ್ಡುಗ್ಯಾಂಗ್ ಎಂದು ಗೊತ್ತಾದ ಮೇಲೆ ರೆಡ್ಡಿಯಲ್ಲಿ ರೋಷಾಗ್ನಿ ಮೂಡಿತ್ತು. ಹೇಗಾದರೂ ಬದ್ಲ ತೆಗೆದುಕೊಳ್ಳಬೇಕು. ಪೂರ್ಣ ಎತ್ತುವುದು ಬೇಡ.

ಪೂರ್ಣ ಎತ್ತಿದರೆ ಮಗಾ ನೆಮ್ಮದಿಯಾಗಿ ಸತ್ತು ಹೋಗುತ್ತಾನೆ; ಮನೆಯವರು ನಾಕುದಿನ ಅತ್ತು, ತಿಥಿ ಮಾಡಿ ಮರೆತು ಬಿಡುತ್ತಾರೆ. ಹಾಫ್‌ಮರ್ಡರ್ ಮಾಡಬೇಕು. ಮಗನಿಗೆ ಕೂತ ಕಡೆಯೇ ಎಲ್ಲ ಆಗಬೇಕು, ಹೀಗೆ ತನ್ನ ಕಾಂಟಾಕ್ಟ್‌ನಿಂದ ಒಂದು ಕೈಗೆ ಐವತ್ತು ಲಕ್ಷ ; ಒಂದು ಕಾಲಿಗೆ ಐವತ್ತು ಲಕ್ಷಕ್ಕೆ ಒಪ್ಪಂದ ಮಾಡಿಕೊಂಡು ಸುಫಾರಿ ಕೊಟ್ಟ. ಸುಳಿವುಸಿಗಬಾರದೆಂದು ಮುಂಬಯಿಯ ಭೂಗತ ಜಗತ್ತನ್ನು ಸಂಪರ್ಕಿಸಿದ. ಕೆಲಸ ಆಯಿತು. ನಾಯ್ಡುವಿನ ಶತ್ರುಗಳ ಮೇಲೆ ಪೊಲೀಸರು ನಿಗಾ ಇಟ್ಟರು. ಕತ್ತಲ ಲೋಕದಲ್ಲಿ ಅಲ್ಲಲ್ಲಿ ಮುನಿರಾಮಿ ರೆಡ್ಡಿಯ ಕೊಲೆಯ ಸೇಡು ಇದಿರಬಹುದೆ ? ಎಂಬ ಸಣ್ಣ ಪಿಸುಮಾತೂ ಕೇಳಿ ಬಂತು. ಬಹಳ ಜನ ಅದನ್ನು ಒಪ್ಪಲು ಸಿದ್ಧರಿರಲಿಲ್ಲ. ರೆಡ್ಡಿ ಮಗ ಇನ್ನೂ ಬಚ್ಚ. ಅವನು ಈ ರಿಸ್ಕ್ ತೆಗೆದುಕೊಳ್ಳಲಾರ ಅಂದು ಕೊಂಡರು.

ರೆಡ್ಡಿ ಕೊಲೆ, ದಮ್ಕಿಯಂಥ ಯೋಜನೆಗಳನ್ನು ತಂಡದಲ್ಲಿ ಮಾಡುತ್ತಿರಲಿಲ್ಲ. ಅವನು ಲೋನರ್! ಪ್ಲಾನ್ ಸೋತರೂ ಅಷ್ಟೆ, ಗೆದ್ದರೂ ಅಷ್ಟೆ ! ಇಬ್ಬರು ಸೇರಿದರೆ ಒಂದಲ್ಲಾ ಒಂದು ದಿನ ಗುಟ್ಟು ಹೊರಬರುತ್ತದೆ. ಬರುವ ವಾಹನಗಳ ದೀಪಗಳು ತಮ್ಮ ಬೆಳಕಿನಿಂದ ಕಣ್ಣುಗಳಿಗೆ ರಾಚುತ್ತಿದ್ದವು. ಎಡಗೈನಿಂದ ಅವುಗಳನ್ನು ಉಜ್ಜಿಕೊಂಡ. ನಾಯ್ಡುಗೆ ತಕ್ಕ ಉತ್ತರ ಕೊಟ್ಟಿದ್ದಾಗಿತ್ತು. ಆದರೆ.....

ತನ್ನ ಅಪ್ಪನನ್ನು ಮುಗಿಸಲು ಸುಫಾರಿ ಕೊಟ್ಟ ಪೀಕೆಗೆ ಏನು ಉತ್ತರ ಕೊಟ್ಟೆ? ಅವನು ಇವತ್ತೂ ಜುಂ ಅಂತಾ ಇದ್ದಾನೆ. ಸರ್ಕಾರ ಅವನ ಆಸ್ತಿ ಪಾಸ್ತಿ ಬಗ್ಗೆ ತನಿಖೇನೂ ಮಾಡಿಸ್ಲಿಲ್ಲ, ಏನು ಆಗಿಲ್ಲ. ಮಾಜಿ ಸಚಿವ, ಹಾಲೀ ಎಂ. ಎಲ್ ಸಿ ಪೀಕೆ ಇವತ್ತೂ ಪ್ರಮುಖ ನಾಯಕ. ವಿರೋಧ ಪಕ್ಷದ ಒಂದು ಬಣದ ಮುಂದಾಳು. ಅವನ ಮಾತಿಗೆ ಹೈಕಮಾಂಡಿನಲ್ಲಿ ತೂಕವಿದೆ ಅಂತಾರೆ. ಶಾಲಾ ಕಾಲೇಜು ನಡೆಸ್ತಾನೆ. ಟೀವಿಯವರು ಶಿಕ್ಷಣದ ಸಮಸ್ಯೆಗಳನ್ನು ಚರ್ಚಿಸುವ ಸಲುವಾಗಿ ಪ್ಯಾನಲ್ ಡಿಸ್ಕಷನ್‌ಗೆ ಅವನನ್ನು ಕರೆಯುತ್ತಾರೆ; ಪತ್ರಿಕೆಯವರು ಅವನ ಅಭಿಪ್ರಾಯ ಕೇಳತ್ತಾರೆ.

ಆದರೆ.......ಈ ಪೀಕೆ ಏನು ಅಂತ ತನಗೆ ಗೊತ್ತು. ಬೆಂಗಳೂರಿನ ಮೆಜೆಸ್ಟಿಕ್ ಸರ್ಕಲ್‌ನಲ್ಲಿ ನಿಂತು ಕೂಗಿ ಕೂಗಿ 'ಪೀಕೆ ಕೊಲೆಗಾರ, ಪೀಕೆ ಕೊಲೆಗಾರ' ಅಂತ ಕಿರುಚಬೇಕೆಂದು ರೆಡ್ಡಿಗೆ ಅನೇಕ ಸಾರಿ ಅನ್ನಿಸಿದೆ. ತನ್ನ ಮಾತು ಯಾರಿಗೆ ಕೇಳಿಸುತ್ತದೆ. ಹುಚ್ಚ ಇರಬೇಕು ಅಂತ ಹಿಡಿದು ಪೊಲೀಸರು ನಾಲ್ಕು ತದುಕಿ, ನಿಮಾನ್ಸ್‌ಗೆ ಸೇರಿಸುತ್ತಾರೆ ಅಷ್ಟೆ.

ಪೀಕೇಗೂ ಶಿಕ್ಷೆ ಆಗಬೇಕು. ಅದು ಸಂಕಟದ ಶಿಕ್ಷೆ, ನೋವಿನ ಶಿಕ್ಷೆ. ಅವನ ಕಡೆಯವರನ್ನು ಎತ್ತಬೇಕು. ಅವನ ಎರಡು ವರ್ಷದ ಮಗಳು ? ಅವನ ಹೆಂಡತಿ ? ಅವನ ತಮ್ಮ ? ರೆಡ್ಡಿಗೆ ತೃಪ್ತಿಯಾಯಿತು. ಹೌದು, ಒಂದೇ ಸಾರಿ ಎತ್ತಬಾರದು. ನಿಧಾನಕ್ಕೆ ಒಬ್ಬೊಬ್ಬರನ್ನೇ ಎತ್ತಬೇಕು. ನೋವು ಪೀಕೆಗೆ ಕಂತುಗಳಲ್ಲಿ ಬರಬೇಕು. ತನ್ನ ಹಳೆಯ ಬಾಂಬೆ ಕಾಂಟಾಕ್ಟ್ ದುಭಾರಿ ಹಣ ಕೇಳಿತು. ಈಗ ಎತ್ತಬೇಕಾಗಿರುವ ಪಾರ್ಟಿಗಳ ತೂಕ ಜಾಸ್ತಿ; ಸಿಕ್ಯಾಪಟ್ಟೆ ಸೆಕ್ಯೂರಿಟಿ ಇದೆ. ಅದೂ ನೀವು ಹಂತ ಹಂತವಾಗಿ ಕೆಲಸ ಆಗಬೇಕು ಅಂತಾ ಕೇಳ್ತೀರಿ. ಕೆಲಸಾನ ಬಿಟ್ಟು ಬಿಟ್ಟು

ಮಾಡುವುದು ತುಂಬಾ ರಿಸ್ಕ್. ತಲೆಗೊಂದು ಕೋಟಿಯಂತೆ ಮೂರು ಕೋಟಿ; ಸಾಗಾಣಿಕೆ ಇನ್ನಿತರ ಪುಡಿ ವೆಚ್ಚಗಳಿಗೆ ಮೇಲೆ ಹತ್ತು ಲಕ್ಷ ಕೊಟ್ಟರೆ ಆಗಬಹುದು ಎಂದು ಕಾಂಟಾಕ್ಟ್ ಸೂಚನೆ ಕೊಟ್ಟಿತು. ಆದರೆ ರೆಡ್ಡಿ ತೊಂದರೆಯಲ್ಲಿದ್ದ. ಅವನ ಎಂ. ಆರ್. ಗ್ರಾನೈಟ್ಸ್ ಹೆಚ್ಚು ಕಡಿಮೆ ಕೆಲಸವನ್ನೇ ಮಾಡುತ್ತಿರಲಿಲ್ಲ.

ಕಳ್ಳ ಮಾರ್ಗದಲ್ಲಿ ಒಮ್ಮೊಮ್ಮೆ ಮಹೇಶ ಸಪ್ಲೈ ಮಾಡುತ್ತಿದ್ದ ಮಾಲನ್ನು ಕೂಡ ಮಂಗಳೂರಿನ ಬಂದರಿಗೆ ಸಾಗಿಸಿ, ಅಲ್ಲಿಂದ ಗಲ್ಫ್‌ಗೆ ಕಲ್ಲನ್ನು ಸ್ಲಗಲ್ ಮಾಡಲು ಸಾಕಷ್ಟು ಖರ್ಚಾಗುತ್ತಿತ್ತು. ಸಿಕ್ಕಿ ಕೊಂಡರೆ ಪಡಬಾರದ ಪಾಡು! ಮಾಲು, ಲಾರಿ- ಯಾವುದೂ ತಮ್ಮದಲ್ಲ ಎಂದು ಕೈ ಎತ್ತಬೇಕು. ಸರ್ಕಾರದ ನಿಯಮಗಳಿಂದ ರೆಡ್ಡಿ ರೋಸಿ ಹೋಗಿದ್ದ.

ಅವನನ್ನು ಸೇಡು ಒಂದು ಕಡೆ ಸುಡುತ್ತಿದ್ದರೆ, ಹಣ ಕಾಸು ಸಮಸ್ಯೆ ಮತ್ತೊಂದು ಕಡೆ ಕಿತ್ತು ತಿನ್ನುತ್ತಿತ್ತು. ಮಹೇಶನಿಂದ ಇಂದು ದುಡ್ಡನ್ನು ವಸೂಲು ಮಾಡಲೇಬೇಕು. ಬಡ್ಡಿಮಗ ಹೈ ಫೈ ಬ್ಯಾಂಕಿನಲ್ಲಿ ಖಾತೆ ತೆರೆದು ವ್ಯವಹರಿಸ್ತಿದ್ದಾನೆ. ಎಲ್ಲಾ ಆನ್ ಲೈನ್ ವ್ಯವಹಾರ ! ಓದಿರೋದು ನೋಡಿದರೆ ಹೈಸ್ಕೂಲು, ವ್ಯವಹಾರ ನೋಡಿದರೆ ಹೈ ಫೈ ಬ್ಯಾಂಕಿನಲ್ಲಿ ! ರೆಡ್ಡಿ ಮಹೇಶನ ಕಡೆ ಅತ್ಯಂತ ತಣ್ಣಗೆ ನೋಡಿದ. ತಡಿ ಮಗನೆ, ಇನ್ನೊಂದೆರಡು ಗಂಟೆ ತಡೆದು ಕೋ. ಮುಂದಿದೆ ಮಾರಿ ಹಬ್ಬ!

ಮದ್ದೂರಿನ ಆ ಹೋಟೆಲ್ಲಿನಲ್ಲಿ ಸಂಜೆ ತಿಂಡಿ ತಿಂದಾದ ಮೇಲೆ ಸಿಗರೇಟು ಸೇದುವಾಗ ಬಡ್ಡಿಮಗ ನನ್ನ ಮೇಲೆ ರೇಗಿಯೇ ಬಿಟ್ಟ. ಏನು ಅವನ ಕೋಪ ? ಅವನ ಮಾತಿಗೆ ಈ ಎಂಜಲು ನನ್ಮಗ ಶರಣನೂ ಧ್ವನಿಗೂಡಿಸಿದ. ಇರಬಹುದು, ಅಪರಿಚಿತರೆದುರು ನಾನು ಆ ವಿಷಯ ಎತ್ತಬಾರದಿತ್ತು. ಏನು ತಪ್ಪು ? ಮಾತಿನಂತೆ ಮಾಲು ಸಪ್ಲೈ ಮಾಡಬಾರದೆ ? ಮಾಡಿದ್ದರೆ ನಾನೇಕೆ ವಿಷಯ ಎತ್ತುತ್ತಿದ್ದೆ ?

ಅವನು ಬಾಯಿಗೆ ಕ್ರೌನ್ ಸುಫಾರಿ ಹಾಕಿ, ಅಗಿದು, ಸಿಗರೇಟ್‌ನ ಧಂ ಎಳೆಯುತ್ತಾ "ಯಾವ ವಿಷಯಾನ ಯಾವಾಗ, ಯಾರ ಮುಂದೆ ಎತ್ತಬಾರದು, ಎತ್ತಬೇಕು ಎಂಬ ಪ್ರಜ್ಞೆ ಇಲ್ಲ. ಆ ಪ್ರೊಫೆಸರ್ ನನಗ್ಗೊತ್ತು. ಅವನ ಬಗ್ಗೆ ಕೇಳಿದ್ದೇನೆ. ಪರಿಸರ ವಾದಿಗಳ ಜೊತೆ ಒಂದೆರಡು ಸಾರಿ ನಮ್ಮ ಕಡೆ ಬಂದು ಬೆಟ್ಟ ಗುಡ್ಡ ಕಾಡು ರಕ್ಷಣೆ ಮಾಡ್ಬೇಕು ಅಂತ ಭಾಷಣ ಬಿಗಿದಿದ್ದ. ಗಣಿ ಉದ್ಯಮವನ್ನು ವಿರೋಧಿಸೋರಲ್ಲಿ ಇವನು ಒಬ್ಬ ಮುಂದಾಳು. ಅಲ್ಲದೆ, ಅವನು ನಮ್ಮ ಏರಿಯಾದವನು. ಬಸಂತ ಕುಮಾರ್‌ನ ಊರಿನ ಪಕ್ಕದ ಊರು ಅಂತ ಕಾಣ್ತದೆ. ಗಣಿಗಾರಿಕೆ ಮಾಡುವ ನಮ್ಮಂಥೋರನ್ನ ಸಮಾಜ ದ್ರೋಹಿಗಳು, ಮಣ್ಣಿನ ದ್ರೋಹಿಗಳು ಅಂತಾ ಕರೆಯುತ್ತಾನಂತೆ. ಈಗ ಸರ್ಕಾರ ಗಣಿಗಾರಿಕೆ ನಿಷೇಧಿಸಿದೆ. ಅಂಥಾದ್ರಲ್ಲಿ ಅವನ ಮುಂದೇನೆ ಮಾಲು ಸಪ್ಲೈ ಮಾಡು ಅಂತೀಯಾ...... ಸ್ವಲ್ಪನಾದ್ರು ಜ್ಞಾನ ಇದೆಯಾ ನಿಂಗೆ ? ನಾಳೆ ಬೆಳಿಗ್ಗೇನೇ ಅವನು ಸಂಬಂಧ ಪಟ್ಟ ಅಧಿಕಾರಿಗಳಿಗೆ ಫೋನ್ ಮಾಡ್ದೆ ಇರ್ತಾನೆಯೇ ?" ಕೋಪದಿಂದ ನುಡಿದ. ಅವನು ಅಷ್ಟು ಮಾತಾಡುವಷ್ಟರಲ್ಲಿ ಸುಸ್ತಾದವನಂತೆ ತೋರಿದ. ಕುತ್ತಿಗೆಯ ಸುತ್ತ, ಹಣೆಯ ಮೇಲೆ

ಬೆವರಿನ ಸಾಲುಗಳು ಮೂಡಿದವು. "ಈ ಭೂಮಿಗೌಡನ ಬಗ್ಗೆ ಈ ಶರಣ್‌ಗೆ ಬಹಳ ಗೊತ್ತು. ಕೇಳಿ ನೋಡು" ಎಂದನು.

ರೆಡ್ಡಿ ಏನು ಎಂಬಂತೆ ಶರಣ್ ಕಡೆ ನೋಡಿದ.

ಸಿಗರೇಟು ಸೇದುತ್ತಿದ್ದ ಶರಣ್ ರೆಡ್ಡಿಯನ್ನುದ್ದೇಶಿಸಿ " ಈ ಭೂಮಿಗೌಡನಿಗೆ ನಮ್ಮ ಫೀಲ್ಡ್‌ನಲ್ಲಿ ಒಳ್ಳೆಯ ಹೆಸರಿದೆ. ಒಂದು ಬಗೆಯ ಅಥಾರಿಟೇಟಿವ್ ಎಂದರೂ ತಪ್ಪಲ್ಲ. ಕೇಂದ್ರದ ಭೂವಿಜ್ಞಾನ ಇಲಾಖೆ, ನಮ್ಮ ರಾಜ್ಯದ ಇಲಾಖೆ ಆಗಿಂದಾಗ್ಗೆ ಇವನ ಅಭಿಪ್ರಾಯ ಕೇಳುವುದುಂಟು. ಭೂಮಿಯ ರಚನೆ, ಒಳಚಲನೆ, ಸಮತೋಲನ ಇತ್ಯಾದಿಗಳ ಬಗ್ಗೆ ಅವನ ಅಭಿಪ್ರಾಯ ಕೇಳಿ ದೇಶ ವಿದೇಶಗಳ ಸಂಸ್ಥೆಗಳು ಇವನ ಬಳಿ ಬರುತ್ತವೆ. ಸಂಶೋಧನೆ, ಅದು ಇದು ಅಂತಾ ವರ್ಷದಲ್ಲಿ ಆರು ತಿಂಗಳು ದೇಶ ವಿದೇಶಗಳಲ್ಲಿ, ನಮ್ಮ ರಾಜ್ಯದ ಕಾಡು ಮೇಡುಗಳಲ್ಲಿ ಸುತ್ತಿ, ಸಂಶೋಧನಾ ಲೇಖನಗಳನ್ನು ಬರೀತಾನೆ"- ಮಾತು ನಿಲ್ಲಿಸಿ, ರಸ್ತೆಯಂಚಿನಲ್ಲಿ ತನ್ನ ತಂಗಿಯೊಡನೆ ಮಾತಾಡುತ್ತಾ ನಿಂತಿದ್ದ ಭೂಮಿಗೌಡನ ಕಡೆ ನೋಡಿ " ನೋಡು ರೆಡ್ಡಿ, ಅವನನ್ನು ನೋಡು, ಎಂಥ ಸ್ಕಾಲರ್! ಆದರೆ ಅವನು ಎಷ್ಟು ಸರಳವಾಗಿದ್ದಾನೆ. ನೋಡು. ಅವನಂಥೋರ್‍ನ ಪರ್ಚೇಸ್ ಮಾಡುವುದಕ್ಕಾಗಲ್ಲ. ನನಗೆ ಗೊತ್ತಿರುವ ಹಾಗೆ ನಮ್ಮ ಫೀಲ್ಡ್‌ನ ಉದ್ಯಮಿಗಳು ಇವನ ಜ್ಞಾನಾನ ಬಳಸ್ಕೊಳದಿಕ್ಕೆ ಪ್ರಯತ್ನ ಮಾಡಿದ್ದಾರೆ. ಆದರೆ ಇವನು ಜಪ್ಪಯ್ಯ ಅನ್ನುವವನಲ್ಲ. ಅವನೊಬ್ಬ ಶುದ್ಧ ಆದರ್ಶವಾದಿ; ಅವನು ಈ ಭೂಮಿ, ಈ ಮರಗಿಡ,ಮನುಷ್ಯ-ಪ್ರಾಣಿ ಜಂತು ಎಲ್ಲವನ್ನೂ ಸಮಾನವಾಗಿ ಪ್ರೀತಿಸ್ತಾನೆ.ಅವು ಹೇಗಿವೆಯೋ ಹಾಗೇ ಇರಬೇಕು ; ಅವನ್ನು ಕದಲಿಸುವ ಹಕ್ಕು ನಮಗಿಲ್ಲ ಅಂತ ವಾದಿಸ್ತಾನೆ. ಒಂದು ಇನ್ನೊಂದನ್ನು ಅವಲಂಭಿಸಿ ಬದುಕ್ತಿವೆ; ಒಂದು ಹೋದರೆ ಅದರ ಜೊತೇಲೆ ಇನ್ನೊಂದು ನಾಶವಾಗ್ತದೆ. ಅವನಂಥೋರು ಇದನ್ನು ಇಕೊ-ಬ್ಯಾಲೆನ್ಸ್ ಅಂತಾರೆ. ಈ ಇಕೋ-ಬ್ಯಾಲೆನ್ಸ್ ಅಲ್ಲಾಡಬಾರದು. ಅದು ಇರುವ ಹಾಗೆ ಇದ್ದರೆ ಎಲ್ಲರಿಗೂ ಒಳಿತು. ಲಕ್ಷಲಕ್ಷ ವರ್ಷಗಳಿಂದಲೂ ಹಾಗೆ ಇದೆ; ಮುಂದೆಯೂ ಹಾಗೆ ಇರಬೇಕು ಅಂತಾ ಹೇಳ್ತಾರೆ"- ಅಂದ. "ನಾನೂನು ಜಿಯಾಲಜಿ ಓದಿದ್ದೇನೆ. ಸುಮ್ಮನೆ ಕೂಲಾಗಿ ಕೂತು, ಒಬ್ಬ ಸಾಮಾನ್ಯ ಮನುಷ್ಯನಂತೆ ಯೋಚನೆ ಮಾಡಿದರೆ ಅವನು ಸತ್ಯವನ್ನು ಅಪ್ಪಿಕೊಂಡಿದ್ದಾನೆ, ಸತ್ಯವನ್ನು ಹೇಳ್ತಿದ್ದಾನೆ ಅಂತ ಅನ್ನಿಸ್ತದೆ. ಆದರೆ......ಆದರೆ..........ನಾವು" ಶರಣ್ ಸಿಗರೇಟ್‌ನ ಹೊಗೆಯನ್ನು ಹೊರಬಿಟ್ಟು, ಅದರ ಸುರಳಿಯನ್ನೇ ನೋಡುತ್ತಾ, ತನ್ನ ಆತ್ಮವನ್ನೇ ಕುರಿತು ಮಾತನಾಡಿಕೊಳ್ಳುತ್ತಿರುವಂತೆ "......ನಾವು ತುಂಬಾ ದೊಡ್ಡಾ ಹೊಟ್ಟೆಯನ್ನು ಬೆಳೆಸಿಕೊಂಡಿದ್ದೇವೆ. ನಮ್ಮ ಹಸಿವಿಗೆ ಎಷ್ಟು ತಿಂದರೂ ಸಾಲದು" ಎಂದನು.

ರೆಡ್ಡಿ ಮತ್ತು ಮಹೇಶ ಇಬ್ಬರೂ ಶರಣ್‌ನನ್ನು ಹೊಸದಾಗಿ ನೋಡುತ್ತಿರುವಂತೆ ನೋಡಿದರು. ರೆಡ್ಡಿಯ ಮಾತಿನಲ್ಲಿ ತೀಕ್ಷ್ಣತೆಯಿತ್ತು : "ಏನು ಮಾತಾಡ್ತಾ ಇದ್ದೀಯಾ ? ನಮ್ಮ ಹಸಿವು ಹಿಂಗೊಲ್ಲ ಅಂದ್ರೆ ಏನರ್ಥ ?"

ಶರಣ್ ಅವರಿಬ್ಬರನ್ನು ವಿಷಣ್ಣವದನನಾಗಿ ನೋಡುತ್ತಾ "ಹಸಿವಿನ ಬಗ್ಗೆ ಮಾತಾಡ್ತ ಇದ್ದೀವಿ. ಎಂದಾದರೂ ನಮಗೆ ಹಸಿವು ನೀಗಿದೆ ಎನ್ನಿಸಿದೆಯೇ ? ನೀವು ಇಬ್ಬರೂ ವ್ಯವಹಾರಸ್ಥರು. ಸಾಕಷ್ಟು ಸಂಪಾದನೆ ಮಾಡಿದ್ದೀರಿ. ಸಾಕು ಅಂತ ಅನ್ನಿಸಿದೆಯೇ ? ಬೇಕು ಬೇಕು ಅಂತ ಎಂಥೆಂಥಾ ಮಾರ್ಗಗಳನ್ನು ತುಳಿದಿಲ್ಲಾ, ನೀವೆ ಹೇಳಿ ? ಒಳ್ಳೆಯದು, ಕೆಟ್ಟದು ಅಂತಾ ಯೋಚನೆ ಮಾಡಿದ್ದೀರಾ ? ನಿಮ್ಮನ್ನು ಬಿಡಿ. ನಾನು ಓದಿರೋನು. ಅದೂ ಈ ಭೂಮಿ ಬಗ್ಗೇನೆ ಓದಿರೋನು. ಆದರೆ ಏನು ಪ್ರಯೋಜನ ? ಓದೇ ಬೇರೆ ಜೀವನಾನೆ ಬೇರೆ ಅಂತ ತಿಳಿದುಕೊಂಡೋನು. ತಿನ್ನೋದರಲ್ಲಿ ನಿಮಗೂ ನನಗೂ ವ್ಯತ್ಯಾಸವೇನಿಲ್ಲ ! ಸರ್ಕಾರದ ಸಂಬಳ ತಿಂತೀನಿ. ನೀವು ಕೊಡುವ ಹಣ ತಿಂತೀನಿ. ತೃಪ್ತಿ ಬಂದಿದೆಯೇ ? ಮನಸ್ಸು ಹೇಗಾಗಿದೆ ಎಂದರೆ, ಯಾರಾದರೂ ಕೆಲಸದ ಮೇಲೆ ನಮ್ಮ ಬಳಿ ಬಂದರೆ, ಅವರು ಹಣ ನೀಡಲಿ ಅಂತಾ ಅವರ ಕೈ ಬಾಯ್ ನೋಡುತ್ತೆ. ಅಷ್ಟರ ಮಟ್ಟಿಗೆ ನಮ್ಮ ಮೈ ಮನಗಳು ಭ್ರಷ್ಟಗೊಂಡಿವೆ. ನಾವು ಸುಧಾರಣೆಯಾಗದಷ್ಟು ದೂರ ಸಾಗಿದ್ದೇವೆ. ನಮ್ಮ ಸ್ವಾರ್ಥಕ್ಕೆ ನಾವು ಭೂಮಿತಾಯನ್ನು ಸೀಳುತ್ತಿದ್ದೇವೆ, ಅಂದಗೆಡಿಸಿ ವಿರೂಪಗೊಳಿಸುತ್ತಿದ್ದೇವೆ. ........ ನಮ್ಮಂಥವರು ಅವರನ್ನು ಪ್ರಗತಿ ವಿರೋಧಿಗಳು ಅಂತ ಹೇಳ್ತೀವಿ" ಶರಣ್ ಮಾತು ನಿಲ್ಲಿಸಿದ. ಅವನು ಆಕಾಶದಲ್ಲಿ ಬೆಳಗುತ್ತಿದ್ದ ಚಂದ್ರನನ್ನು ಒಮ್ಮೆ ಮತ್ತು ಎದುರಿನ ರಸ್ತೆಯಲ್ಲಿ ನಿಂತಿದ್ದ ತನ್ನ ತಂಗಿಯನ್ನೊಮ್ಮೆ ನೋಡಿದ. ಅವಳು ಚಂದ್ರನಷ್ಟೇ ಬೆಳದಿಂಗಳು ಅನ್ನಿಸಿತು. ತನ್ನ ಒಡನಾಡಿಗಳನ್ನು ಕುರಿತು "ನನ್ನ ಇಂದಿನ ಮಾತುಗಳು ವಿಚಿತ್ರವಾಗಿ ಕಾಣುತ್ತಿರಬೇಕಲ್ಲವೆ ? ನನಗೂ ಗೊತ್ತಿಲ್ಲ. ನನಗೇ ಆಶ್ಚರ್ಯವಾಗುತ್ತಿದೆ. ಬಹುಶಃ ಈ ಭೂಮಿಗೌಡನ ವ್ಯಕ್ತಿತ್ವ ಕಾರಣ ಇರಬಹುದು; ಅವನ ಬಗ್ಗೆ ನಾನು ತಿಳಿದ ಕಾರಣ ವಿರಬಹುದು. ನನ್ನೊಳಗಿನ ಒಬ್ಬ ವಿದ್ಯಾವಂತ ಕಣ್ತೆರೆದಿರಬಹುದು. ಆದರೆ ನಾನು ಅವನಂತಾಗಲು ಸಾಧ್ಯವಿಲ್ಲ ; ನಾನು ನಿಮ್ಮೊಡನೆ ಬಹಳ ದೂರ ಬಂದು ಬಿಟ್ಟಿದ್ದೇನೆ. ಈಗ ನಿಮ್ಮನ್ನು ಬಿಟ್ಟು ಬದುಕಲಾರದ ಸ್ಥಿತಿ ನನ್ನದು"- ಎಂದು ಹೇಳಿ ಸ್ವಲ್ಪ ಮೌನ ತಾಳಿದನು.

ಮತ್ತೆ ಅವರನ್ನು ಕುರಿತು "ರೆಡ್ಡಿ, ಬಹುಶಃ ನೀನು ವ್ಯವಹಾರದ ವಿಷಯವನ್ನು ಅವರಿಬ್ಬರ ಎದುರು ಮಾತನಾಡಬಾರದಿತ್ತು. ನೀನು ಮಾತನಾಡಿದ್ದರಿಂದಲೇ ನಾನು ಇಷ್ಟೆಲ್ಲಾ ಮಾತಾಡಬೇಕಾಯಿತು. ಅದಕ್ಕೆ ಒಂದು ಕಾರಣ ಭೂಮಿಗೌಡನ ಅಕಾಡೆಮಿಕ್ ಕ್ಯಾಲಿಬರ್ ಆದರೆ, ಮತ್ತೊಂದು ನನ್ನ ತಂಗಿ. ನಿನಗೂ ಗೊತ್ತು ಅವಳು ವಿದ್ಯಾವಂತೆ, ವಿಚಾರವಂತೆ. ಸೂಕ್ಷ್ಮ ಮನಸ್ಸಿನವಳು. ನನ್ನ ಬಗ್ಗೆ ಅಪಾರ ಪ್ರೀತಿ, ಗೌರವ. ತನ್ನಣ್ಣ ಧರ್ಮರಾಯ ಅಂತ ತಿಳಿದವಳು. ನಮ್ಮ ಮಾತುಗಳನ್ನು ಕೇಳಿದ ಅವಳ ದೃಷ್ಟಿಯಲ್ಲಿ ಚಿಕ್ಕವನಾಗಿರುತ್ತೇನೆ. ಬಹುಶಃ ಈಗಾಗಲೇ ಅವಳಿಗೆ ನನ್ನ ಮೇಲೆ ಮತ್ತು ಅವಳ ಗಂಡನ ಮೇಲೆ ಗೌರವ ಕಡಿಮೆಯಾಗಿರಬಹುದು"- ಎಂದು ಹೇಳಿದನು.

"ಆಯ್ತು, ಆಯ್ತು ಮಾತನಾಡಿಬಿಟ್ಟೆ, ನನ್ನದು ತಪ್ಪಾಗಿದೆ ಎಂದೇ ಇಟ್ಟುಕೊಳ್ಳಿ. ಈಗ ಅದನ್ನು ಸರಿಪಡಿಸಲಾಗದು. ಅವನು ನಾಳೆ ಏನು ಮಾಡ್ತಾನೋ ನೋಡೋಣ. ಇಂಥೋರೆಲ್ಲಾ

ಬರೀ ಕಿರುಚಬೇಕಷ್ಟೆ. ಹಣ ಇವತ್ತು ಕೆಲಸ ಮಾಡ್ತದೆ. ಅದು ನಿಮ್ಗೂ ಗೊತ್ತು, ನನಗೂ ಗೊತ್ತು" ಎಂದು ಶರಣ್‌ನ ಕಡೆ ತಿರುಗಿ "ನೀವ್ ಸುಮ್ನಿರಿ ಶರಣ್, ಸನ್ಯಾಸಿ ಥರಾ ಮಾತಾಡ್ಬೇಡಿ, ಇದೊಂಥರ ಸಹವಾಸ ರೋಗ. ರಾತ್ರಿ ಗುಂಡು ಹಾಕಿದರೆ ಎಲ್ಲ ಸರಿ ಹೋಗುತ್ತದೆ" ಎಂದನು ನಗುತ್ತಾ.

ರೆಡ್ಡಿ ತನ್ನ ಕತ್ತನ್ನು ಸ್ವಲ್ಪ ವಾರೆ ಮಾಡಿ ಹಿಂದಕ್ಕೆ ತಿರುಗಿ ನೋಡಿದ. ಶರಣ್ ಯಥಾ ಪ್ರಕಾರ ಕಿಟಕಿಯ ಕಡೆ ತಲೆಬಾಗಿಸಿ ನಿದ್ದೆಮಾಡುತ್ತಿದ್ದ. ನಿದ್ದೆ ಮಾಡುತ್ತಿರುವನೋ ಅಥವಾ ಎಚ್ಚರವಾಗಿರುವನೋ ಹೇಳಲಾಗದು. ಹಿಂದಿನ ಸೀಟುಗಳಲ್ಲಿ ಎದುರು ಬದರು ಕೂತ ಭೂಮಿಗೌಡ ಮತ್ತು ಚಂದ್ರಿಕಾ ಮೃದುವಾಗಿ ಮಾತನಾಡುವುದು ಕೇಳಿಸುತ್ತಿತ್ತು. ರೆಡ್ಡಿ ಮತ್ತೆ ಮಹೇಶನನ್ನು ನೋಡಿದ. ಅವನ ಕಣ್ಣುಗಳು ತದೇಕ ದೃಷ್ಟಿಯಿಂದ ರಸ್ತೆಯನ್ನೆ ನೋಡುತ್ತಿದ್ದವು.

ಟ್ರಾಫಿಕ್ ಕಡಿಮೆಯಿತ್ತು. ಆಗಲೇ ಹತ್ತುಗಂಟೆಯಾಗಿದೆ. ಊಟಮಾಡುವ ಹೊತ್ತು. ತಮ್ಮ ಮನೆಯಲ್ಲಿ ಯಾವಾಗಲೂ ಹತ್ತುಗಂಟೆಯೇ ಊಟ ಮಾಡುವ ಹೊತ್ತು. ಅಪ್ಪ ಮನೆಗೆ ಬರುತ್ತಿದ್ದುದೇ ಹತ್ತು ಗಂಟೆಗೆ ! ಅಮ್ಮ ದಡಬಡನೆ ಊಟಕ್ಕೆ ಅಣಿಗೊಳಿಸುತ್ತಿದ್ದಳು. ಅಪ್ಪನಿಗೊಂದು ಶಿಸ್ತಿತ್ತು. ಬೆಳಿಗ್ಗೆ ತಿಂಡಿ ರಾತ್ರಿ ಊಟ ಕಡ್ಡಾಯವಾಗಿ ಮನೆಯಲ್ಲೇ ಆಗಬೇಕು. ಅಕಸ್ಮಾತ್ ರಾತ್ರಿ ಪಾರ್ಟಿಗಳ ಜೊತೆ ಊಟ ಮಾಡಬೇಕಾಗಿ ಬಂದರೆ, ಫೋನ್ ಮಾಡಿ ತಿಳಿಸುತ್ತಿದ್ದ. ಡ್ರಿಂಕ್ಸ್ ಕೂಡ ಅಷ್ಟೆ. ಮನೆಯಲ್ಲಿ ಮುಟ್ಟುತ್ತಿರಲಿಲ್ಲ. ಪಾರ್ಟಿಗಳಲ್ಲಿ ಒಂದು ಅಥವಾ ಎರಡು ಪೆಗ್ ಮಾತ್ರ- ಕಂಪನಿಗೆ, ಎನ್ನುತ್ತಿದ್ದ. "ನೋಡು ಮಗ, ನಾಲ್ಕು ಜನರೆದುರಿಗೆ ನಾವು ಕುಡಿಯಲೇಬಾರದು. ಕುಡಿದರೂ ಅರಿವು ತಪ್ಪಬಾರದು. ಅರಿವು ತಪ್ಪಿದರೆ ಹಗುರವಾಗ್ತೀವಿ. ಅದರಲ್ಲೂ ಬಿಸಿನೆಸ್ ವಿಷಯ ಮಾತಾನಾಡುವಾಗ ಪಾರ್ಟಿಗಳ ಜೊತೆ ಎಚ್ಚರವಾಗಿರಬೇಕು. ಈ ಕುಡಿತ ಅತಿ ಯಾದರೆ ನಮ್ಮ ಜುಟ್ಟು ಪಾರ್ಟಿಗಳ ಕೈಯಲ್ಲಿರುತ್ತದೆ" ಎಂದು ಬುದ್ಧಿ ಹೇಳುತ್ತಿದ್ದ.

ಅಪ್ಪನನ್ನ ಕಂಡರೆ ಅವ್ವನಿಗೆ ಅಪಾರ ಪ್ರೀತಿ. ಅವಳು ಅವನು ಸರ್ವಸ್ವ. ಅವ್ವ ಶ್ರೀನಿವಾಸ ಪುರ ತಾಲ್ಲೂಕಿನ ಕೊರಗೇನಪಲ್ಲಿಯವಳು. ಜಾತ್ಯಸ್ಥಳು. ಅವನ ಇಪ್ಪತ್ತನೇ ವಯಸ್ಸಿನಲ್ಲಿ ಅವಳನ್ನು ಮದುವೆಯಾದನಂತೆ ! ಆ ಊರಿನ ಶ್ರೀಮಂತ ಮುನಿವೆಂಕಟ ಕೃಷ್ಣಪ್ಪನವರ ಮನೆಯಲ್ಲಿ ಅವಳು ಕೆಲಸದಾಳು. ಅವರಿಗೆ ಅವಳು ದೂರದ ಸಂಬಂಧಿಯಂತೆ. ಬಹಳ ಚಿಕ್ಕವಯಸ್ಸಿನಲ್ಲೇ ತಂದೆ ತಾಯಿಗಳನ್ನು ಕಳೇದುಕೊಂಡ ಅವಳು ಮುನಿವೆಂಕಟಕೃಷ್ಣಪ್ಪನವರ ಮನೆ ಸೇರಿಕೊಂಡಿದ್ದಳು. ಆಗ ಅವಳಿಗೆ ಎಂಟುವರ್ಷವಂತೆ. ಅವಳ ಹದಿನಾರನೇ ವಯಸ್ಸಿಗೆ ನಮ್ಮಪ್ಪನ ಜೊತೆಯಲ್ಲಿ ಮದುವೆಯಾಯಿತಂತೆ. ಮದುವೆ ಆದದ್ದೇ ತಡ ಅಪ್ಪನ ಅದೃಷ್ಟದ ಬಾಗಿಲು ತೆರೆಯಿತಂತೆ. ಲಕ್ಷ್ಮಿ ಬಾಗಿಲು ತೆರೆದು ಒಳಗೆ ಬಂದಳಂತೆ. ಆಮೇಲೆ ಕಷ್ಟವೇನೆಂಬುದೇ ಅವಳಿಗೆ ತಿಳಿಯದೆ ಹೋಯಿತಂತೆ...... ಈ ವಿಚಾರಗಳನ್ನು ಆಗಾಗ್ಗೆ ಅವ್ವನೇ ಹೇಳುತ್ತಿದ್ದಳು. ಅವಳು ಅಪ್ಪ ಸಾಯುವ ಬರೀ ಮೂರು ತಿಂಗಳ ಮುನ್ನ ಸತ್ತಳು. ಒಂದು ಕಾಯಿಲೆ ಇಲ್ಲ, ಕಸಾಲೆ ಇಲ್ಲ.

ಉಂಡು ತಿಂದು ರಾತ್ರಿ ಮಲಗಿದವಳು ಬೆಳಿಗ್ಗೆ ನೋಡಿದರೆ ಶವವಾಗಿದ್ದಳು. ಡಾಕ್ಟರ್ ಎಂಥದೋ ಕಾರಿನರಿ ಅರೆಸ್ಟ್ ಎಂದರು. ಸುಖವಾದ ಸಾವು! ಆದರೆ ಅವ್ವನ ಸಾವು ಅಪ್ಪನನ್ನು ಕುಗ್ಗಿಸಿತ್ತು. ಅವನು ಮೌನವಾಗ ತೊಡಗಿದ. ರಿಯಲ್ ಎಸ್ಟೇಟ್ ಬಿಸಿನೆಸ್ ಕಡೆ ಹೆಚ್ಚೆಚ್ಚು ಗಮನ ಕೊಡಲಾರಂಭಿಸಿದ.

ಅಪ್ಪನ ಕಡೆಯವರು ತನಗೆ ಪರಿಚಯವಿಲ್ಲ; ಅವರ್‍ಯಾರನ್ನು ತಾನು ನೋಡಿಯೇ ಇಲ್ಲ. ಅಪ್ಪ ಅವರನ್ನು ನೆನಸಿಕೊಂಡ ನೆನಪೂ ಇಲ್ಲ. ಅಪ್ಪ ಮೂಲತಃ ಆಂಧ್ರದ ಮದನಪಲ್ಲಿಯ ಒಂದು ಹಳ್ಳಿಯವನು. ತನ್ನ ಹದಿನೇಳನೆಯ ವಯಸ್ಸಿನಲ್ಲಿ ಮನೆ ಬಿಟ್ಟು ಕಾರ್ನಾಟಕ ಸೇರಿದನಂತೆ. ಆಂಧ್ರದ ಗಡಿ ತಾಲ್ಲೂಕು ಶ್ರೀನಿವಾಸಪುರದ ಕೊರಗೇನಪಲ್ಲಿಯ ಮುನಿವೆಂಕಟ ಕೃಷ್ಣಪ್ಪಮವರ ಬಳಿ ಬಂದು ಕೆಲಸ ಕೇಳಿದನಂತೆ. ಅವರು 'ನೀನೇನು ಮಾಡಬಲ್ಲೆ' ಅನ್ನುವಂತೆ ನೋಡಿದರಂತೆ. 'ಕೆಲಸ ಕೊಟ್ಟು ನೋಡಿ ಸ್ವಾಮಿ' ಎಂದನಂತೆ ಅಪ್ಪ. ಹುಡುಗನನ್ನು ನೋಡಿ ನಕ್ಕ ಅವರು 'ಪೊಗರಿದೆ, ಬದುಕ್ತಿಯಾ ಮಗನೆ' ಎಂದು ಬೆನ್ನುತಟ್ಟಿದರಂತೆ. ಅವರು ಪಕ್ಕದ ಹಳ್ಳಿ ಗೌನಿಪಲ್ಲಿಯಲ್ಲಿ ಆರು ಎಕರೆ ಮಾವಿನ ತೋಪನ್ನು ಎರಡು ವರ್ಷಕ್ಕೆ ಹಣ್ಣಿನ ಗುತ್ತಿಗೆ ತೆಗೆದು ಕೊಂಡಿದ್ದರು. ಮೊದಲ ವರ್ಷ ಪಲ ಹೆಚ್ಚು ಕಚ್ಚಿರಲಿಲ್ಲ. ಜೊತೆಗೆ ಗೌನಿಪಲ್ಲಿಯ ಜನ ರಾತ್ರೋರಾತ್ರಿ ಫಸಲನ್ನು ಕದಿಯುತ್ತಿದ್ದರು. ತೋಪನ್ನು ನೋಡಿಕೊಳ್ಳಲು ನೇಮಿಸಿದ್ದ ಆಳು ಊರವರ ಜೊತೆ ಶಾಮೀಲಾಗಿದ್ದ. ಈ ವರ್ಷ ಫಸಲು ಚೆನ್ನಾಗಿ ಕಚ್ಚಿತ್ತು. ಅದು ಕೈಗೆ ಬಂದರೆ ಕಳೆದ ವರ್ಷದ ನಷ್ಟವನ್ನು ತುಂಬಿ, ಲಾಭ ತಂದು ಕೊಡುತ್ತಿತ್ತು. ಅವರ ಎದುರಿಗೆ ಅಂದು ಹದಿನಾರು ವರ್ಷದ ಹುಡುಗ ಮುನಿರಾಮಿ ರೆಡ್ಡಿ ಕೆಲಸ ಕೇಳಿ ನಿಂತಿದ್ದ. ಅವರು ಅವನನ್ನು ಮತ್ತೊಮ್ಮೆ ಅಜಮಾಯಿಸಿ ನೋಡಿ 'ಮಾವಿನ ತೋಪು ಕಾಯ್ತಿಯಾ' ಅಂದರು. ಇವನು 'ಆಗಲಿ' ಎಂದ. ಕಾದ. ಹಗಲಿಗಿಂತ ರಾತ್ರಿಹೊತ್ತು ಎಚ್ಚರವಾಗಿರುತ್ತಿದ್ದ. ಗೌನಿಪಲ್ಲಿಯ ಅಂಚಿನಲ್ಲಿ ಸಣ್ಣಪುಟ್ಟ ಕಳ್ಳತನವಾದರೂ ಲೂಟಿಯಾಗಲಿಲ್ಲ. ಮುನಿವೆಂಕಟ ಕೃಷ್ಣಪ್ಪನವರಿಗೆ ಫಸಲು ತುಂಬಾ ಲಾಭ ತಂದಿತು. ಹುಡುಗನ ಕೆಲಸದ ಬಗ್ಗೆ ಸಂತೋಷವಾಯಿತು. ಮಾವಿನ ತೋಪಿನ ಕಾಯುವ ಕೆಲಸ ಮುಗಿದ ಮೇಲೆ ಅವನಿಗೆ ತಿಂಗಳೊಂದಕ್ಕೆ ಐನೂರಿನಂತೆ ಎರಡು ತಿಂಗಳಿಗೆ ಸಾವಿರ ರೂಪಾಯಿ ಕೂಲಿಯಾಗಿ ಬಂತು. ಅವರು ಅವನನ್ನು ತಮ್ಮ ಮನೆಯಲ್ಲೇ ಇದ್ದು ಕೆಲಸ ಮಾಡಿಕೊಂಡಿರು ಎಂದರು. ಅವನು ನಯವಾಗಿ 'ಸ್ವಾಮಿ, ಬಂದಾಗ ಕೆಲ್ಸ ಕೊಟ್ಟ ಧಣಿ ನೀವು. ತಪ್ಪು ತಿಳಿಯಬಾರದು. ನಾನು ಸ್ವತಂತ್ರವಾಗಿ ಏನಾರ ಮಾಡ್ಬೇಕು ಅಂತಿದ್ದೀನಿ. ನಿಮ್ಮ ಸಹಾಯ ಬೇಕು. ಕೇಳ್ತೀನಿ ಮಾಡ್ತೀರಾ ?' ಎಂದ. ಮುನಿವೆಂಕಟ ಕೃಷ್ಣಪ್ಪನವರಿಗೆ ಶ್ರೀಮಂತಿಕೆಗೆ ತಕ್ಕಂತೆ ಭ್ರಮಾತ್ಮಕ ಅಹಂಕಾರವಿತ್ತು. ಯಾವೋನೋ ಏನೋ ಕೇಳುತ್ತಿದ್ದರೆ, ಇಲ್ಲ ಅನ್ನಲು ಮನಸ್ಸು ಬರಲಿಲ್ಲ. 'ಆಯ್ತು, ಏನ್ ಕೇಳು ?' ಎಂದರು. 'ಸ್ವಾಮಿ ನಿಮ್ಮ ತೋಟದಲ್ಲಿ ವ್ಯಾಪಾರಿಗಳು ಫಸಲು ಕೊಯ್ದ ಮೇಲೆ ಅಲ್ಲೊಂದು ಇಲ್ಲೊಂದು ಕೂಳೆ ಉಳ್ಕೊಂಡಿವೆ. ಅವನ್ ನಾನು ಕಿತ್ಕೊಳ್ತೀನಿ. ತಾವು ಅವಕಾಶ ನೀಡ್ಬೇಕು. ಮತ್ತೊಂದು ಮನವಿ ಅಂದರೆ, ಶ್ರೀನಿವಾಸಪುರದ ಪೇಟೆ ಬೀದೀಲಿ ನಿಮ್ಮದೊಂದು ಷೆಡ್ಡು ಇದೆ. ಅದನ್ನು ನನಗೆ ಬಾಡಿಗೆಗ ಕೊಡಬೇಕು. ನಾನು

ಸಣ್ಣಪುಟ್ಟ ವ್ಯಾಪಾರ ಮಾಡ್ಕೋತ್ತೀನಿ. ನಿಮ್ಮ ದಯೆಯಿಂದ ಬದ್ಕೊತ್ತೀನಿ' ಎಂದು ಎರಡೂ ಕೈ ಅಗಲಿಸಿ ಅವರ ಮುಂದೆ ಬೇಡುವವನಂತೆ ನಿಂತ. ಅವರ ಮನಸ್ಸು ಕರಗಿತೋ ಅವರ ಅಹಂ ಹೇಳಿಸಿತೊ 'ಆಯ್ತು ಮಗನೆ, ಬದ್ಕಿಕೋ. ಬಾಡಿಗೆ ಬಂಕ ಏನು ಬೇಡಾ' ಅಂದರು.

ಮುನಿರಾಮಿ ರೆಡ್ಡಿಯ ವ್ಯಾಪಾರ-ವ್ಯವಹಾರ ಅಂದು ಪ್ರಾರಂಭವಾಯಿತು. ಮೊದಲು ಮಾವು ಮಾರಿದ. ಅನಂತರ ಯಾವ್ಯಾವ ಋತುವಿನಲ್ಲಿ ಏನೇನು ಹಣ್ಣು ಇರುತ್ತೋ ಅದನ್ನು ಮಾರಿದ; ಜೊತೆಯಲ್ಲಿ ತರಕಾರಿ ಮಾರಿದ ; ಬರೀ ಇಷ್ಟು ಮಾಡಿದರೆ ಸಾಲದು ಎಂದು ಕೊಂಡು ಊರಿಗೆ ಬರುವ ಹೊಸಬರಿಗೆ ಬಾಡಿಗೆ ಮನೆ ಕೊಡಿಸುವುದು; ಕಮೀಷನ್ ಪಡೆಯುವುದು, ಜಮೀನು ಮಾರಿಸುವುದು, ಮದುವೆ ಮಾಡಿಸುವುದು, ಹಸುಗಳು ಎತ್ತುಗಳನ್ನು ಮಾರಿಸುವುದು- ಹೀಗೆ ಮಾಡಬಹುದಾದ ಕೆಲಸವನ್ನೆಲ್ಲ ಮಾಡಿದ. ಕೇವಲ ಎರಡು ಮೂರು ವರ್ಷಗಳಿಗೆಲ್ಲಾ ಶ್ರೀನಿವಾಸಪುರದ ದಳ್ಳಾಳಿ ಏಜೆಂಟ್ ಮುನಿರಾಮಿ ರೆಡ್ಡಿ ಎಂದು ಪರಿಚಿತನಾದ.

ಮುನಿವೆಂಕಟಕೃಷ್ಣಪ್ಪನವರು ಅವನ ಮೇಲೆ ಒಂದು ಕಣ್ಣಿಟ್ಟಿದ್ದರು. ಹುಡುಗ ಹುಷಾರಾಗಿದ್ದಾನೆ. ಎಲ್ಲಿ ಹೋದರೂ ಬದುಕ್ತಾನೆ ಅಂತ ಅನ್ನಿಸಿತು. ತಮ್ಮ ಮನೆಯಲ್ಲಿದ್ದ ಅನಾಥ ಹುಡುಗಿಯನ್ನು ಮದುವೆಯಾಗುವಂತೆ ಸೂಚಿಸಿದರು. ಮುನಿರಾಮಿ ರೆಡ್ಡಿ ಬೇಡವೆನ್ನಲಿಲ್ಲ. ಅವರ ಋಣದಲ್ಲಿ ತಾನಿರುವುದು ಅವನಿಗೆ ಗೊತ್ತಿತ್ತು. ಮದುವೆಯಾಯಿತು. ಅದಾದ ಒಂದೆರಡು ವರ್ಷಗಳಲ್ಲೇ ಅವನಿಗೆ ಬೆಂಗಳೂರಿನ ರಿಯಲ್ ಎಸ್ಟೇಟ್ ಜಗತ್ತು ಪರಿಚಯವಾಯಿತು. ಅವನು ಹಿಂತಿರುಗಿ ನೋಡಲೇ ಇಲ್ಲ.

ಸುಮೊ ಬಾಬುರಾಯನ ಕೊಪ್ಪಲನ್ನು ಪ್ರವೇಶಿಸಿತು. ಈ ಕಡೆ ಬಾಬುರಾಯನ ಕೊಪ್ಪಲು ಆ ಕಡೆ ಕಿರಂಗೂರು. ಮೈಸೂರು - ಬೆಂಗಳೂರು ರಸ್ತೆ ಎರಡು ಊರುಗಳನ್ನು ಸವರಿ ಸಾಗುತ್ತದೆ. ರಸ್ತೆಯ ಇಕ್ಕೆಲಗಳಲ್ಲಿ ಮಿಲ್ಟ್ರಿ ಹೋಟೆಲ್ಲುಗಳು , ಬಾರ್‌ಗಳು. ಮಿಲ್ಟ್ರಿ ಹೋಟೆಲ್ಲುಗಳಲ್ಲೂ ಗುಂಡು ಸಪ್ಲೈ ಆಗುತ್ತದೆ. ಮೈಸೂರು-ಬೆಂಗಳೂರು ಹೆದ್ದಾರಿಯಲ್ಲಿ ಚಲಿಸುವ ಲಾರಿಗಳು, ಭಾರಿಟ್ರಕ್ಕುಗಳ ಕ್ಲೀನರ್‌ಗಳು, ಡ್ರೈವರ್‌ಗಳು ರಸ್ತೆ ಬದಿಯಲ್ಲಿ ಗಾಡಿಗಳನ್ನು ನಿಲ್ಲಿಸಿ, ಗುಂಡು ಹಾಕಿ ಊಟ ಮಾಡಿ ವಿಶ್ರಮಿಸಿ ಕೊಳ್ಳುತ್ತಾರೆ. ಅವರ ಜೊತೆಗೆ ಬೇರೆಯವರು ಸೇರಿರುತ್ತಾರೆ. ರಾಗಿ ಮುದ್ದೆ, ತಲೆ ಮಾಂಸ, ಬೋಟಿ ಇಲ್ಲಿ ಪ್ರಸಿದ್ಧ. ರೆಡ್ಡಿ, ಮಹೇಶ ಇಲ್ಲಿ ಹತ್ತಾರು ಭಾರಿ ಊಟ ಮಾಡಿದ್ದಾರೆ.

ರೆಡ್ಡಿ ತನ್ನಲ್ಲಿ ತಾನು "ಆದರೆ ಇಂದು ಇಲ್ಲಿ ಊಟ ಇಲ್ಲ. ಭರ್ಜರಿ ಊಟ ಮುಂದೆ ಮಾಡೋಣ" ಅಂದು ಕೊಂಡ.

## ಅಧ್ಯಾಯ : ಹದಿಮೂರು

ಭೂಮಿಗೌಡ ಸುಮೊ ಕಿರಂಗೂರು ಸರ್ಕಲ್ಲಿಗೆ ಬರುವುದನ್ನು ನೋಡಿದ. ತಿಂಗಳು ಆಗಲೇ ಆಕಾಶದಲ್ಲಿ ನಾಲ್ಕಾರು ಮಾರು ಮೇಲೆ ಬಂದಿದ್ದ. ರಸ್ತೆ ದೀಪಗಳು ಬೆಳಕದಿಂಗಳ ಬೆಳಕಿನ ಜೊತೆ ಮಿಳತವಾಗಿ ಒಂದು ಬಗೆಯ ಅಸಹಜ ಸೊಗಸು ಕಾಣುತ್ತಿತ್ತು. ದೂರದಲ್ಲಿ ಶ್ರೀರಂಗಪಟ್ಟಣದ ದೀಪಗಳು ಮಿನುಗುತ್ತಿದ್ದವು. ಮೈಸೂರಿನಿಂದ ಬೆಂಗಳೂರು ಕಡೆ ಬರುವ ರಸ್ತೆ ಈ ಸರ್ಕಲ್ಲಿನಲ್ಲಿ ಎರಡು ಕವಲಾಗಿ ಸೀಳುತ್ತದೆ. ಒಂದು ನೇರವಾಗಿ ಬೆಂಗಳೂರಿಗೆ ಸಾಗಿದರೆ, ಮತ್ತೊಂದು ಪಾಂಡವಪುರದ ಕಡೆಗೆ ಕವಲೊಡೆಯುತ್ತದೆ. ಆ ರಸ್ತೆ ಪಾಂಡವರ ರೈಲು ನಿಲ್ದಾಣದ ಬಳಿ ಮತ್ತೆ ಎರಡು ಕವಲಾಗುತ್ತದೆ. ಒಂದು ಕವಲು ಪಾಂಡವ ಪುರ ಟೌನ್ ಮೂಲಕ ನಾಗಮಂಗಲ, ಮಾಯಸಂದ್ರ ಮಾರ್ಗವಾಗಿ ತುಮಕೂರನ್ನು ಸೇರಿದರೆ, ಮತ್ತೊಂದು ಚನ್ನರಾಯ ಪಟ್ಟಣ, ಅರಸೀಕೆರೆ ಮಾರ್ಗವಾಗಿ ಶಿವಮೊಗ್ಗವನ್ನು ಸೇರುತ್ತದೆ.

ಸುಮೊ ಸರ್ಕಲ್ಲನ್ನು ದಾಟಿ ಶ್ರೀರಂಗಪಟ್ಟಣದಲ್ಲಿ ಕಾವೇರಿ ನದಿಗೆ ಅಡ್ಡಲಾಗಿ ಕಟ್ಟಿರುವ ಸೇತುವೆಯ ಮೇಲೆ ಬಂತು. ಕಾವೇರಿ ನಿಶ್ಯಬ್ದವಾಗಿ ಹರಿಯುತ್ತಿದ್ದಳು. ಚಂದಿರ ನೀರಿನಲ್ಲಿ ಪ್ರತಿಫಲಿಸುತ್ತಿದ್ದ. ಶ್ರೀರಂಗಪಟ್ಟಣದ ಎತ್ತರದ ಗೋಪುರದ ದೀಪಗಳು ಸಣ್ಣ ಸಣ್ಣ ನಕ್ಷತ್ರಗಳಂತೆ ಚಂದ್ರನ ಸುತ್ತ ಮಿನುಗುತ್ತಿರುವಂತೆ ತೋರುತ್ತಿತ್ತು. ಭೂಮಿಗೌಡನಿಗೆ ರಾತ್ರಿ ವೇಳೆ ಈ ನದಿಯನ್ನು ನೋಡುವುದು ಅಂದರೆ ಇಷ್ಟ. ಮಳೆಗಾಲದ ಆರಂಭದಲ್ಲಿ ಒಂದಷ್ಟು ದಿನ ರಭಸದಿಂದ ಹರಿಯುತ್ತಾಳೆ; ಅದರಲ್ಲೂ ಒಂದು ಘನ ಗಾಂಭೀರ್ಯತೆಯಿರುತ್ತದೆ. ವಿಸ್ತಾರವಾದ ತನ್ನ ಪಾತ್ರದಲ್ಲಿ ತೂಕದ ಹೆಣ್ಣಿನಂತೆ ತೂಗಿ ನಲಿದು ಸಾಗುವ ಪರಿಯನ್ನು ನೋಡಲೆಂದೇ ಅನೇಕ ಸಾರಿ ಮೈಸೂರಿನಿಂದ ಗೌಡ ಬರುತ್ತಿದ್ದ. ಈಗ ಬೇಸಿಗೆ ನದಿಯಲ್ಲಿ ಅಂಥ ನೀರಿಲ್ಲ. ಅಲ್ಲಲ್ಲಿ ಎದ್ದ ಕಲ್ಲು ಕೊರಚಲುಗಳ ನಡುವೆ ಸಾಗಿ, ವಿಸ್ತಾರವಾದ ಬಯಲಲ್ಲಿ ಹರಡಿ ಅಗಲವಾಗಿ, ಮತ್ತೆ ಇರುಕಾಗಿ ಚುರುಕಾಗಿ ನಲಿಯುತ್ತಾ ಕಾವೇರಿ ಹರಿಯುತ್ತಿದ್ದಳು. ಇದು ಕಾವೇರಿಯ ಎರಡು ಕವಲಲ್ಲಿ ಒಂದು ! ಮತ್ತೊಂದು ಕವಲು ಶ್ರೀರಂಗಪಟ್ಟಣವನ್ನು ಬಲಭಾಗದಿಂದ ಬಳಸಿ ಹರಿಯುತ್ತದೆ.

ಇವಳು ಬೇಸಿಗೆಯಲ್ಲಿ ತೆಳುವಾದಂತೆ, ಬತ್ತಿ ಬಸವಳಿದಂತೆ ಕಂಡರೂ ಇವಳನ್ನು ಅರ್ಥಮಾಡಿಕೊಳ್ಳುವುದೇ ಕಷ್ಟ. ಮಂಡಿ ಉದ್ದದತೊರೆಯಂತೆ ಕಾಣುವ ಇವಳು ತನ್ನೊಳಗೆ ಅಪಾರ ಸುಳಿಯನ್ನು ಸೃಷ್ಟಿಸಿ ಕೊಂಡಿರುತ್ತಾಳೆ. ಇಲ್ಲಿ ಒಂದಡಿ ತಳದಲ್ಲಿ ಮರಳು ಕಂಡರೆ, ಅಲ್ಲಿ ನಾಲ್ಕೇ ಅಡಿ ದೂರದಲ್ಲಿ ಪಾತಾಳದ ಬಾಗಿಲು ತೆರೆದು ಕಾದಿರುತ್ತಾಳೆ. ಬೇಸಿಗೆಯಲ್ಲಿ ನೀರಿಲ್ಲವೆಂದು ನದಿಗೆ ಇಳಿದು ಪ್ರಾಣ ಕಳೆದುಕೊಂಡವರೇ ಹೆಚ್ಚು. ನದಿಯನ್ನು ಅದರ ಮನವನ್ನು ಅರ್ಥ ಮಾಡಿಕೊಳ್ಳುವುದು ಕಷ್ಟ. ಅದು ಪ್ರಕೃತಿಯ ಬೆರಗು. ಅದರೊಡನೆ

ಗುದ್ದಾಡಬಾರದು, ಸರಸವಾಡಬಾರದು. ಅಮ್ಮನ ರೀತಿ ಒಲಿಸಿ ಕೊಂಡು ಆರೈಕೆ ಮಾಡಿಸಿಕೊಳ್ಳಬೇಕು.

ಭೂಮಿಗೌಡನಿಗೆ ಕಾವೇರಿಯ ರಾಜಕೀಯ ಗೊತ್ತು. ಅವಳ ಮಕ್ಕಳು ಅವಳ ಹಕ್ಕಿಗಾಗಿ ಹೋರಾಡುವುದು ಗೊತ್ತು. ಅವಳ ಬೆನ್ನು ಬಿದ್ದು ಸೋತು ಗೆದ್ದಿರುವುದು ಗೊತ್ತು. ಅದನ್ನೆಲ್ಲಾ ಕೇಳಿಸಿಕೊಂಡು, ಕಣ್ಣಾರೆ ಕಂಡು, ಅರಿತೂ ಅರಿಯದವಳಂತೆ ಸಾಗುವ ಅವಳ ಪರಿ ಬದುಕಿನ ಸಂಕೇತವೆಂಬಂತೆ ಕಂಡಿದೆ.

ಆಗ ಚಂದ್ರಿಕಾ ತನ್ನನ್ನು ಏನೆಂದು ಕೇಳಿದಳು ? ಬದುಕಿನಲ್ಲಿ ನಾವಂದು ಕೊಂಡಂತೆ ನಡೆಯುವುದೆ ? ಪ್ರಶ್ನೆ ! ಆ ಪ್ರಶ್ನೆಗೆ ತಾನು ಉತ್ತರ ನೀಡಲಿಲ್ಲ. ಸುಮ್ಮನೆ ಅವಳ ಕಡೆ ನೋಡಿ ನಕ್ಕಿದ್ದ. ಏಕೆ ? ಉತ್ತರ ಗೊತ್ತಿಲ್ಲವೆ ? ಗೊತ್ತಿರುವ ಉತ್ತರವನ್ನು ಹೇಳಲು ಹೆದರಿಕೆಯೇ ? ಯಾವಾಗಲೂ ಸತ್ಯವನ್ನು ಎದುರಿಸುವುದು ಕಷ್ಟವಾಗುತ್ತದೆ.

ಭೂಮಿಗೌಡನಿಗೆ ನೆನಪುಗಳು ಕಾಡ ತೊಡಗಿದವು. ಅವನು ಚಂದ್ರಿಕಾಳ ಮುಖವನ್ನು ನೋಡಿದ- ಆ ನೆನಪುಗಳನ್ನು ವರ್ತಮಾನಕ್ಕೆ ಎಳೆದು ತರುವವನಂತೆ, ಅವಳು ಕೇಳಿದ ಪ್ರಶ್ನೆಗೆ ಉತ್ತರವನ್ನು ಹುಡುಕಾಡುವವನಂತೆ.

ಅವಳ ಹೆಸರು ವಾಸಂತಿ. ಅದೇನೋ ಹೇಳ್ತಾರಲ್ಲ. ಪ್ರಥಮ ನೋಟದಲ್ಲೇ ಪ್ರೇಮಾಂಕುರ ಅಂತ, ಹಾಗೆ ಖಂಡಿತ ಅಲ್ಲ. ಅವಳು ಅವನ ಸಹಪಾಠಿಯಲ್ಲ, ವಿದ್ಯಾರ್ಥಿನಿಯೂ ಅಲ್ಲ. ಅವಳನ್ನು ಅವನನ್ನು ಬಂಧಿಸಿದ್ದು ಒಂದು ಸಮಾನ ಆಸಕ್ತಿ. ಅದು ಚಾರಣ. ಒಮ್ಮೆ ಬಿಳಿಗಿರಿರಂಗನ ಬೆಟ್ಟಕ್ಕೆ ಹೊರಟ ಚಾರಣದ ತಂಡದಲ್ಲಿ ಅವಳು ಅವನಿಗೆ ಪರಿಚಯವಾದಳು. ಆಟಗಾರರ ಎಲ್ಲ ಗುಣ ಲಕ್ಷಣ ಅವಳ ಮೈಮೇಲೆ ಎದ್ದು ಕಾಣುತ್ತಿತ್ತು. ಅಷ್ಟೇನು ಬೆಳ್ಳಗಿಲ್ಲದ ಬಣ್ಣ. ಆದರೆ ಅದರಲ್ಲೊಂದು ಹೊಳಪಿತ್ತು. ನೀಳವಾದ ಕೈಕಾಲುಗಳು. ಆಟಗಾರ ಹೆಣ್ಣು ಮಕ್ಕಳಲ್ಲಿರುವ ಗಡಸುತನ ಅವಳಲ್ಲಿರುವ ಹೆಣ್ತನದ ಮೈಮಾಟವನ್ನೂ ಮರೆಮಾಚಿತ್ತು. ಬಿಗಿಯಾದ ಪ್ಯಾಂಟು, ಮೇಲೊಂದು ಟೀ ಷರ್ಟ್ ಅಥವ ದೊಗಳೆ ದೊಗಳೆಯಾಗಿರುವ ಚೂಡಿದಾರ್ ಅವಳ ಉಡುಪು. ಅವಳ ತೆಳುವಾದ ನಡುವಾಗಲಿ, ಎದೆಯ ಭಾಗದ ಉಬ್ಬು ತಗ್ಗಾಗಲಿ ಸರಿಯಾಗಿ ವ್ಯಕ್ತವಾಗುತ್ತಿರಲಿಲ್ಲ.

ಬಿಳಿಗಿರಿ ರಂಗನಬೆಟ್ಟದ ಕಡಿದಾದ ಕೋಡನ್ನು ಹತ್ತುವ ಪ್ರಯತ್ನದಲ್ಲಿ ಸಾಕಾಗಿ ತಂಡದ ಐದಾರು ಜನ ಗಂಡಸರು ತಮ್ಮ ಪ್ರಯತ್ನವನ್ನು ಅರ್ಧಕ್ಕೆ ಕೈ ಬಿಟ್ಟಿದ್ದರು. ಭೂಮಿಗೌಡ ಸೊಂಟಕ್ಕೆ ಕಟ್ಟಿದ್ದ ಹಗ್ಗದ ಸಹಾಯದಿಂದ, ಕೋಡಿನ ಸಂದುಗಳನ್ನು ಗುರುತಿಸಿ ಗ್ಲೌಸ್ ಧರಿಸಿದ್ದ ಬೆರಳುಗಳಿಂದ ಹಿಡಿದು, ಸಮತೋಲನ ಸಾಧಿಸಿ ಮುನ್ನುಗ್ಗುತ್ತಿದ್ದ. ಅವನಿಗಿಂತ ಐದು ಅಡಿ ಕೆಳಗೆ ಇವನು ಸೊಂಟಕ್ಕೆ ಕಟ್ಟಿದ್ದ ಹಗ್ಗದ ಮತ್ತೊಂದು ತುದಿಯನ್ನು ತನ್ನ ಸೊಂಟಕ್ಕೆ ಕಟ್ಟಿಕೊಂಡು ವಾಸಂತಿ ಅವನನ್ನು ಹಿಂಭಾಲಿಸುತ್ತಿದ್ದಳು. ಇದೇ ರೀತಿಯ ಕಡುಬೇಸಿಗೆ. ಅತಿಯಾದ ಬಿಸಿಲು. ಆದರೂ ಸೊಯ್ಯೆಂದು ಬೀಸುವಗಾಳಿ. ಮೈಯಿಂದ ಬೆವರು ತೊಟ್ಟಿಕ್ಕುತ್ತಿತ್ತು. ಕಲ್ಲಿನ ಎರಡು ಆಯಕಟ್ಟಿನ ಕುಳಿಯಲ್ಲಿ ಕಾಲನ್ನು ಭದ್ರವಾಗಿಟ್ಟು,

ಮೃದುವಾಗಿ ಹಗ್ಗವನ್ನು ಜಿಡಿದು ವಾಸಂತಿಯ ಗಮನವನ್ನು ತನ್ನ ಕಡೆಗೆ ಸೆಳೆದ, ಏನೆಂಬಂತೆ ಅವನನ್ನು ನೋಡಿದಳು. ಸ್ವಲ್ಪ ನಿಲ್ಲುವಂತೆ ಸೂಚಿಸಿ, ಒಂದು ಕೈಯಿಂದ ಮೇಲಿನ ಹಗ್ಗವನ್ನು ಭದ್ರವಾಗಿಡಿದು, ತನ್ನ ಪ್ಯಾಂಟಿನ ಜೇಬಿನಲ್ಲಿ ಸಿಕ್ಕಿಸಿಕೊಂಡಿದ್ದ ನೀರಿನ ಬಾಟಲನ್ನು ತೆಗೆದು, ಬಾಯಲ್ಲಿ ಬಿರುಡೆಯನ್ನು ತೆರೆದು ನೀರು ಕುಡಿದ. ಅವಳು ಅವನನ್ನು ನೋಡಿ, ನಕ್ಕು, ತಾನೂ ನೀರು ಕುಡಿದಳು. ಅವಳು ನೀರಿನ ಬಾಟಲನ್ನು ಜೇಬಿಗೆ ಸೇರಿಸಿ, ಗುಂಡಿ ಹಾಕಿ, ತಲೆ ಎತ್ತಿ ಅವನನ್ನು ನೋಡಿದಳು. ಅವನು ಶುಂಠಿ ಪೆಪ್ಪರ್‌ಮೆಂಟನ್ನು ತನ್ನ ಬಾಯಿಗೆ ಹಾಕಿಕೊಂಡು, ಮತ್ತೊಂದನ್ನು ಅವಳಿಗೆ ತೋರಿಸಿ, 'ಕ್ಯಾಚ್' ಎಂದು ಎಸೆದನು. ಅವಳು ಅಷ್ಟೆ ಚುರುಕಾಗಿ ಅದನ್ನು ತನ ಎಡಗೈಲಿ ಹಿಡಿದು ತನ್ನ ಬಾಯಿಗೆ ಎಸೆದುಕೊಂಡಳು. ಅವನನ್ನು ನೋಡಿ 'ಥ್ಯಾಂಕ್ಸ್' ಎಂದಳು. ಮೇಲಿನಿಂದ ಅವಳು ಅವನಿಗೆ ಮೋಹಕವಾಗಿ ಕಂಡಳು. ಬೆಟ್ಟವನ್ನು ಅಪ್ಪಿ ನಿಂತಿರುವ ಅವಳ ಹಣೆಯ ಮೇಲೆ ಮುತ್ತಿನಿಂಥ ಬೆವರ ಸಾಲುಗಳು. ಸಂಪೂರ್ಣ ಬೆನ್ನು ತೊಯ್ದಿತ್ತು. ಕೊರಳ ಸುತ್ತಲಿನಿಂದ ಇಳಿದ ಬೆವರುನೀರು ಅವಳ ಎರಡು ಸ್ತನಗಳು ಮಧ್ಯೆ ಇಳಿದು, ಆ ಭಾಗದ ಅವಳ ಷರ್ಟನ್ನು ನೆನೆಸಿತ್ತು. ಅವಳು ಬಿಡುತ್ತಿದ್ದ ಏದುಸಿರು ಸ್ತನಗಳ ಏರಿಳಿತಕ್ಕೆ ಒಂದು ಲಯವನ್ನು ತಂದು ಕೊಟ್ಟಿತ್ತು.

ಬೆಳಿಗ್ಗೆ ತಂಪು ಹೊತ್ತಿನಲ್ಲೇ ಕೋಡು ಹತ್ತಲು ಪ್ರಾರಂಭಿಸಿದ್ದು, ಹತ್ತು-ಹತ್ತೂವರೆಯ ಹೊತ್ತಿಗೆ ಕೋಡಿನ ಶಿಖರವನ್ನು ಮುಟ್ಟಬೇಕಿತ್ತು. ಇನ್ನೇನು ಹದಿನೈದು ಅಡಿ ಇರಬಹುದು. ಕೋಡು ತುದಿಯಲ್ಲಿ ಸ್ವಲ್ಪ ಮುಂದೆ ಭಾಗಿ,ಹತ್ತಲು ತ್ರಾಸದಾಯಕವಾಗಿ, ಸವಾಲಾಗಿ ನಿಂತಿತ್ತು. ಭೂಮಿಗೌಡ ಒಮ್ಮೆ ಆ ಭಾಗವನ್ನು ನಿಡಿದಾಗಿ ನೋಡಿ, ಕೈಕಾಲು ಇಡಲು ಇರಬಹುದಾದ ಜಾಗಗಳನ್ನು ಕಣ್ಣಲ್ಲೇ ಗುರುತಿಸಿ ಮುಂದುವರಿದ.

ಆಗ ಅಚಾನಕ್ಕಾಗಿ ಒಂದು ಗಟನೆ ನಡೆಯಿತು. ಬೆಟ್ಟದ ಕೋಡಿನ ತುದಿಯಲ್ಲಿ ಮುಂದೆ ಬಾಗಿದ್ದ ಶಿಲಾಛತ್ರಿ ಆಕಾರದ ಒಳ ಭಾಗದಲ್ಲಿ ಹೆಜ್ಜೇನು ಗೂಡುಕಟ್ಟಿದ್ದವು. ಇವರು ಹತ್ತುತಿದ್ದ ನೇರಕ್ಕೆ, ಸಮಾನಾಂತರವಾಗಿ ಎಡಕ್ಕೆ ಸುಮಾರು ಅರವತ್ತು-ಎಪ್ಪತ್ತು ಅಡಿ ದೂರದಲ್ಲಿ ಗೂಡುಗಳಿದ್ದವು. ಬೆಟ್ಟ ಹತ್ತುವುದಕ್ಕೆ ಮೊದಲು ಇವರು ಅದನ್ನು ನೋಡಿಯೇ ಆ ಜಾಗವನ್ನು ಬಿಟ್ಟು ದೂರಕ್ಕೆ ಸರಿದಿದ್ದರು. ಛತ್ರಿಯಾಕಾರದಲ್ಲಿ ಬಾಗಿದ್ದ ನೆರಳಿನ ಜಾಗದಲ್ಲಿ ಸಾವಿರಾರು ಪೊಟರೆಗಳಿದ್ದವು. ಅಲ್ಲಿ ಸಾವಿರಾರು ಕಾಡು ಪಾರಿವಾಳಗಳು ಗೂಡುಕಟ್ಟಿದ್ದವು. ಜೇನುಗಳದ್ದು ಅವುಗಳದ್ದು ಅನುರೂಪದ ಹೊಂದಾಣಿಕೆ ! ಜೊತೆಯಲ್ಲೇ ಬಾಳಿ ಬದುಕುವುದನ್ನು ಅವು ಕಲಿತಿದ್ದವು. ಒಮ್ಮೊಮ್ಮೆ ಕೆಲವು ಅವಗಡಗಳು ಸಹಬಾಳ್ವೆಯ ಕೈಮೀರಿ ನಡೆಯುತ್ತಿದ್ದವು. ಅಂಥ ಒಂದು ಅವಗಡ ಇಂದು ನಡೆದು ಹೋಯಿತು.

ಒಂದು ದೊಡ್ಡ ಜೇನಿನ ಅಟ್ಟೆ ಇದ್ದ ಜಾಗಕ್ಕೆ ಐದಾರು ಅಡಿ ದೂರದಲ್ಲಿ ಒಂದು ಪಾರಿವಾಳದ ಪೊಟರೆಯಿತ್ತು. ಅಲ್ಲಿ ಕಿತ್ತಾಡುತ್ತಾ ರೆಕ್ಕೆ ಬಡಿಯುತ್ತಾ ಜಗಳವಾಡುತ್ತಾ ನೇರವಾಗಿ ಹೆಜ್ಜೇನಿನ ಅಟ್ಟೆಗೆ ಡಿಕ್ಕಿ ಹೊಡೆದವು. ತಾವು ಮಾಡಿದ ತಪ್ಪಿನ ಅರಿವಾದ ಪಾರಿವಾಳಗಳು ಅಲ್ಲಿಂದ ಪೇರಿ ಕಿತ್ತು ಭೂಮಿಗೌಡ, ವಾಸಂತಿ ಇದ್ದ ದಿಕ್ಕಿಗೆ ಹಾರಿದವು. ಪಾರಿವಾಳಗಳ

ಡಿಕ್ಕಿಯಿಂದ ಅಘಾತಗೊಂಡ ಜೇನುನೊಣಗಳು ಕೋಪದಿಂದ ಕುದಿದು ಪಾರಿವಾಳಗಳನ್ನು ಅಟ್ಟಿಸಿಕೊಂಡು ಹೊರಟವು.

ತಲೆ ಎತ್ತಿ ಮೇಲೆ ನೋಡುತ್ತಿದ್ದ ಬೂಮಿಗೌಡನಿಗೆ ಕೋಡಿನ ಎಡಭಾಗದಲ್ಲಿ 'ಜೊಯ್ ಯ್.......' ಎಂಬ ಸದ್ದು ಕೇಳಿಸಿದಂತಾಗಿ ಅತ್ತ ಕತ್ತು ತಿರುಗಿಸಿದ. ಒಮ್ಮೆ ಜೀವ ಜುಮ್ಮೆಂದಿತ್ತು. ಒಂದಲ್ಲ ಎರಡಲ್ಲಿ ಲಕ್ಷಗಟ್ಟಳೆ ಜೇನು ನೊಣಗಳ ಪ್ರವಾಹ ಪಾರಿವಾಳಗಳ ಹಿಂದೆ ತನ್ನತ್ತಲೇ ಗುರಿ ಇಟ್ಟಂತೆ ಬರುತ್ತಿವೆ. ತಕ್ಷಣ ಕೆಳಗೆ ನೋಡಿದ. ನೂರು ಅಡಿಗೂ ಕೆಳಗೆ ಮರ ಗಿಡಗಳು ಕುಳ್ಳಗೆ ಕಾಣುತ್ತಿದ್ದವು. ಇವುಗಳ ಹೊಡೆತಕ್ಕೆ ಸಿಲುಕಿದರೆ ನಾವು ಕೆಳಗೆ ಬೀಳುವುದು ನಿಶ್ಚಿತ. ಎಚ್ಚರಗೊಳ್ಳಬೇಕು. ತಲೆ ಬಳಸಬೇಕು. ತಕ್ಷಣ ಎರಡು ಅಡಿ ಕೆಳಕ್ಕೆ ಜಾರಿದ ಅವನು ವಾಸಂತಿಯ ದೃಷ್ಟಿಯನ್ನು ಜೇನುಗಳತ್ತ ಸೆಳೆದು "ಕಲ್ಲಿಗೆ ಆತುಕೊಂಡು ಮಲಗಿದಂತೆ ಅಪ್ಪಿರಿ, ದೇಹ ಅಲುಗಾಡಿಸಬೇಡಿ" ಅಂದ. ಅವಳು ಚುರುಕಾಗಿದ್ದಳು. ಹಗ್ಗದ ಮೇಲು ಭಾಗವನ್ನು ಭದ್ರವಾಗಿಡಿದು ಕಲ್ಲಿಗೆ ನೇರವಾಗಿ ನಿಂತಂತೆಯೇ ಅಪ್ಪಿದಳು. ಅದೇ ಹಗ್ಗವನ್ನು ಹಿಡಿದು ಮತ್ತೆ ಕೆಳಕ್ಕೆ ಜಾರಿದ ಭೂಮಿಗೌಡ ತನ್ನ ಇಡೀ ದೇಹವನ್ನು ಅವಳ ಮೇಲೆ ತಂದು ಅವಳನ್ನು ಮುಚ್ಚಿಕೊಳ್ಳುವಂತೆ ಬಳಸಿ, ಅವಳ ಬೆನ್ನಿಗೆ ಆತು ನಿಶ್ಚಲನಾಗಿ ನಿಂತನು. ಐದಾರು ಸೆಕೆಂಡುಗಳಲ್ಲಿ ಜೇನಿನ ಹಿಂಡು ಅವರನ್ನು ಆವರಿಸಿತು. ನಿಶ್ಚಲತೆಯನ್ನು ಗಮನಿಸಿ, ಅನುಭವಿಸಿ ಅಲ್ಲಿಂದ ಪಾರಿವಾಳಗಳ ಜಾಡು ಹಿಡಿದು ಮುಂದಕ್ಕೆ ಹಾರಿತು. ಕೆಲವು ಕ್ಷಣ ಇಬ್ಬರ ಉಸಿರಾಟ ನಿಂತಿತ್ತು. ಅವರ ಮೈಯಿಂದ ಬೆವರು ತೊಟ್ಟಿಕ್ಕುತ್ತಿತ್ತು. ವಾಸಂತಿಯನ್ನು ಸಂಪೂರ್ಣ ಆವರಿಸಿ ನಿಂತಿದ್ದ ಭೂಮಿಗೌಡನ ದೇಹ ಪ್ರಕೃತಿಯಾಟದ ಪರಿಣಾಮವಾಗಿ ಪಟಪಟನೆ ಮಿಡಿಯುತ್ತಿತ್ತು. ಜೇನು ಹಿಂಡು ಬಹುಮುಂದೆ ಕರ್‍ರನೆಯ ಉಂಡೆಯಂತೆ ಕಾಣುತ್ತಿತ್ತು. ತನ್ನ ಅಡಿಯಲ್ಲಿ ಮಿಸುಕಾಡದೆ ಇದ್ದ ವಾಸಂತಿಯ ಮೇಲಿನ ಹಗ್ಗವನ್ನು ಒಂದೊಂದೆ ಹಿಡಿತದಲ್ಲಿ ಹಿಡಿದು ಮೇಲೇರಿದ. ಅವಳಿಂದ ಎರಡು ಅಡಿ ಮೇಲಕ್ಕೆ ಬಂದನಂತರ ಅವಳ ಕಡೆ ನೋಡಿದ. ಅವಳು ತಲೆ ಎತ್ತಿ ಅವನನ್ನೇ ನೋಡುತ್ತಿದ್ದಳು. ಆ ನೋಟದಲ್ಲಿ ಸ್ನೇಹ, ಪ್ರೀತಿ, ಕೃತಜ್ಞತೆ-ಭಾವಗಳ ಮಿಶ್ರಣವಿತ್ತು.

ಮುಂದಿನ ದಿನಗಳು ಅವರ ಬಾಳಿನ ಅತ್ಯಂತ ಸುಖದದಿನಗಳಾಗಿದ್ದವು. ಅವಳು ಎಂಪಿಎಡ್‌ನಲ್ಲಿ ಸ್ನಾತಕೋತ್ತರ ಪದವಿಯನ್ನು ಪಡೆದು ಸ್ಥಳೀಯ ಮಹಿಳಾ ಕಾಲೇಜಿನಲ್ಲಿ ಕ್ರೀಡಾ ನಿರ್ದೇಶಕಿಯಾಗಿದ್ದಳು. ಭೂಮಿಗೌಡನಿಗಿಂತ ವಯಸ್ಸಿನಲ್ಲಿ ಒಂದೆರಡು ವರ್ಷ ಕಿರಿಯಳು. ಪರಸ್ಪರ ಭೇಟಿಯಾಗುವುದು, ಪ್ರೇಕ್ಷಣೀಯ ಸ್ಥಳಗಳಿಗೆ ಭೇಟಿ ನೀಡುವುದು, ಬೆಟ್ಟಗುಡ್ಡ ಹತ್ತುವುದು ಸಾಮಾನ್ಯವಾಯಿತು. ಪರಸ್ಪರ ಹತ್ತಿರವಾದರು. ಒಬ್ಬರನ್ನೊಬ್ಬರನ್ನು ಬಿಟ್ಟಿರಲಾರದ ಸ್ಥಿತಿಗೆ ಬಂದರು. ತಾವು ಪರಸ್ಪರ ಪ್ರೀತಿಸುತ್ತಿದ್ದೇವೆ, ಮದುವೆಯಾಗೋಣ ಎಂಬ ನಿಲುವಿಗೆ ಬಂದರು. ಭೂಮಿಗೌಡ ಅವಳ ಬಗ್ಗೆ ತನ್ನ ಮನೆಯವರಿಗೆ ತಿಳಿಸಿದ. ಅವ್ವ ಅಪ್ಪ ಮೊದಲು ಜಾತಿ ಬೇರೆಯೆಂದು ಸ್ವಲ್ಪ ಗೊಣಗಿದರು. ಮಗನ ಸ್ವಭಾವ ತಿಳಿದಿದ್ದ ಅವರು ಅನಂತರ ಒಪ್ಪಿಗೆ ನೀಡಿದ್ದರು. ಆದರೆ ವಾಸಂತಿಯ ಮನೆಯಲ್ಲಿ ಈ ತೆರನ ಉದಾರ ಮನಸ್ಥಿತಿ ಇರಲಿಲ್ಲ. ತಮ್ಮ ಜಾತಿಗಿಂತ ಕೆಳಜಾತಿಯ ಹುಡುಗನನ್ನು ಅವಳು

ಮದುವೆಯಾಗುವುದು ಅವರಿಗೆ ಸುತಾರಾಂ ಇಷ್ಟವಿರಲಿಲ್ಲ. ಅದರ ಜೊತೆಗೆ ಸ್ವಾರ್ಥವೂ ಇತ್ತು. ಅದೇಂದರೆ-ವಾಸಂತಿ ಅವರ ಅಪ್ಪ ಅಮ್ಮನಿಗೆ ಮೊದಲನೇ ಮಗಳು. ಅವರ ಅಪ್ಪ ತುಂಬ ತಡವಾಗಿ ಮದುವೆಯಾಗಿದ್ದುದರಿಂದ ಇತರ ಮಕ್ಕಳು ವಿದ್ಯಾಭ್ಯಾಸ ಮುಗಿಸುವ ಮುನ್ನವೇ ಗುಮಾಸ್ತ ಹುದ್ದೆಯಿಂದ ನಿವೃತ್ತರಾಗಿದ್ದರು. ಇವಳೊಬ್ಬಳ ಓದು ಮುಗಿದು ಕೆಲಸಕ್ಕೆ ಸೇರಿದಳು. ಸಂಸಾರ ಪಾಲನೆಯಲ್ಲಿ ಇವಳದೇ ಸಿಂಹಪಾಲು. ಅಪ್ಪ ಅಮ್ಮನಿಗೆ ಹೆದರಿಕೆ ! ನಾಳೆ ಇವಳು ಮದುವೆಯಾಗಿ ಗಂಡನ ಮನೆ ಸೇರಿದರೆ ? ಸಂಸಾರದ ಗತಿ ? ಉಳಿದ ಮಕ್ಕಳು ವಿದ್ಯಾಭ್ಯಾಸ ಮುಗಿಸಿ ಒಂದು ನೆಲೆ ಕಾಣುವುದಾದರೂ ಹೇಗೆ ? ಅದನ್ನು ನೇರವಾಗಿ ಹೇಳುವುದು ಹೇಗೆ ? ಅದರ ಬದಲು ಜಾತಿಯನ್ನು ದೊಡ್ಡ ಭೂತವನ್ನಾಗಿ ಮಾಡಿದ್ದರು. ಅವಳಿಗೆ ಅಪ್ಪ ಅಮ್ಮಂದಿರ ವರ್ತನೆ ಒಮ್ಮೆ ತಂತ್ರಗಾರಿಕೆಯಂತೆ ಕಂಡು ಕೋಪ ಬರುತ್ತಿತ್ತು. ಒಮ್ಮೊಮ್ಮೆ ಅವರ ಅಸಹಾಯಕತೆಯನ್ನು ಕಂಡು ಮರುಕವಾಗುತ್ತಿತ್ತು. ವಾಸಂತಿ ಬೆಳೆದ ಹುಡುಗಿ. ಲೋಕವನ್ನು ಕಂಡಿದ್ದಳು. ಕುಟುಂಬದ ಸಮಸ್ಯೆಗಳು ಅರ್ಥವಾಗುತ್ತಿದ್ದವು. ಒಂದು ದಿನ ಅಪ್ಪ ಅಮ್ಮಂದಿರನ್ನು ಕೂರಿಸಿ ಕೊಂಡು "ನೀವು ನನ್ನ ಮದುವೆಯನ್ನು ಭೂಮಿ ಜೊತೆ ವಿರೋಧಿಸುತ್ತಿರುವುದಕ್ಕೆ ಕಾರಣ ಜಾತಿ ಅಂತ ಹೇಳ್ತಿದ್ದೀರಿ. ಅದು ಒಂದು ನೆಪ ಅಂತ ನನಗ್ಗೊತ್ತು. ನಿಮಗೆ ಭಯ. ನಾನು ಅವರನ್ನು ಮದುವೆಯಾದರೆ ಮನೆಯ ಆದಾಯ ಕಡಿಮೆಯಾಗುತ್ತದೆ; ನನ್ನ ಸಂಬಳ ಸಂಪೂರ್ಣ ನಿಂತು ಹೋಗುತ್ತದೆ, ಅಂತ ಭಯ. ನಿಮಗೆ ನನ್ನ ಬದುಕಿಗಿಂತ ನಿಮ್ಮ ಸ್ವಾರ್ಥ ಮುಖ್ಯ. ನಿಮಗಾಗಿ ನಾನು ತ್ಯಾಗಜೀವಿಯಾಗಬೇಕು. ಆಗ ನಾನು ತುಂಬಾ ದೊಡ್ಡವಳು, ಅಲ್ಲವೆ ?"- ಎಂದು ಪ್ರಶ್ನಿಸಿದಳು. ಅವರು ಮಾತನಾಡಲಿಲ್ಲ. "ಹೆದರಬೇಡಿ. ನನ್ನ ಸಂಬಳದ ಒಂದು ಪೈಸ ನಾನು ಮದುವೆಯಾದ ನನ್ನ ಗಂಡನ ಮನೆಗೆ ತಕ್ಕೊಂಡು ಹೋಗುವುದಿಲ್ಲ. ಪೂರ್ಣ ನಿಮಗೇ ಕೊಡುತ್ತೇನೆ"- ತಂಗಿ ತಮ್ಮಂದಿರ ಕಡೆತಿರುಗಿ "ಇವರು ಓದು ಮುಗಿಸಿ, ತಮ್ಮ ಕಾಲ ಮೇಲೆ ತಾವು ನಿಲ್ಲುವವರೆಗೆ" ಎಂದಳು. ಅವರ ಅಪ್ಪ ಮೆಲ್ಲಗೆ "ನಿನ್ನ ಮದುವೆಯಾಗೋನು ಒಪ್ಪದಿದ್ದರೆ ?" ಅಂದರು. "ಭಯಬೇಡ ಅಪ್ಪ, ಅವರು ಅಂಥೋರಲ್ಲ. ನನಗಿಂತ ಜಾಸ್ತಿ ಸಂಬಳ ಅವರಿಗೆ ಬರುತ್ತೆ. ನಮ್ಮ ಹೊಸ ಸಂಸಾರಕ್ಕೆ ಇನ್ನೆಷ್ಟು ಬೇಕು?". ಅವಳು ಅವರನ್ನು ನಿರ್ಧಾರದ ದೃಷ್ಟಿಯಿಂದ ನೋಡಿ "ಈ ನನ್ನ ಮಾತಿಗೆ ಒಪ್ಪಬೇಕು. ಇಲ್ಲದಿದ್ದರೆ ನನ್ನ ದಾರಿ ನನಗೆ, ನಿಮ್ಮ ದಾರಿ ನಿಮಗೆ" ಎಂದಳು ಖಡಾ ಖಂಡಿತವಾಗಿ. ಅಪ್ಪ ಅಮ್ಮ ಪರಸ್ಪರ ಮುಖ ನೋಡಿಕೊಂಡರು. ಈಗ ನಾವು ಒಪ್ಪದಿದ್ದರೆ ಮನೆಗೆ ಬರುವ ಹಣವೂ ನಿಲ್ಲುತ್ತದೆ. ಜಾತಿ ಹೋದರೆ ಹೋಗಲಿ. ಸಂಬಂಧ ಉಳಿಯಲಿ, ಮನೆಯ ಕಲ್ಯಾಣ ಮುಂದುವರಿಯಲಿ. ನಾವು ಬಿಗಿಯಾದರೆ ಅವಳು ಹೊರ ಹೋಗುತ್ತಾಳೆ. ಕಲಿತವಳು, ವಯಸ್ಸಿಗೆ ಬಂದವಳು, ದುಡಿಯುತ್ತಿರುವವಳು. ವಾಸಂತಿ ಅವರ ಮುಖವನ್ನೇ ನೋಡುತ್ತಿದ್ದಳು, ಹುಟ್ಟಿದಾಗಿನಿಂದ ಅವರನ್ನು ನೋಡುತ್ತಾ ಬೆಳೆದಿದ್ದಾಳೆ, ಅವರ ಉತ್ತರ ಗೊತ್ತಿತ್ತು. ಅವರು ನಿರ್ಧಾರಕ್ಕೆ ಬಂದವರಂತೆ "ಆಯ್ತು" ಎಂದರು. ವಾಸಂತಿ ನಕ್ಕಳು.

ಅವಳು ಬೆಳಗಾಗುವುದನ್ನೇ ಕಾಯುತ್ತಿದ್ದಳು. ಸಿಹಿ ಸುದ್ದಿಯನ್ನು ಭೂಮಿಗೌಡನಿಗೆ ಮುಟ್ಟಿಸಿದಳು. ಅವರು ಮುಂದಿನ ಒಂದೆರಡು ತಿಂಗಳಲ್ಲಿ ಮದುವೆಯಾಗಲು ನಿರ್ಧರಿಸಿದರು. ಇಬ್ಬರಿಗೂ ಒಮ್ಮನಸ್ಸು. ಸಂಪ್ರದಾಯಬದ್ಧ ಆಡಂಬರದ ಮದುವೆಯಲ್ಲಿ ಅವರಿಗೆ ನಂಬಿಕೆ ಇರಲಿಲ್ಲ. ಅಪ್ಪ ಅಮ್ಮಂದಿರು, ಎರಡೂ ಕಡೆಯ ಕೆಲವೇ ಆತ್ಮೀಯರು, ಸ್ನೇಹಿತರು, ಬಂಧುಗಳ ಸಮಕ್ಷಮದಲ್ಲಿ ಮದುವೆಯಾಗುವುದು. ಅನಂತರ ಕಾನೂನು ಬದ್ಧವಾಗಿ ಸಬ್‌ರಿಜಿಸ್ಟ್ರಾರ್ ಕಛೇರಿಯಲ್ಲಿ ಮದುವೆಯನ್ನು ನೋಂದಾಯಿಸುವುದು- ಎಂದು ಸಿದ್ಧತೆಯಲ್ಲಿ ತೊಡಗಿದರು.

ಜೀವನದಲ್ಲಿ ನಾವಂದು ಕೊಂಡಂತೆ ಅನೇಕ ವೇಳೆ ಆಗುವುದಿಲ್ಲ ಎಂಬುದಕ್ಕೆ ಭೂಮಿಗೌಡ-ವಾಸಂತಿಯವರ ಜೀವನದಲ್ಲೂ ಘಟನೆಯೊಂದು ನಡೆಯಿತು. ಅವಳು ದೈಹಿಕ ಶಿಕ್ಷಕಿ; ಪ್ರತಿದಿನ ಬೆಳಿಗ್ಗೆ ಎದ್ದು ದೇಹವನ್ನು ಹೇಗೆಂದರೆ ಹಾಗೆ ಬಾಗಿಸಿ ಬಳಕಿಸುತ್ತಿದ್ದಳು. ಬೆಟ್ಟಗುಡ್ಡ ಹತ್ತಿ ಇಳಿದು ದೇಹದ ಸಮತೋಲನ ಕಾಪಾಡಿಕೊಂಡಿದ್ದಳು. ಅಂಥವಳ ಜೀವನದಲ್ಲೇ ಒಂದು ಆಗಬಾರದ ಘಟನೆ ಸಂಭವಿಸಿತು.

ಅದು ಕ್ಷಣ ಮಾತ್ರ ಎಚ್ಚರ ತಪ್ಪಿದ್ದರಿಂದ ಆದ ಅನಾಹುತ!

ಅವಳ ತಂಗಿ, ತಮ್ಮ ಯಾವದೋ ಮಕ್ಕಳ ಸಿನೆಮಾ ಬಂದಿದೆ, ಹೋಗೋಣ ಅಂತ ಒಂದೆರಡುವಾರದಿಂದ ದುಂಬಾಲು ಬಿದ್ದಿದ್ದರು. ಇವಳು ಭೂಮಿಗೌಡನನ್ನು ಸಿನಿಮಾಕ್ಕೆ ಕಂಪನಿ ಕೊಡಿ ಅಂತ ಕರೆದಳು. ಆದರೆ ಅವನು ತಾನು ಯಾವುದೋ ಸೆಮಿನಾರ್‌ಗೆ ಸಿದ್ಧತೆ ಮಾಡಬೇಕಾಗಿರುವುದಾಗಿಯೂ, ತಾನು ಬರಲಾಗುವುದಿಲ್ಲವೆಂದೂ ನೀವು ಹೋಗಿ ಬನ್ನಿ ಎಂದು ಹೇಳಿದ್ದ. ವಾಸಂತಿ ಸ್ವಲ್ಪ ಮುಖ ಊದಿಸಿಕೊಂಡು ಇಷ್ಟ ವಿಲ್ಲದ ಇಷ್ಟದಿಂದ ತಂಗಿ, ತಮ್ಮಂದಿರ ಜೊತೆ ಸಿನೆಮಾಕ್ಕೆ ಹೋಗಿದ್ದಳು. ಅಲ್ಲಿ ರಷ್ಟೋ ರಷ್ಟು! ಬಾಲ್ಕನಿಗೆ ಟಿಕೆಟ್ ತೆಗೆದುಕೊಂಡು ಒಳಗೆ ಹೋಗಿ ಕೂತರು. ಮಕ್ಕಳ ಸಿನೆಮಾ ! ಹುಡುಗರಿಗೆ ಆನಂದ. ಎಂಜಾಯ್ ಮಾಡುತ್ತಿದ್ದರು. ಇವಳಿಗೋ ತಮ್ಮ ಮುಂದಿನ ಭವಿಷ್ಯದ ಚಿಂತೆ. ಸಂಸಾರ, ಮಕ್ಕಳು, ಗಂಡ- ಭವಿಷ್ಯದ ಕನಸುಗಳು ಮನದ ತೆರೆಯ ಮೇಲೆ ತೇಲಾಡುತ್ತಿದ್ದವು.

ಮಧ್ಯಂತರ ಬಂತು. ತಮ್ಮ ತಿಂಡಿ ತರುತ್ತೇನೆ ಎಂದು ಹೊರಗೆ ಹೋದ. ಮಧ್ಯಂತರದ ವಿರಾಮ ಮುಗಿದರು ಅವನು ಮರಳಲಿಲ್ಲ. ಚಿತ್ರ ಮತ್ತೆ ಪ್ರಾರಂಭವಾಯಿತು. ಆದರೂ ಅವನು ಬರಲಿಲ್ಲ! ಅವಳಿಗೆ ಸ್ವಲ್ಪ ಗಾಬರಿಯಾಯಿತು. ತಂಗಿಗೆ "ನೀನು ಇಲ್ಲೇ ಕೂತಿರು. ನಾನು ಹೋಗಿ ನೋಡಿಕೊಂಡು ಬರ್ತೇನೆ. ಕತ್ತೆ, ಏನ್ ಮಾಡ್ತಾ ನಿಂತಿದ್ದಾನೋ ?" ಎಂದವಳೆ ಕತ್ತಲೆಯಲ್ಲಿ ಜನರ ಕಾಲುಗಳ ನಡುವೆ ಹೆಜ್ಜೆಗಳನ್ನು ಇಡುತ್ತಾ ಬಾಗಿಲು ಕಡೆ ನಡೆದಳು. ಬಾಗಿಲನ್ನು ಎಳೆದು ಸಿನೆಮಾಮಂದಿರ ಹೊರ ಆವರಣಕ್ಕೆ ಬಂದಳು. ಕ್ಯಾಟರಿಂಗ್‌ನವರು ತಮ್ಮ ಸ್ಟಾಲ್‌ನ ಹಿಂದೆ ಇದ್ದರು. ಅವರನ್ನು ಹೊರತು ಪಡಿಸಿದರೆ ಖಾಲಿ, ಖಾಲಿ! ತಮ್ಮನ ಸುಳಿವಿಲ್ಲ. ಎಲ್ಲಿಹೋದ ? ಸುತ್ತಾ ಮತ್ತೊಮ್ಮೆ ಕಣ್ಣಾಡಿಸಿದಳು. ಬಹುಶಃ ಅವನು ಯೂರಿನಲ್ಸ್‌ಗೆ ಹೋಗಿರಬಹುದು. ಕತ್ತೆ, ಬರಲಿ ತಲೆಮೇಲೊಂದು ಲಟ್ಟಿಸುತ್ತೇನೆ ಅಂದು ಕೊಂಡಳು. ಅವಳು ಅಂದುಕೊಂಡಂತೆ ಅವನು ಗಂಡಸರ ಶೌಚಾಲಯದಿಂದ ಕೈ ಒರೆಸಿಕೊಳ್ಳುತ್ತಾ ಹೊರ ಬಂದ.

ಇವಳು ಅವನ ಕಿವಿ ಹಿಡಿದು, ಹಿಂಡಿ "ಏಕೋ ತಡಮಾಡಿದೆ ? ಹೇಳಿ ಹೋಗಿದ್ದರೇನಾಗುತ್ತಿತ್ತು?" ಎಂದಳು. ಅವನು ಅರ್ಧನಗುತ್ತಾ, ಅರ್ಧ ಮುಖ ಕಿವುಚುತ್ತಾ "ಅವಸರ ಆಗೋಗಿತ್ತು" ಅಂದ. "ಸರಿ ನಡಿ, ಹೋಗೋಣ. ತಿಂಡಿ ಎಲ್ಲಿ ?" ಎಂದಳು. "ಇನ್ನೂ ತೆಗೆದು ಕೊಂಡಿಲ್ಲ. ಈಗ ತೆಗೆದುಕೊಳ್ಳಬೇಕು" ಎಂದ ಅವನು. "ಬೇಡ ನಡಿ. ಲೇಟಾಯ್ತು. ಅವಳು ಬೇರೆ ಒಬ್ಬಳೇ ಕೂತಿದ್ದಾಳೆ. ಗಾಬರಿ ಆಗ್ತಾಳೆ" ಎಂದು ಸಿನೆಮಾ ಮಂದಿರದ ಒಳ ಪ್ರವೇಶಿಸಿದರು. ಪರದೆಯ ಮೇಲಿನ ಪ್ರಕಾಶದ ದೆಸೆಯಿಂದ ಚಿತ್ರಮಂದಿರ ಕತ್ತಲೆಯ ಮಡುವಿನಂತೆ ಭಾಸವಾಯಿತು. ತಾವು ಕೂತಿದ್ದ ಜಾಗವನ್ನು ಸ್ವಲ್ಪ ದೃಷ್ಟಿ ಕೇಂದ್ರಿಕರಿಸಿ ಅವಳು ಗುರುತು ಹಿಡಿದಳು. ಮತ್ತೆ ಜನಗಳ ಮಧ್ಯೆ "ಕ್ಷಮಿಸಿ, ಕ್ಷಮಿಸಿ" ಅಂತ ಗೋಗರೆದು ಹೋಗುವುದು ಅವಳಿಗೆ ಸರಿಕಾಣಲಿಲ್ಲ. ನೇರವಾಗಿ ಮುಂದಕ್ಕೆ ಹೋಗಿ, ಅಲ್ಲಿಂದ ಮಧ್ಯಭಾಗದಲ್ಲಿ ಹಾದು ತಮ್ಮ ಸೀಟುಗಳನ್ನು ತಲುಪುವುದು ಸರಿ ಎನ್ನಿಸಿತು. ಅದರಂತೆ ಅವಳು ತಮ್ಮನ ಕೈಹಿಡಿದು, ಬಾಲ್ಕನಿಯ ಮುಂದಿನ ಭಾಗದ ಪ್ಯಾಸೇಜಿಗೆ ಬಂದಳು. ತನ್ನ ಎಡಭಾಗಕ್ಕೆ ಕುಳಿತಿದ್ದ ಪ್ರೇಕ್ಷಕರೇನಕರು ಕಾಲುಚಾಚಿದ್ದರು. ಇವರ ಕಾಲಿಗೆ ಅವು ತಡೆಯುತ್ತಿದ್ದವು. ಅವಳ ಸ್ವಲ್ಪ ಮುಂಭಾಗಕ್ಕೆ ಸರಿದು ಬಾಲ್ಕನಿಯ ತಡೆಗೋಡೆಯನ್ನು ಒಂದು ಕೈಯಲ್ಲಿ ಸವರುತ್ತಾ ಕತ್ತಲೆಯಲ್ಲಿ ಮುನ್ನಡೆದಳು.

ಹತ್ತು ಹೆಜ್ಜೆ ಸಾಗಿರಬಹುದು. ಇದ್ದಕ್ಕಿದಂತೆ ಅವಳ ಕಾಲಿಗೆ ಒಂದಡಿ ಎತ್ತರದ ವಸ್ತುವೊಂದು ಅಡ್ಡಬಂತು, ಅದನ್ನು ಎಡವಿ ಮುಂದಕ್ಕೆ ಮುಗ್ಗರಿಸಿದಳು. ಮುಂದಕ್ಕೆ ಮುಗ್ಗರಿಸಿ, ತಡೆಗೋಡೆಯನ್ನು ಸವರುತ್ತಿದ್ದ ಕೈಯನ್ನ ತನ್ನ ದೇಹದ ಮುಂದಕ್ಕೆ ತಂದು, ಕತ್ತು ಮತ್ತು ಎದೆಯ ಭಾಗವನ್ನು ಹಿಂದಕ್ಕೆ ಬಾಗಿಸಿ ಬೀಳದಂತೆ ಬ್ಯಾಲೆನ್ಸ್ ಮಾಡಿ, ಮತ್ತೆ ಸರಿಯಾಗಿ ನಿಲ್ಲಲು ತಡೆಗೋಡೆಗೆ ಕೈ ಹಿಟ್ಟಳು. ಇದೆಲ್ಲಾ ಕ್ಷಣಾರ್ಧದಲ್ಲಿ ನಡೆಯಿತು. ಆದರೆ ಅವಳು ತಡೆ ಗೋಡೆಯನ್ನು ಹಿಡಿಯುವಲ್ಲಿ ತಪ್ಪುಮಾಡಿದಳು. ಕೈ ಗೋಡೆಯಿಂದ ಹೊರಭಾಗಕ್ಕೆ ಮೂರ್ನಾಕು ಇಂಚು ಆಚೆ ಸರಿದಿತ್ತು, ಹಿಡಿಯಲು ಯತ್ನಿಸಿತು. ವಾಸಂತಿ ಎತ್ತರದ ಹೆಂಗಸು. ಐದು ಅಡಿ ಆರು ಅಂಗುಲವಿದ್ದಳು. ತಡೆಗೋಡೆ ಅವಳ ತೊಡೆಯ ಕೆಳಭಾಗದವರೆಗೆ ಬರುತ್ತಿತ್ತು. ಯಾವಾಗ ಅವಳ ಬಲಗೈ ತಡೆಗೋಡೆಯನ್ನು ಬಿಟ್ಟು ಶೂನ್ಯಕ್ಕೆ ಹೋಗಿ ಹಿಡಿತಕ್ಕೆ ಯತ್ನಿಸಿತೋ, ಇವಳ ದೇಹದ ಭಾರ ಬಲಕ್ಕೆ ಬಾಗಿತ್ತು! ತಡೆಗೋಡೆ ಅವಳ ಮಂಡಿಯ ಭಾಗಕ್ಕೆ ಬಡಿದು ಸಂಪೂರ್ಣ ಬಲಕ್ಕೆ ದೇಹ ಬಗ್ಗಿತು. ಅವಳು ತಕ್ಷಣವೇ ಗಾಬರಿಯಾದಳು. ಏನಾಗುತ್ತಿದೆಯೆಂದು ಅವಳು ಚಿಂತಿಸುವುದಕ್ಕೆ ಮುನ್ನವೇ ಅವಳ ಇಡೀ ದೇಹ ಬಾಲ್ಕನಿಯ ಗೋಡೆಯಿಂದ ಜಾರಿ ಕೆಳಕ್ಕೆ ತಲೆ ಕೆಳಮುಖವಾಗಿ ಬಿದ್ದಿತು. ಅವಳ ತಮ್ಮ "ಅಕ್ಕಾ" ಎಂದು ಕಿರುಚಿದ್ದ.

---

ಭೂಮಿಗೌಡ ರಾತ್ರಿಯ ತಂಪಿನಲ್ಲೂ ಬೆವತ್ತಿದ್ದ. ನೆನಪುಗಳು ಮಧುರವಲ್ಲ ! "ಹೌದು, ಚಂದ್ರಿಕಾ, ಜೀವನದಲ್ಲಿ ನಾವಂದು ಕೊಂಡಂತೆ ಅನೇಕ ವೇಳೆ ಆಗುವುದಿಲ್ಲ"ಎಂದ, ಮೃದುವಾಗಿ. ಚಂದ್ರಿಕಾ ಬೆರಗಾಗಿ ಅವನ ಮುಖ ನೋಡಿದಳು. ಈ ಪ್ರಶ್ನೆಯನ್ನು ಸ್ವಲ್ಪ ಹೊತ್ತಿನಹಿಂದೆ ನಾನು ಕೇಳಿದ್ದೆ. ಆಗ ಅವನು ಉತ್ತರ ನೀಡರಲಿಲ್ಲ. ಆ ಬಗ್ಗೆ ಈಗ ಮಾತನಾಡುತ್ತಿದ್ದಾನೆ. ಆದರೆ

ತನ್ನನ್ನು ಕುರಿತು ಮಾತನಾಡುತ್ತಿದ್ದಾನೆಯೇ? ಅವಳಿಗೆ ಅನುಮಾನವಾಯಿತು. ಅವನ ಕಣ್ಣುಗಳು ತನ್ನನ್ನು ನೋಡುತ್ತಿರುವುದು ದಿಟ. ಆದರೆ ಅವುಗಳ ಅಂತರ್‌ದೃಷ್ಟಿ ಬೇರೆಲ್ಲೋ ಇದೆ ಅನ್ನಿಸುತ್ತಿದೆ. ಒಂದು ಬಗೆಯ ಅರೆ ಪ್ರಜ್ಞೆಯಲ್ಲಿರುವಂತೆ, ಆ ಸ್ಥಿತಿಯಲ್ಲಿ ಮಾತನಾಡುತ್ತಿರುವನಂತೆ ಅವಳಿಗೆ ತೋರಿತು. ಅವಳು ತುಸು ಬಾಗಿ, ಅವನ ತೊಡೆಯ ಮೇಲಿದ್ದ ಅವನ ಕೈಯನ್ನು ಮುಟ್ಟಿ "ಸಾರ್, ಸಾರ್" ಎಂದಳು.

ಭೂಮಿಗೌಡ ಸರ್ರನೆ ವಾಸ್ತವಕ್ಕೆ ಬಂದ. ಅವಳು ತನ್ನ ಬಲಗೈಯನ್ನು ಮುಟ್ಟಿರುವುದು ಅವನ ಗಮನಕ್ಕೆ ಬಂತು. ಅವಳು ತನ್ನ ಕೈ ಕೈಯನ್ನು ವಾಪಸ್ಸು ಎಳೆದುಕೊಳ್ಳುವ ಪ್ರಯತ್ನವನ್ನೇನು ಮಾಡುತ್ತಿಲ್ಲ. ಅವಳು ತನ್ನನ್ನೇ ದಿಟ್ಟಿಸುತ್ತಿದ್ದಾಳೆ. ತಾನು ತನ್ನ ಭೂತಕಾಲದ ನೆನಪುಗಳಲ್ಲಿ ಮುಳುಗಿ ಹೋಗಿದ್ದೆ. ಅವು ಆಗಾಗ್ಗೆ ಬಂದು ಕಾಡುತ್ತವೆ. ಹೌದು, ಅವು ಭೂತಕಾಲದ ಬ್ರೂಣಗಳು. ಅವನು "ಸಾರಿ, ಮೇಡಂ. ನಾನು ಏನಂದೆ ?" ಎಂದನು.

ಚಂದ್ರಿಕಾ ಅವನ ಕೈ ಸವರುತ್ತಾ "ಏನಿಲ್ಲ, ಏನೋ ಕನವರಿಸಿಕೊಂಡಿರಿ" ಎಂದಳು. ಎಲ್ಲರ ಎದೆಯಗೂಡಿನಲ್ಲಿ ಏನೋ ಹೆಪ್ಪುಗಟ್ಟಿದ ಗೂಢವೊಂದಿರುತ್ತದೆ. ತನ್ನಲ್ಲಿರುವ ಹಾಗೆ, ಎಲ್ಲರಲ್ಲೂ, ಈ ಭೂಮಿಗೌಡನಲ್ಲೂ! ಅದು ಒಮ್ಮೊಮ್ಮೆ ಹೊರಬಂದು ವ್ಯಕ್ತವಾಗುತ್ತದೆ. ವಯಸ್ಸು ಮೂವತ್ತೈದಾಗಿದ್ದರೂ ಇನ್ನೂ ಮದುವೆಯಾಗಿಲ್ಲವೆಂದರೆ- ಏನೋ ಇರಬೇಕು. ಯಾರನ್ನೋ ಪ್ರೀತಿಸಿರಬೇಕು. ಲವ್ ಡಿಸಪ್ಪಾಯಿಂಟ್ ಆಗಿರಬೇಕು, ಅದರ ನೆನಪಲ್ಲೇ ಜೀವಿಸುತ್ತಿರಬೇಕು.......... ಚಂದ್ರಿಕಾಳ ಮನಸ್ಸು ಅನೇಕ ಊಹೆಗಳನ್ನು ಮಾಡುತ್ತಾ ಇವರ ಪ್ರೇಯಸಿ ಬದುಕಿದ್ದಾಳೆಯೇ? ಅಥವಾ ಬೇರೆಯಾರನ್ನಾದರೂ ಮದುವೆಯಾಗಿದ್ದಾಳೆಯೇ ? ಅಥವಾ.....ಅಥವಾ ಸತ್ತು ಹೋಗಿದ್ದಾಳೆಯೇ ? ಸತ್ತಿರಬೇಕು ಎಂಬ ಆಲೋಚನೆ ಅವಳ ಮನಕ್ಕೆ ಬಂದಾಗ ಏನೋ ಒಂದು ಬಗೆಯ ತೃಪ್ತಿ. ತಕ್ಷಣ, ತನ್ನ ಬಗ್ಗೆ ತನಗೆ ನಾಚಿಕೆಯಾಯಿತು. ತನ್ನ ಕೈಯ್ನನು ಎಳೆದುಕೊಂಡಳು. ಇವನ್ಯಾರು? ಇವನ ಬದುಕು ಕಟ್ಟಿಕೊಂಡು ನನಗಾಗಬೇಕಾದ್ದು ಏನು ? ನನ್ನ ಜೀವನ ಗಡಿ ತಲುಪಿದೆ. ಹಾಗೆಂದುಕೊಂಡು ನಿಟ್ಟುಸಿರು ಬಿಟ್ಟಳು. ಹೌದೆ, ಗಡಿ ತಲುಪಿದೆಯೇ ? ಹಾಗಾದರೆ ಇಷ್ಟೇನಾ ಜೀವನ ? ಇಂದು ನಿನ್ನೆಯ ನಕಲೇ ? ಹಾಗಾದರೆ ಏನು ಅರ್ಥವಿದೆ ? ಅವಳು ಭೂಮಿಗೌಡನನ್ನು ನೋಡಿದಳು.

ಭೂಮಿಗೌಡ ಶ್ರೀರಂಗಪಟ್ಟಣದ ಕೋಟೆ ಕಟ್ಟಡವನ್ನು ತಡಕಾಡಿದ. ಊರು ಬೆಳೆದಂತೆಲ್ಲಾ ಕೋಟೆ ಗೋಡೆ ಕಣ್ಮರೆಯಾಗುತ್ತಿತ್ತು. ಬಂದೀಗೌಡರ ಮನೆಯನ್ನು ದಾಟಿ ಸುಮೊ ಮುನ್ನಡೆಯಿತು. ಬಂದೀಗೌಡರು ಹಿರಿಯ ಸ್ವಾತಂತ್ರ್ಯ ಹೋರಾಟಗಾರರು; ಈಗ ತೊಂಬತ್ತರ ಮೇಲಾಗಿರಬೇಕು. ಸರಿಯಾಗಿ ಕಿವಿ ಕೇಳಿಸುವುದಿಲ್ಲ. ಆದರೂ ಮಾನಸಿಕ ಆರೋಗ್ಯ ಗಟ್ಟಿಯಾಗೇ ಇದೆ. ಶ್ರೀರಂಗಪಟ್ಟಣಕ್ಕೆ ಬಂದಾಗ ಇವರನ್ನು ಭೇಟಿ ಮಾಡುತ್ತಿದ್ದ; ದೇಶ ಕಾಲಸ್ಥಿತಿಯು ಬಗ್ಗೆ ಚರ್ಚಿಸುತ್ತಿದ್ದ, ಬಂದಿಗೌಡರ ನೆನಪಿನೊಂದಿಗೆ ಅವನು ಮತ್ತೆ ವಿಷಣ್ಣನಾದ. ಹೌದು, ಆದರ್ಶದ ಕೊಂಡಿಗಳೆಲ್ಲಾ ಒಂದೊಂದಾಗಿ ಕಳಚಿಕೊಳ್ಳುತ್ತಿವೆ. ಈಗ ಬರೀ ಹಣ ಸಂಪಾದನೆಯೇ

ಮುಖ್ಯಗುರಿಯಾಗಿರುವ ತಲೆಮಾರು ರಾಜ್ಯಭಾರ ಮಾಡುತ್ತಿದೆ. ಯುವ ಜನಾಂಗ ಅವರನ್ನು ಅನುಸರಿಸುತ್ತಿದೆ. ಭೋಗವೇ ಪರಮ ಗುರಿ, ಆಸಕ್ತಿ. 'ಅಯ್ಯೋ' ಅಂದು ಕೊಂಡ. ಭೋಗ ರೋಗದ ಮೂಲವಲ್ಲವೆ ? ಅರ್ಥ ಮಾಡಿಸಿ ಹೇಳುವುದಾದರೂ ಹೇಗೆ ? ಹಣವೇ ಎಲ್ಲ ಅಲ್ಲ ಎಂಬುದನ್ನು ನಾವು ತಿಳಿಸಿ ಕೊಡಬೇಕು. ಅದು ನಮ್ಮಂಥವರ ಜವಾಬ್ದಾರಿ. ಆದರೆ ನನ್ನಂಥವರು ಆ ಜವಬ್ದಾರಿಯನ್ನು ಸರಿಯಾಗಿ ನಿರ್ವಹಿಸುತ್ತಿದ್ದೇವೆಯೇ ? ಭೂಮಿಗೌಡ ತನ್ನ ತಲೆಯನ್ನು ಅಲ್ಲಾಡಿಸಿದ.

ಸುಮೊ ಕೋಟೆಯ ದಕ್ಷಿಣ ದ್ವಾರದ ಗಡಿಯನ್ನು ದಾಟಿ ಮುನ್ನಡೆಯಿತು. ಪಶ್ಚಿಮವಾಹಿನಿಯ ಕಾವೇರಿ ಸೇತುವೆ ಎಡಭಾಗದ ಸೇತುವೆಗಿಂತ ಚಿಕ್ಕದು. ಇಲ್ಲಿ ಕಾವೇರಿ ನದಿ ಪಾತ್ರವೂ ಚಿಕ್ಕದು. ಆದರೆ ಪೂರ್ವ ಭಾಗದ ನದಿಯ ಸೆಳೆತಕ್ಕಿಂತ ಇಲ್ಲಿ ಸೆಳವು ಜಾಸ್ತಿ. ಪಶ್ಚಿಮವಾಹಿನಿಯಲ್ಲಿ ಗಾಂಧಿಜೀಯವರ ಚಿತಾಭಸ್ಮವನ್ನು ವಿಸರ್ಜಿಸಲಾಗಿತ್ತು. ಆ ಕಾರಣದಿಂದ ಪಶ್ಚಿಮವಾಹಿನಿಗೆ ಪಾವಿತ್ರ್ಯತೆಯ ಮೆರಗು ಬಂದಿತ್ತು. ಅಳಿದುಳಿದ ಗಾಂಧಿವಾದಿಗಳು ವರ್ಷಕ್ಕೊಮ್ಮೆ ಜನವರಿ ಕೊನೇ ವಾರದಲ್ಲಿ ಇಲ್ಲಿ ಸಮಾವೇಶಗೊಳ್ಳುತ್ತಾರೆ ; ಗಾಂಧೀ ತತ್ವದ ಬಗ್ಗೆ ಸಂವಾದಿಸುತ್ತಾರೆ. ಅಂಥ ಒಂದೆರಡು ಸಮಾವೇಶಗಳಲ್ಲಿ ಭೂಮಿಗೌಡ ಭಾಗವಹಿಸಿದ್ದ. ಬರೀ ತೌಡು ಕುಟ್ಟುವ ಕೆಲಸ. ಗಾಂಧೀಯಂತಹ ರಾಜಕೀಯ ನೀತಿ ಶಾಸ್ತ್ರಜ್ಞನನ್ನು ವರ್ತಮಾನಕ್ಕೆ ಅಳವಡಿಸಿ ನೋಡುವುದರಲ್ಲಿ ಅವರು ವಿಫಲರಾಗುತ್ತಿದ್ದರು.

ಸುಮೊ ಪಶ್ಚಿಮವಾಹಿನಿಯನ್ನು ದಾಟಿ, ಪಕ್ಷಿಧಾಮಕ್ಕೋಗುವ ವೃತ್ತವನ್ನು ಹಾದು ಮುಂದಕ್ಕೆ ಹೋಯಿತು. ಚಂದ್ರಿಕಾ ಗಡಿಯಾರ ನೋಡಿಕೊಂಡಳು. ಹತ್ತೂಕಾಲು. ಇನ್ನು ಹದಿನೈದು - ಇಪ್ಪತ್ತು ನಿಮಿಷಗಳಲ್ಲಿ ಮನೆಗೆ ತಲುಪಬಹುದು. ಒಂದು ಬಗೆಯ ಸಮಾಧಾನವಾಯಿತು. ಆದರೆ...... ಆದರೆ..... ಈ ಪುರುಷನ ಸಾಮಿಪ್ಯವೂ ಕೊನೆಯಾಗುವುದಲ್ಲ ? ಮತ್ತೆ ಅವರನ್ನು ನಾನು ನೋಡುತ್ತೇನೆಯೇ ?ಕೇವಲ ಕೆಲವು ಗಂಟೆಗಳ ಪ್ರಯಾಣದ ಸಹ ಪ್ರಯಾಣಿರು ಮಾತ್ರವೇ ? ಗೌಡರ ಮೊಬೈಲ್ ನಂಬರ್ ಕೇಳಲೆ ? ನಾಚಿಕೆ ಬಿಟ್ಟು ಹೇಗೆ ಕೇಳುವುದು ? ಅದಿರಲಿ, ಏಕೆಂದು ಕೇಳುವುದು ? ಹೋಗಲಿ, ಆ ನಂಬರನ್ನು ತೆಗೆದುಕೊಂಡು ಮಾಡುವುದಾದರೂ ಏನು ? ಬರೀ ಮಾತನಾಡಲು ಅಂದರೆ ಸರಿಯೇ ? ತನ್ನಲ್ಲೇ ಅವಳು 'ಮಾತನಾಡುವುದು ಬಹಳ ಮುಖ್ಯ ಅಲ್ಲವೆ ?" ಅಂದು ಕೊಂಡಳು.

ಸುಮೊ ಪಕ್ಷಿಧಾಮದ ಸರ್ಕಲ್ಲನ್ನು ದಾಟಿ ಒಂದರ್ಧ ಕಿಲೋ ಮೀಟರ್ ಸಾಗಿ ನಿಧಾನಗೊಂಡು, ತಕ್ಷಣ ಎಡಭಾಗಕ್ಕೆ ತಿರುಗಿತು. ದೀಪದ ಬೆಳಕಲ್ಲಿ ಸುಮೊ ಹೋಗುತ್ತಿರುವ ಜಾಗ ಯಾವುದೆಂದು ಕೂಡಲೆ ಭೂಮಿಗೌಡನಿಗೆ ತಿಳಿಯಿತು. ಅದು 'ಸ್ವೀಟ್ ಐಲ್ಯಾಂಡ್ ರೆಸಾರ್ಟ್'! ಈ ರೆಡ್ಡಿ ಏಕೆ ಈಗ ಇಲ್ಲಿಗೆ ಹೋಗುತ್ತಿದ್ದಾನೆ ? ಅವನ ಮುಖದಲ್ಲಿ ಮೂಡಿದ ಪ್ರಶ್ನೆ ಅರ್ಥವಾದವಳಂತೆ ಚಂದ್ರಿಕಾ ತನ್ನ ಮುಂದಿನ ಸೀಟಿನಲ್ಲಿ ತೂಕಡಿಸುತ್ತಿದ್ದ ಅಣ್ಣ ಶರಣ್‌ನನ್ನು ಬೆನ್ನು ಮುಟ್ಟಿ ಎಚ್ಚರಿಸಿ, 'ಅಣ್ಣ, ಈಗ ಇವರೆಲ್ಲಿಗೆ ಹೋಗುತ್ತಿದ್ದಾರೆ ? ಸ್ವಲ್ಪ ವಿಚಾರಿಸು. ಆಗಲೇ ತುಂಬ ತಡವಾಗಿದೆ" ಅಂದಳು.

ಶರಣ್ ತನ್ನ ಕಣ್ಣುಗಳನ್ನು ಅಗಲಿಸಿ, ಅಕ್ಕ ಪಕ್ಕ ನೋಡಿ, "ರೆಡ್ಡಿ, ಇದ್ಯಾಕೆ ಇಲ್ಲಿಗೆ ಹೋಗ್ತಿದ್ದೀಯಪ್ಪಾ? ಆಗಲೇ ಹೊತ್ತಾಗಿದೆ" ಎಂದು ಕೇಳಿದನು.

ರೆಡ್ಡಿ ರೆಸಾರ್ಟ್‌ನ ಒಳಕ್ಕೆ ಸುಮೊ ಅನ್ನು ನುಗ್ಗಿಸಿ "ಐದೇ ಐದು ನಿಮಿಷ ಶರಣ್ ಅವರೆ, ರಾತ್ರಿಗೆ ಕಾಟೇಜ್ ಬುಕ್ ಮಾಡಿಬಿಡುತ್ತೇನೆ" ಎಂದವನೆ ಯಾರ ಅಭಿಪ್ರಾಯವನ್ನು, ಆಕ್ಷೇಪವನ್ನು ಲೆಕ್ಕಿಸದೆ ರೆಸಾರ್ಟ್ ಕಛೇರಿಯ ಮುಂದೆ ನಿಲ್ಲಿಸಿದ. ಗಾಡಿಯನ್ನು ಆಫ್ ಮಾಡಿ ಕಛೇರಿಯ ಒಳ ನುಗ್ಗಿದ.

ಮಹೇಶ ಸುಮ್ಮನೆ ಕುಳಿತಿದ್ದ. ಶರಣ್ ಕೂತಲ್ಲೇ ಒಸಕಾಡುತ್ತಿದ್ದ. ಭೂಮಿಗೌಡ ಪ್ರಥಮ ಬಾರಿಗೆಂಬಂತೆ ತಳಮಳಗೊಂಡ. ಏನೋ ಅಸಹಜ ನಡೆ ಅನ್ನಿಸಿತು. ಮೈಸೂರಲ್ಲಿ ರೆಡ್ಡಿಗೆ ಉಳಿದುಕೊಳ್ಳಲು ರೂಮು ಸಿಗುತ್ತಿರಲಿಲ್ಲವೆ ? ಇಲ್ಲೇ,. ಈ ಪ್ರಶಾಂತ ವಾತಾವರಣದಲ್ಲೇ ಉಳಿದು ಕೊಳ್ಳಬೇಕು ಅನಿಸಿದರೆ, ನಮ್ಮನ್ನು ಮೈಸೂರಿಗೆ ಬಿಟ್ಟು ಬರಬಹುದಿತ್ತಲ್ಲ ? ಬೇರೆಯವರಿಗೆ ತೊಂದರೆ ಕೊಡುತ್ತಿದ್ದೇವೆಂಬ ಪರಿವೆ ಬೇಡವೆ? ತನ್ನ ಎದುರು ಕುಳಿತ ಚಂದ್ರಿಕಾ ಕೂಡ ತಳಮಳಿಸುತ್ತಿರುವುದು ಅವನಿಗೆ ಗೊತ್ತಾಯಿತು.

ಮಹೇಶ ಕೆಳಗಿಳಿದು ಸಿಗರೇಟು ಹಚ್ಚಿದ. ಶರಣ್ ತಾನೂ ಕೆಳಗಿಳಿದು ತನ್ನ ಜೇಬನ್ನು ತಡಕಿದ. ಸಿಗರೇಟು ಇಲ್ಲವೆಂದು ಖಾತ್ರಿ ಗೊಂಡು, ಮಹೇಶನ ಬಳಿ ಸಿಗರೇಟು ಕೇಳಿ ಪಡೆದು, ಲೈಟರ್‌ನಿಂದ ಹಚ್ಚಿಕೊಂಡ. ನಿಡಿದಾಗಿ ಒಂದು ಧಂ ಎಳೆದು ನಿಧಾನವಾಗಿ ಮೂಗಿನ ಹೊಳ್ಳೆಗಳಿಂದ ಹೊಗೆಯ ಎರಡು ಕವಲನ್ನು ಹೊರಡಿಸಿದ. ಅದನ್ನೇ ನೋಡುತ್ತಾ ಚಂದ್ರಿಕಾ ಭೂಮಿಗೌಡನ ಕಡೆ ತಿರುಗದೆಯೇ "ನಿಮಗೆ ಸ್ಮೋಕಿಂಗ್ ಹ್ಯಾಬಿಟ್ ಇಲ್ಲವೋ ?" ಎಂದಳು.

"ಇಲ್ಲ ಮೇಡಂ. ಇವೆಲ್ಲಾ ಟೀನೇಜ್‌ನಲ್ಲಿ ಬರಬೇಕು ಅಥವಾ ಇಪ್ಪತ್ತು-ಇಪ್ಪತ್ತೈದರ ಒಳಗೆ ಬರಬೇಕು. ಆ ವಯಸ್ಸಿನಲ್ಲಿ ನಾನು ಎದೆ ತುಂಬ ಆದರ್ಶ ಇಟ್ಟುಕೊಂಡಿದ್ದೆ. ಕೆಟ್ಟ ಅಭ್ಯಾಸಗಳು ಬರೀ ವ್ಯಕ್ತಿಯನ್ನು ಮಾತ್ರ ಹಾಳುಮಾಡುವುದಿಲ್ಲ; ಅವನ ಸಂಸಾರ, ಸುತ್ತಲಿನ ಪರಿಸರ ಎಲ್ಲವನ್ನೂ ಹಾಳು ಮಾಡುತ್ತವೆ ಎಂಬ ನಂಬಿಕೆ. ಆ ನಂಬಿಕೆ ಇಂದು ನನ್ನಲ್ಲಿ ಮತ್ತಷ್ಟು ಗಟ್ಟಿಯಾಗಿದೆ. ಹೀಗಾಗಿ ನೋ ಸಿಗರೇಟ್, ನೋ ಡ್ರಿಂಕ್ಸ್ ಅಂಡ್ ನೋ ಇಸ್ಪೀಟ್. ಇಂಥ ಅನೇಕ ನೋ ಗಳು ನನ್ನಲ್ಲಿವೆ ?" ಎಂದನು.

"ಹಾಗಾದರೆ ನೀವು ಆಧುನಿಕ ಗಾಂಧೀ !" ಎಂದಳು ತಮಾಷೆಯಾಗಿ.

"ಏಕೆ ನೀವೂ ಟೀಸ್ ಮಾಡ್ತೀರಾ ನನ್ನನ್ನು ? ಪರವಾಗಿಲ್ಲ ಬಿಡಿ, ಬೇಸರವಿಲ್ಲ. ನನ್ನ ವಿದ್ಯಾರ್ಥಿ ಜೀವನದಲ್ಲಿ ನನ್ನನ್ನು ಗಾಂಧಿ ಎಂದು ಆಡಿಕೊಳ್ಳುತ್ತಿದ್ದರು. ನನಗೆ ಅಭ್ಯಾಸವಾಗಿದೆ. ಈಗಲೂ ನಾನು ಆಧುನಿಕ ಪಾರ್ಟಿಗೀರ್ಟಿಗಳಿಗೆ ಮಿಸ್‌ಫಿಟ್! ಹೋಗುತ್ತೇನೆ. ಹೋಗೋಲ್ಲ ಅಂತ ಪ್ರತಿಜ್ಞೆ ಮಾಡಿಲ್ಲ; ಆದರೆ.ಊಟ ಮಾಡುತ್ತೇನೆ. ನಿಂಬೆರಸ, ಕಿತ್ತಲೆ ರಸ ಕುಡಿಯುತ್ತೇನೆ. ನಿಮಗೆ ನಂಬಿಕೆ ಬರದಿರಬಹುದು..... ನಾನು ಕೋಲ-ಪೆಪ್ಸಿಗಳನ್ನೂ ಕೂಡ ಕುಡಿಯೋಲ್ಲ"- ಸ್ವಲ್ಪ ಮಾತು ನಿಲ್ಲಿಸಿ "ನನ್ನ ಮಾತು ಕೇಳಿ ನನ್ನನ್ನು ಧರ್ಮಾತ್ಮ ಅಂದು ಕೊಳ್ಳಬೇಡಿ ನನ್ನಲ್ಲೂ

ದೌರ್ಬಲ್ಯಗಳಿವೆ, ಹಠ ಹಿಡಿಯುತ್ತೇನೆ, ವಾದಮಾಡುತ್ತೇನೆ, ಹಿಡಿದದ್ದು ಆಗಲೇ ಬೇಕೆಂದು ಅದರ ಬೆನ್ನು ಬೀಳುತ್ತೇನೆ"- ಎಂದನು.

ಅವಳು ನಗುತ್ತಾ "ಹಾಗಾದರೆ ನೀವು ಮನುಷ್ಯರು ಅಂದ ಹಾಗಾಯ್ತು" ಎಂದಳು. ಕೂಡಲೇ ಗಂಭೀರಳಾದಳು. ತನ್ನ ಅಂತರಂಗಕ್ಕಿಳಿದಳು. ತನ್ನ ಗಂಡ ಮಾತನಾಡುವುದೇ ಇಲ್ಲ. ಏನಾದರೂ ಛೇಡಿಸಿ ಮಾತನಾಡಿದರೆ ಕೋಪಗೊಳ್ಳುವುದೇ ಇಲ್ಲ. ಅದು ಬೇಕು ಇದು ಬೇಕು ಅಂತ ಹಠ ಹಿಡಿದರೆ, ಪ್ರಶ್ನೆಮಾಡದೆ ಮರುಮಾತನ್ನಾಡದೆ ಎಲ್ಲದಕ್ಕೂ ಆಯಿತು ಅನ್ನುತ್ತಾರೆ, ಇನ್ನು ವಾದದ ಪ್ರಶ್ನೆ ಎಲ್ಲಿ ಬಂತು ? ಮಾತನಾಡಿದರೆ ತಾನೆ ವಾದ!? ಚಂದ್ರಿಕಾ ಬಹಳ ದಿನಗಳ ಮೇಲೆ ಇಷ್ಟು ಮಾತನಾಡಿದ್ದು ಈ ಭೂಮಿಗೌಡನ ಜೊತೆಯಲ್ಲೇ ? ಅವಳಿಗೆ ಮತ್ತೂ ಮಾತನಾಡಬೇಕೆನ್ನಿಸಿತು. ಅವನ ಕಣ್ಣಲ್ಲಿ ಕಣ್ಣಿಟ್ಟು ಮೃದುವಾಗಿ "ಆಗ ನೀವು ಯಾವ ಲೋಕದಲ್ಲಿದ್ದಿರಿ ? ನಾನು ಆಗ ಕೇಳಿದ ಪ್ರಶ್ನೆಗೆ ಅಷ್ಟೊಂದು ತಡವಾಗಿ ಏಕೆ ಉತ್ತರ ಕೊಟ್ಟಿರಿ?" ಎಂದು ಕೇಳಿದಳು.

ಭೂಮಿಗೌಡ ಅವಳನ್ನು ದೃಷ್ಟಿಯಲ್ಲೇ ಆವರಿಸಿದವನಂತೆ "ಚಂದ್ರಿಕಾ ಮೇಡಂ, ನೀವು ಕೇಳಿದ್ದಕ್ಕೆ ನಾನು ಉತ್ತರ ಕೊಟ್ಟೆ ಅಷ್ಟೆ. ಜೀವನದಲ್ಲಿ ನಾವಂದು ಕೊಂಡಂತೆ ಎಲ್ಲವೂ ಆಗಿದ್ದರೆ ನಮ್ಮನ್ನು ಹಿಡಿಯಲು ಆಗುತ್ತಿತ್ತೆ ? ಪ್ರಕೃತಿ ನಮ್ಮನ್ನು ಆಗಾಗ್ಗೆ ಬಗ್ಗು ಬಡಿಯುತ್ತೆ; ಮಾನವ ಸಂಬಂಧಗಳು ಆಗಾಗ್ಗೆ ನಮ್ಮನ್ನು ದಾರಿಗಳನ್ನು ಕಟ್ಟಿ ಹಾಕುತ್ತವೆ ; ವರ್ತಮಾನದ ಘಟನಾವಳಿಗಳು ನಮ್ಮ ದಾರಿಗಳನ್ನು ಬದಲಿಸುತ್ತವೆ; ನಮ್ಮನ್ನು ನಾವು ನಿರೀಕ್ಷಿಸದ ವೃತ್ತದೊಳಗೆ ಬಂಧಿಸುತ್ತವೆ; ಅಥವಾ ನಾವು ಕನಸು ಕಾಣದೆ ಇದ್ದ ಆಶ್ಚರ್ಯಕ್ಕೆ ನೂಕುತ್ತವೆ. ಈಗ ನೋಡಿ, ನಾನ್ಯಾರೋ ? ನೀವ್ಯಾರೋ ? ನಮಗಿಬ್ಬರಿಗಿರುವ ಸಂಬಂಧವಾದರು ಏನು ? ಸಹ ಪ್ರಯಾಣಿಕರು ಅಷ್ಟೆ. ಆದರೆ ಒಂದೆರಡು ಗಂಟೆಗಳಲ್ಲಿ ನಾವು ಸ್ನೇಹಿತರಾದಂತೆ ಅನ್ನಿಸುತ್ತದೆ. ನೀವು ನನ್ನ ಮನಸ್ಸಿನೊಡನೆ ಸಂವಾದ ಮಾಡುತ್ತಿರುವಂತೆ ಭಾಸವಾಗುತ್ತಿದೆ" ಸ್ವಲ್ಪ ಅವಳತ್ತ ಬಾಗಿ ಅವಳ ಆತ್ಮವನ್ನೇ ಪ್ರಶ್ನಿಸುತ್ತಿರುವಂತೆ "ನನ್ನ ಮಾತು ಸುಳ್ಳೇ ?" ಎಂದು ಕೇಳಿದ.

ಅವನ ಪ್ರಶ್ನೆಗೆ ಅವಳು ತಡಬಡಿಸಿದಳು. 'ಹೌದು' ಎಂದು ಹೇಗೆ ಹೇಳಲಿ ? ಹೇಳದಿದ್ದರೆ ಸುಳ್ಳಾಗುತ್ತದೆ. ಅವಳನ್ನು ಕುರಿತು "ನೀವು ಉತ್ತರ ಕೊಡುವುದು ಬೇಡ. ಚಂದ್ರಿಕಾ ಮೇಡಂ, ನನಗೆ ಅರ್ಥವಾಗಿದೆ"- ಎಂದು ಹೇಳಿ ಸ್ವಲ್ಪ ನಿಧಾನವಾಗಿ "ನೀವು ನನ್ನನ್ನು 'ಸಾರ್' ಎಂದು ಕರೆದಾಗಲೆಲ್ಲಾ ಇರಸು ಮುರಸಾಗುತ್ತದೆ. ನಾನು ನಿಮ್ಮನ್ನು 'ಮೇಡಂ' ಅಂತ ಕರೆಯಲು ಮನಸ್ಸಾಗದು.... ಏಕೆ ? ಸಮಾಜಕ್ಕೆ ನಾವು ಹೆದರುತ್ತೇವೆ. ಅದು ಅದರ ಬಂಧನ ! ನಾವು ಅದಕ್ಕಾಗಿ ನಮ್ಮ ಮಾತು-ನಡೆಗಳನ್ನು ರೂಪಿಸಿಕೊಂಡಿದ್ದೇವೆ. ಅಲ್ಲವೆ ?" ಎಂದನು.

ಚಂದ್ರಿಕಾ ಸ್ವಲ್ಪ ತಲೆ ಬಗ್ಗಿಸಿ "ನೀವೆನ್ನುವುದು ಸತ್ಯ. ನೀವು ನನ್ನನ್ನು 'ಮೇಡಂ' ಅಂದು ಕರೆಯಬೇಡಿ. ನನಗೆ ನಾಚಿಕೆಯಾಗುತ್ತದೆ. ಆದರೆ ........... ನಾನು ನಿಮ್ಮ ಹೆಸರಿಡಿದು ಹೇಗೆ ಕರೆಯಲಿ ? ನೀವು 'ಚಂದ್ರಿಕಾ' ಅನ್ನಬಹುದು. ಆದರೆ ..... ನಾನು?" ಎಂದಳು. ಅವಳು ನಾಚಿದವಳಂತೆ ತೋರಿದಳು.

"ನೀವು ಹೆಸರಿಡಿದು ಏಕೆ ಕರೆಯಬಾರದು ? ನಾನು ಪ್ರೊಫೆಸರ್ ಎಂದೆ ? ಅಥವಾ ನಾನು ನಿಮಗಿಂತ ವಯಸ್ಸಿನಲ್ಲಿ ದೊಡ್ಡವನೆಂದೇ ? ಈ ಸಂಬಂಧವಾಚಕಗಳನ್ನು ಸಮಾಜ ಕೊಟ್ಟಿದೆ. ಯಾರನ್ನು ಹೇಗೆ ಕರೆಯಬೇಕು ಅಂತ ಹೇಳಿಕೊಟ್ಟಿದೆ. ಅವು ಅಂತಸ್ತನ್ನು ಸೂಚಿಸುತ್ತವೆ. ಮೇಲು ಕೀಳು ಅಂತ ತೋರಿಸ್ತವೆ -" ಸ್ವಲ್ಪ ತಡೆದು "ನಿಮಗೆ ಸಂಕೋಚ ಬೇಡ. ನೀವು ನನ್ನನ್ನು 'ಭೂಮಿಗೌಡ'ನೆಂದೇ ಕರೆಯಿರಿ" ಎಂದನು.

ಅವಳು ಆಗಲಿ ಎಂಬಂತೆ ತಲೆಯಾಡಿಸಿ ತಲೆಯಾಡಿಸಿ "ನಿಮ್ಮನ್ನು 'ಭೂಮಿಗೌಡ' ಎಂದು ಹೇಗೆ ಕರೆಯುವುದು ? ಸ್ವಲ್ಪ ಕಷ್ಟವಾಗುತ್ತದೆ. ನಿಮ್ಮ ಹೆಸರೇ ಅಂಥಾದ್ದು. ಸ್ವಲ್ಪ ಅಪರೂಪ. ನಿಮ್ಮನ್ನು ನಾನು 'ಭೂಮಿ' ಎಂದು ಕರೆಯಬಹುದು ಅಂತ ತೋರುತ್ತದೆ. ನನಗೂ ಇಷ್ಟವಾಗುತ್ತೆ" ಎಂದಳು.

ಅನಂತರ ಇಬ್ಬರೂ ಮೌನವಾದರು. ಭೂಮಿಗೌಡ ರೆಡ್ಡಿಯ ನಿರೀಕ್ಷೆಯಲ್ಲಿ ರೆಸಾರ್ಟ್ ಕಛೇರಿಯತ್ತ ನೋಡಿದ. ಚಂದ್ರಿಕಾ ಅವನನ್ನು ಕುರಿತು "ಆದರೂ ನಿಮ್ಮ ಮನದ ಮೂಲೆಯಲೆಲ್ಲೋ ಏನೋ ನೋವು ಅಡಗಿ ಕೂತಿರುವಂತೆ ತೋರುತ್ತದೆ. ಅದು ಏನೆಂದು ಕೇಳಬಹುದೇ ?" ಎಂದು ಕೇಳಿದಳು.

"ನನ್ನ ಭೂತ ಕಾಲದ ನೋವಿನ ಎಳೆಯಿರಬಹುದು, ಚಂದ್ರಿಕಾ. ಮುಂದೆಂದಾರೂ ನಾವಿಬ್ಬರು ಭೇಟಿಯಾದರೆ ಆ ಎಳೆಯನ್ನು ನಿಮ್ಮ ಮುಂದೆ ಬಿಡಿಸಬಹುದು" ಎಂದನು.

## ಅಧ್ಯಾಯ : ಹದಿನಾಲ್ಕು

ಸುಮಾರು ಇಪ್ಪತ್ತು ನಿಮಿಷಗಳು ಕಳೆದಿರಬಹುದು. ರೆಡ್ಡಿ ರೆಸಾರ್ಟ್ ಕಛೇರಿಯಿಂದ ಹೊರಬಂದ. ಅವನ ಹಿಂದೆ ಒಬ್ಬ ಸ್ಟೀವರ್ಡ್. ಅವನು ಬಿಳಿ ಷರ್ಟನ್ನು ಕಪ್ಪು ಪ್ಯಾಂಟಿನೊಳಗೆ ಇನ್‌ಷರ್ಟ್ ಮಾಡಿದ್ದ. ಅವನ ಕುತ್ತಿಗೆಯಲ್ಲಿ ಕಂದು ಬಣ್ಣದ ಟೈ ಇತ್ತು.

ರೆಡ್ಡಿ "ಮಹೇಶ್, ಶರಣ್ ಇಲ್ಲಿ ಒಂದು ಸೂಪರ್ ಡಿಲಕ್ಸ್ ಕಾಟೇಜ್ ತೆಗೆದು ಕೊಂಡಿದ್ದೇನೆ. ಇಂದು ರಾತ್ರಿ ಇಲ್ಲೇ ನಮ್ಮ ವಾಸ್ತವ್ಯ" ಎಂದು ಅನೌನ್ಸ್ ಮಾಡಿದ. ಸ್ಟೀವರ್ಡ್ ಕೀ ತೆಗೆದುಕೊಂಡು ಮುಂದೆ ಹೋದ. ರೆಡ್ಡಿ ಕಾರನ್ನು ಪಾರ್ಕಿಂಗ್ ಜಾಗದಲ್ಲಿ ನಿಲ್ಲಿಸಲು ಮುಂದಾದ. ಶರಣ್ ಸ್ವಲ್ಪ ಮುಂದೆ ಬಂದು, "ಅಲ್ಲ ರೆಡ್ಡಿ, ನಾವು ಮೈಸೂರಿಗೆ ಹೋಗುತ್ತಿದ್ದೆವು. ಅಲ್ಲಿಗೆ ನಮ್ಮನ್ನು ಡ್ರಾಪ್ ಮಾಡಿ ಇಲ್ಲಿಗೆ ಬರಬಹುದಿತ್ತಲ್ಲ. ಆಗಲೇ ತುಂಬಾ ತಡವಾಗಿದೆ.ನನ್ನ ತಂಗಿ ಮನೆಗೆ ಬಾರದಿರುವುದಕ್ಕೆ ಅಪ್ಪ ಅಮ್ಮ ಗಾಬರಿ ಯಾಗ್ತಾರೆ. ಜೊತೆಗೆ, ಪ್ರೊಫೆಸರ್ ಬೇರೆ ಇದ್ದಾರೆ, ನಮ್ಮಿಂದ ಅವರಿಗೇಕೆ ತೊಂದರೆ ?" ಎಂದನು.

" ಗಾಬರಿ ಬೇಡ ಶರಣ್, ಅವರನ್ನು ಮನೆಗೆ ತಲುಪಿಸುವ ಜವಾಬ್ದಾರಿ ನನ್ನದು. ಸಿಸ್ಟರ್‌ನ ನಿಮ್ಮ ಮನೆಗೆ, ಪ್ರೊಫೆಸರ್‌ನ ಅವರ ಮನೆಗೆ ಇನ್ನೊಂದು ಗಂಟೆಯಲ್ಲಿ ಬಿಡುವ ಜವಾಬ್ದಾರಿ ನನ್ನದು. ಬಸಂತ್ ಕುಮಾರ್‌ಗೆ ಮಾತು ಕೊಟ್ಟಿದ್ದೇನೆ. ಬಸಂತ್ ಕುಮಾರ್ ನಮ್ಮವರು ಎಂದ ಮೇಲೆ ಪ್ರೊಫೆಸರ್ ನಮ್ಮವರೆ ತಾನೆ !" ಎಂದ ರೆಡ್ಡಿ.

ಮಹೇಶ ಸುಮ್ಮನೆ ನಿಂತೇ ಇದ್ದ. ಆಗ ಭೂಮಿಗೌಡ ಸುಮೊ ದಿಂದ ಕೆಳಗೆ ಇಳಿದ. ಚಂದ್ರಿಕಾ ತನ ವ್ಯಾನಿಟಿ ಬ್ಯಾಗನ್ನು ಬಲ ಹೆಗಲಿಗೇರಿಸಿ, ತನ್ನ ಕಂಕುಳಲ್ಲಿ ಬೆಳ್ಳಿಯನ್ನು ಅವುಚಿಕೊಂಡು ಅವನನ್ನು ಹಿಂಬಾಲಿಸಿದಳು. ರೆಡ್ಡಿಯನ್ನು ನೇರವಾಗಿ ಉದ್ದೇಶಿಸಿ ಭೂಮಿಗೌಡ "ಮಿಸ್ಟರ್ ರೆಡ್ಡಿ, ನನಗಾಗಿ ನೀವು ಈಗಾಗಲೇ ತುಂಬಾ ತೊಂದರೆ ತೆಗೆದುಕೊಂಡಿದ್ದೀರಿ. ನನಗೇನು ಬೇಸರವಿಲ್ಲ. ಬಸಂತ್‌ಕುಮಾರ್‌ಗೆ ನಾನು ಬೇಕಾದರೆ ಹೇಳಿಕೊಳ್ತೇನೆ. ನೀವು ಇಲ್ಲೇ ಇದ್ದು ರೆಸ್ಟ್ ತೆಗೆದುಕೊಳ್ಳಿ. ರಸ್ತೆಯಿಂದ ಅರ್ಧ ಕಿಲೋ ಮೀಟರ್ ಹೋದರೆ ಪಶ್ಚಿಮ ವಾಹಿನಿ ಸಿಗುತ್ತೆ. ಅಲ್ಲಿ ಬಸ್ ಸಿಗುತ್ತೆ. ನಾನು ಹೋಗುತ್ತೇನೆ-" ಎಂದನು.

ಚಂದ್ರಿಕಾ ಅಣ್ಣನ ಪಕ್ಕ ಸರಿದು "ಹೌದಣ್ಣ, ನನಗೆ ಗಾಬರಿಯಾಗ್ತಿದೆ. ಬಾ ಪ್ರೊಫೆಸರ್ ಜೊತೆ ಹೋಗೋಣ. ಅವರಿಗೆ ಈ ಏರಿಯಾ ಎಲ್ಲ ಚೆನ್ನಾಗಿ ಗೊತ್ತು. ಇನ್ನು ತಡವಾದರೆ ಅಮ್ಮ ಗಾಬರಿಯಾಗ್ತಾರೆ" ಎಂದು ಅವನ ತೋಳು ಹಿಡಿದು ಜಗ್ಗಿದಳು. ಅವಳಿಗೆ ಅಣ್ಣನ ದೌರ್ಬಲ್ಯ ಗೊತ್ತಿತ್ತು. ಕಾಟೇಜ್ ತೆಗೆದುಕೊಂಡಿದ್ದಾರೆ ಅಂದ ಮೇಲೆ ಗುಂಡು, ತುಂಡು ಇದ್ದೇ ಇರುತ್ತದೆ. ಎಷ್ಟು ಹೊತ್ತು ಆಗುತ್ತೋ ಏನೋ ? ಅವಳು ಏನನ್ನೊ ನಿರ್ಧರಿಸಿದವಳಂತೆ

ಶರಣ್‌ನನ್ನು ನೋಡಿ "ನೀನು ಬೇಕಾದರೆ ಇಲ್ಲಿರು. ಬೆಳಿಗ್ಗೆ ಮನೆಗೆ ಬಾ. ನಾನು ಪ್ರೊಫೆಸರ್ ಜೊತೆ ಹೋಗುತ್ತೇನೆ" ಎಂದಳು.

ರೆಡ್ಡಿ "ಒಂದ್ನಿಮಿಷ ಸಿಸ್ಟರ್, ಬಂದೆ" ಎಂದವನೆ ಗಾಡಿ ಸ್ಟಾರ್ಟ್ ಮಾಡಿ ಅದನ್ನು ಪಾರ್ಕಿಂಗ್ ಜಾಗದಲ್ಲಿ ನಿಲ್ಲಿಸಿ, ಡೋರ್ ಲಾಕ್ ಮಾಡಿ, ಕೀಯನ್ನು ಕೈಯಲ್ಲಿ ತಿರುಗಿಸುತ್ತಾ ಅವರು ನಾಲ್ವರು ನಿಂತಿದ್ದ ಸ್ಥಳಕ್ಕೆ ಬಂದ. "ನೋಡಿ ಸಿಸ್ಟರ್, ನೋಡಿ ಪ್ರೊಫೆಸರ್, ನೀವು ಇಂದು ನನ್ನ ಅತಿಥಿಗಳು. ನೀವು ನನ್ನ ಆತಿಥ್ಯ ಸ್ವೀಕರಿಸಿಯೇ ಹೋಗಬೇಕು. ಒಳ್ಳೇ ಭರ್ಜರಿ ಊಟಕ್ಕೆ ಆರ್ಡರ್ ಮಾಡಿದ್ದೇನೆ. ನೋಡಿ ಈಗ ಹತ್ತೂ ನಲವತ್ತು. ಹನ್ನೊಂದಕ್ಕೆಲ್ಲ ಊಟವಾಗುತ್ತೆ. ಹನ್ನೊಂದೂವರೆಗೆಲ್ಲ ನೀವು ಮನೆಯಲ್ಲಿರಬಹುದು. ಅದು ನನ್ನ ಜವಾಬ್ದಾರಿ. ಇದಕ್ಕೆ ನೀವು ಒಪ್ಪಲೇಬೇಕು-" ಎಂದು ಶರಣ್‌ನ ಕಡೆ ತಿರುಗಿ "ಏನಂತೀರಾ ಶರಣ್" ಎಂದನು.

ಶರಣ್ ಹಿಂದು ಮುಂದು ನೋಡಿ, ಮಹೇಶನ ಮುಖವನ್ನು ಏನು ಮಾಡುವುದು ಎಂಬಂತೆ ನೋಡಿದನು. ಅವನಲ್ಲಿ ಯಾವ ಪ್ರತಿಕ್ರಿಯೆ ಇರಲಿಲ್ಲ. ತಂಗಿಯ ಕಡೆ ತಿರುಗಿ "ಎಷ್ಟೋ ತಡವಾಗಿದೆ, ಚಂದ್ರಿಕಾ. ರೆಡ್ಡಿ ಇಷ್ಟು ಒತ್ತಾಯ ಮಾಡುತ್ತಿದ್ದಾರೆ. ಊಟ ಮಾಡಿ ಹೊರಟು ಬಿಡೋಣ. ಅಮ್ಮನಿಗೆ ಒಂದು ಫೋನ್ ಮಾಡಿ ಸ್ವಲ್ಪ ತಡವಾಗುತ್ತೆ ಅಂತ ತಿಳಿಸಿ ಬಿಡು" ಎಂದು ಅಂದವನೆ ಭೂಮಿಗೌಡನ ಕಡೆ ತಿರುಗಿ "ಸ್ವಲ್ಪ ಅಡ್ಜೆಸ್ಟ್ ಮಾಡಿಕೊಳ್ಳಿ ಸಾರ್, ಏನೋ ನಿಮ್ಮಂಥ ದೊಡ್ಡೋರು ಸಿಕ್ಕಿದ್ದಾರಲ್ಲಾ ಅಂತ ರೆಡ್ಡಿ ಟ್ರೀಟ್ ಇಟ್ಕೊಂಡಿದ್ದಾನೆ. ದಯವಿಟ್ಟು ಒಪ್ಪಿಕೊಳ್ಳಿ. ಇನ್ನೊಂದರ್ಧ ಮುಕ್ಕಾಲು ಗಂಟೆ ಅಷ್ಟೆ. ಮೈಸೂರಿಗೆ ಹೊರಟು ಬಿಡೋಣ" ಎಂದ, ವಿನಂತಿ ಮಾಡಿಕೊಳ್ಳುವ ಮುಖ ಭಾವದಿಂದ.

ಭೂಮಿಗೌಡ ಇಕ್ಕಟ್ಟಿಗೆ ಸಿಲುಕಿದ. ಸಾಮಾನ್ಯವಾಗಿ ಅವನು ದಾಕ್ಷಿಣ್ಯದ ವ್ಯಕ್ತಿ ಅಲ್ಲ. ಖಡಾಖಂಡಿತವಾಗಿ ನಿರಾಕರಿಸಬಲ್ಲ. ರಾತ್ರಿ ಯಾದರೇನು ಒಂದಲ್ಲ ಎರಡು ಮೂರು ಮೈಲಿ ನಡೆಯಬಲ್ಲ. ಅವನು ಚಂದ್ರಿಕಾಳ ಮುಖವನ್ನು ನೋಡಿದ. ನಾನು ಈ ಮೂವರ ಜೊತೆ ಇವಳನ್ನು ಬಿಟ್ಟು ಹೋಗುವುದೆ ?ಅವಳಿಗೆ ಬೇಸರವಾಗದೆ ? ಅವನು ತಲೆ ಕೊಡವಿಕೊಂಡ. ತಾನು ಏನು ಯೋಚನೆ ಮಾಡುತ್ತಿದ್ದೇನೆ ? ಅವಳ ಬಗ್ಗೆ ನಾನೇಕೆ ತಲೆ ಕೆಡಸಿ ಕೊಳ್ಳಬೇಕು. ಅವಳ ಜೊತೆ ಅವರಣ್ಣ ಇದ್ದಾನೆ. ಅವಳ ಉಸಾಬರಿ ಅವನದ್ದು. ನಿರ್ದಾಕ್ಷಿಣ್ಯವಾಗಿ 'ಇಲ್ಲ, ನಾನು ಹೋಗುತ್ತೇನೆ' ಎನ್ನಲು ಬಾಯಿ ತೆರೆದ. ಅಷ್ಟರಲ್ಲಿ ಚಂದ್ರಿಕಾ ಅವನನ್ನು ಬೇಡುವ ಕಂಗಳಿಂದ ನೋಡಿದಳು. ಅವನು ಅವಳ ದೃಷ್ಟಿಯನ್ನು ಎದುರಿಸಲಾರದೆ ರೆಡ್ಡಿಯ ಕಡೆ ತಿರುಗಿ "ಆಯ್ತು ರೆಡ್ಡಿ ಅವರೆ, ಇಷ್ಟೇ ತಡವಾಗಿದೆಯಂತೆ. ಇನ್ನೂ ಒಂದು ಗಂಟೆಗೆ ಏಕೆ ಚರ್ಚೆಮಾಡಬೇಕು ? ಊಟ ಮಾಡಿಯೇ ಹೊರಡೋಣ" ಎಂದ.

ಅಷ್ಟರಲ್ಲಿ ರೆಸಾರ್ಟ್ ಬಾಯ್ ಒಬ್ಬ ಇವರ ಬಳಿ ಬಂದ. ರೆಡ್ಡಿ ಅವನನ್ನು ಸುಮೊ ಬಳಿ ಕರೆದುಕೊಂಡು ಹೋಗಿ ತನ್ನ ಮತ್ತು ಮಹೇಶನ ಲಗ್ಗೇಜನ್ನು ಕೊಟ್ಟು ಕಳಿಸದ. ತನ್ನ ಬಲಗೈಯಲ್ಲಿ ಲ್ಯಾಪ್‌ಟ್ಯಾಪ್ ತರದ ಬ್ರೀಫ್‌ಕೇಸನ್ನು ಹಿಡಿದು ಅವರ ಬಳಿ ಬಂದನು.

ರೆಸಾರ್ಟ್‌ಬಾಯ್ ನನ್ನು ರೆಡ್ಡಿ, ಮಹೇಶ, ಶರಣ್ ಹಿಂಬಾಲಿಸಿದರು. ಅವರಿಂದ ಐದಾರು ಅಡಿ ಹಿಂದೆ ಭೂಮಿಗೌಡ ಮತ್ತು ಚಂದ್ರಿಕಾ ನಡೆದರು.

'ಸ್ವೀಟ್ ಐಲ್ಯಾಂಡ್' ರೆಸಾರ್ಟ್ ದ್ವೀಪದಲ್ಲೇನು ನಿರ್ಮಾಣ ಗೊಂಡಿರಲಿಲ್ಲ. ಶ್ರೀರಂಗಪಟ್ಟಣವೇ ಒಂದು ದ್ವೀಪವಾದುದರಿಂದ ಈ ರೆಸಾರ್ಟ್‌ಗೆ ಆ ಹೆಸರನ್ನು ಇಟ್ಟಿದ್ದರು. ಇಲ್ಲಿಗೆ ಒಂದೆರಡು ಬಾರಿ ಭೂಮಿಗೌಡ ಬಂದಿದ್ದ. ಈ ರೆಸಾರ್ಟ್‌ನ ಎಲ್ಲ ಭಾಗಗಳು ಅವನಿಗೆ ಪರಿಚಿತವೇ. ಈ ರೆಸಾರ್ಟ್‌ನಲ್ಲಿ ರಾಷ್ಟ್ರೀಯ ಮಟ್ಟದ ಕಾನ್ಫರೆನ್ಸ್ ನಡೆಸಲು, ಆಧುನಿಕ ಕಂಪ್ಯೂಟರ್ ಸೌಲಭ್ಯಗಳ ಅವಕಾಶ ವಿರುವಂಥ ಹಾಲ್ ಇತ್ತು. ಅನೇಕ ಸಂಸ್ಥೆಗಳು ಈ ಪ್ರಶಾಂತ ವಾತಾವರಣದಲ್ಲಿ ತನ್ನ ಅತಿಥಿಗಳನ್ನಿಳಿಸಿ, ಇಲ್ಲೇ ಕಾನ್ಫರೆನ್ಸ್‌ಗಳನ್ನು ಆಯೋಜಿಸುತ್ತಿದ್ದವು. ಇಂಥ ಕಾನ್ಫರೆನ್ಸ್ ನಲ್ಲಿ ಅವನು ಭಾಗವಹಿಸಿದ್ದ. ಆದರೆ ರಾತ್ರಿವೇಳೆ ಇಲ್ಲಿ ತಂಗಿರಲಿಲ್ಲ. ರಾತ್ರಿ ಮೈಸೂರಿನ ತನ್ನ ಮನೆಗೆ ಹೋಗುತ್ತಿದ್ದ.

ಸುಮಾರು ಹತ್ತು ಎಕರೆ ವಿಸ್ತೀರ್ಣದಲ್ಲಿ ರೆಸಾರ್ಟ್ ಇತ್ತು. ಒಂದು ದೊಡ್ಡ ಊಟದ ಮನೆ-ಬಾರ್ ಸೇರಿದಂತೆ; ಅನೇಕ ಜೋಡಿ ಕಾಟೇಜ್‌ಗಳು; ಸಿಂಗಲ್ ಕಾಟೇಜ್‌ಗಳು; ಸೂಪರ್ ಡಿಲಕ್ಸ್ ಕಾಟೇಜ್‌ಗಳು- ಅವುಗಳ ಎಡ ಭಾಗಕ್ಕೆ ಒಂದು ಈಜು ಕೊಳ; ಅದಕ್ಕೆ ಹೊಂದಿಕೊಂಡಂತೆ ಜಿಮ್ನೇಷಿಯಂ ಅಂಗಣ. ಮಧ್ಯಮ ವರ್ಗದವರು ಇಲ್ಲಿಗೆ ಬರಲಾಗುತ್ತಿರಲಿಲ್ಲ. ಅತಿಯಾದ ಬೆಲೆ. ಜೋಡಿ ಕಾಟೇಜ್‌ನ ಬಾಡಿಗೆಯೇ ಇಪ್ಪತ್ನಾಲ್ಕು ಗಂಟೆಗೆ ಮೂರು ಸಾವಿರ ರೂಪಾಯಿ. ಸೂಪರ್ ಡಿಲಕ್ಸ್ ಕಾಟೇಜ್‌ಗಳ ಬಾಡಿಗೆ ಒಂದು ದಿನಕ್ಕೆ ಹತ್ತುಸಾವಿರ ರೂಪಾಯಿ. ಎಲ್ಲ ಬಗೆಯ ಲಕ್ಷುರಿ ಅಲ್ಲಿತ್ತು.

ಸೂಪರ್ ಡಿಲಕ್ಸ್ ಕಾಟೇಜ್‌ಗಳ ವಿಶೇಷವೇನಂದರೆ, ರಸಾರ್ಟ್‌ನ ಮುಖ್ಯದ್ವಾರದಿಂದ ಬಹಳ ದೂರಕ್ಕೆ ಕಾವೇರಿ ನದಿಗೆ ಹೊಂದಿಕೊಂಡಂತೆ ಅದರ ತೀರದಲ್ಲಿ ಕಟ್ಟಲಾಗಿತ್ತು. ಆಧುನಿಕತೆಗೆ ಗ್ರಾಮೀಣ ಮೆರಗನ್ನು ತಂದು ಕೊಡುವ ರೀತಿ-ತೊಟ್ಟಿ ಮನೆಯಹೊರ ಅಂಗಣದಂತೆ ನಿರ್ಮಿಸಲಾಗಿತ್ತು. ಕಾಟೇಜನ್ನು ಪ್ರವೇಶ ಮಾಡುತ್ತಿದ್ದಂತೆಯೇ ಈ ಹೊರ ಅಂಗಣ ಸ್ವಾಗತಿಸುತ್ತಿತ್ತು. ಸಿಟ್‌ಔಟ್ ಎಂದು ಬೇಕಾದರೂ ಕರೆಯಬಹುದು. ಆ ಸಿಟ್‌ಔಟ್‌ನಲ್ಲಿ ಒಂದು ಬಿದುರಿನ ಚೌಕಟ್ಟಿನ ಟೀಪಾಯಿ. ಅದರ ಸುತ್ತ ಮೆತ್ತನೆಯ ನಾಲ್ಕು ಆರಾಮಾಸನಗಳು. ಒಳಗೆ ಪ್ರವೇಶ ಮಾಡಿದರೆ ಎದುರಾಗುವುದು ಒಂದು ಡ್ರಾಯಿಂಗ್ ರೂಂ. ರೂಮಿನ ಒಳಾಂಗಣದಲ್ಲಿ ನಾಲ್ಕು ದಿಕ್ಕಿಗೆ ನಾಲ್ಕು ಸೋಫಾಗಳು. ಮಧ್ಯೆ ಎರಡು ಟೀಪಾಯಿಗಳು. ಡ್ರಾಯಿಂಗ್ ರೂಂ ಎಡಭಾಗಕ್ಕೆ ಒಂದು ಡಬಲ್ ಬೆಡ್ ರೂಂ; ಬಲಭಾಗಕ್ಕೆ ಸ್ನಾನದ ಮನೆ ಕಂ ಲ್ಯಾವಟರಿ. ಅದು ಅದ್ದೂರಿಯೇ ! ಸಿರಾಮಿಕ್ ಸ್ನಾನದ ತೊಟ್ಟಿ, ಫಳ ಫಳನೆ ಮಿಂಚುವ ಗ್ಲೇಜಿಂಗ್ ಟೈಲ್ಸ್. ಪ್ರತಿ ಕಿಟಕಿಗೂ ಬೆಲೆ ಬಾಳುವ ಕರ್ಟನ್‌ಗಳು. ಶ್ರೀಮಂತಿಕೆಯೆ ಮತ್ತೊಂದು ರೂಪ.

ಈ ಸೂಪರ್ ಡಿಲಕ್ಸ್‌ನ ಕಾಟೇಜ್ ಸಿಟ್‌ಔಟ್‌ಗಳಲ್ಲಿ ಕುಳಿತರೆ ಕಾವೇರಿ ನದಿಯನ್ನು ಕಾಣಬಹುದಿತ್ತು. ಅವಳು ಶ್ರೀರಂಗಪಟ್ಟಣವನ್ನು ಅರ್ಧ ವೃತ್ತಾಕಾರದಲ್ಲಿ ಬಳಸುತ್ತಾ ಮುನ್ನಡೆಯುತ್ತಿದ್ದಳು. ನದಿ ತೀರದಲ್ಲಿ ಬೆಳೆದಿದ್ದ ಬೃಹತ್ತಾದ ಮರಗಳ ಕಾಂಡಗಳ ನಡುವೆ

ಒಮ್ಮೆ ಕಂಡು, ಮತ್ತೊಂದೆಡೆ ಮರೆಯಾಗಿ ಮೃದುವಾಗಿ ಸದ್ದುಮಾಡುತ್ತಾ ಸಾಗುವ ಅವಳನ್ನು ನೋಡುವುದೇ ಚಂದ. ಸೂರ್ಯೋದಯದ ವೇಳೆಯಲ್ಲಿ, ಸೂರ್ಯಾಸ್ತದ ಸಮಯದಲ್ಲಿ ಇವಳಿಗೆ ಹೊಸ ಸೊಬಗೇ ಮೂಡುತ್ತದೆ. ಸಿಟ್‌ಔಟ್‌ನಿಂದ ನದಿ ತೀರಕ್ಕೆ ಇಳಿದು ಹೋಗಲು ಮೆಟ್ಟಿಲುಗಳನ್ನು ನಿರ್ಮಿಸಲಾಗಿತ್ತು. ಈ ಕಾಟೇಜ್‌ನಿಂದ ಸುಮಾರು ನೂರು ಅಡಿಗಳ ದೂರದಲ್ಲಿ ನದಿ ಪಾತ್ರವಿತ್ತು.

ನದಿ ಪಾತ್ರದಲ್ಲಿ "ನದಿಯಲ್ಲಿ ಸೆಳೆತ ಇದೆ. ನೀರಿನಲ್ಲಿ ಇಳಿಯಬೇಡಿ" ಎಂಬ ಎಚ್ಚರಿಕೆಯ ಬೋರ್ಡನ್ನು ಹಾಕಲಾಗುತ್ತು.

"ಸ್ವೀಟ್‌ಐಲ್ಯಾಂಡ್" ರೆಸಾರ್ಟಿನಲ್ಲಿ ಐದಾರು ಸೂಪರ್ ಡಿಲಕ್ಸ್ ಕಾಟೇಜ್‌ಗಳಿದ್ದವು. ನದಿಗೆ ಸಮಾನಾಂತರವಾಗಿ ಅವನ್ನು ನಿರ್ಮಿಸಲಾಗಿತ್ತು. ಒಂದು ಕಾಟೇಜ್‌ಗೂ ಮತ್ತೊಂದು ಕಾಟೇಜ್‌ಗೂ ಅರವತ್ತು ಅಡಿಗಳ ಅಂತರವಿತ್ತು. ಒಂದು ಕಾಟೇಜ್‌ನ ಏಕಾಂತಕ್ಕೆ ಮತ್ತೊಂದು ಕಾಟೇಜ್‌ನಿಂದ ಭಂಗವುಂಟಾಗುತ್ತಿರಲಿಲ್ಲ. ನದಿಯ ಪಾತ್ರಕ್ಕಿಂತ ಸಾಕಷ್ಟು ದಿಣ್ಣೆಯ ಮೇಲೆ ಕಾಟೇಜ್‌ಗಳ ನಿರ್ಮಾಣವಾಗಿದ್ದರಿಂದ ಮಳೆಗಾಲದಲ್ಲಿ ನದಿ ಪಾತ್ರ ಉಬ್ಬಿದರೂ ನೀರು ಮಾತ್ರ ಕಾಟೇಜ್‌ನ ಬಾಗಿಲ ಮೆಟ್ಟಿಲು ಮುಟ್ಟುತ್ತಿತ್ತು. ಆದರೂ 'ಸ್ವೀಟ್ ಐಲ್ಯಾಂಡ್'ನ ವ್ಯವಸ್ಥಾಪಕರು ಪ್ರವಾಹ ಸಂದರ್ಭದಲ್ಲಿ ಈ ಸೂಪರ್ ಡಿಲಕ್ಸ್ ಕಾಟೇಜ್‌ಗಳನ್ನು ಬಾಡಿಗೆಗ ನೀಡುವ ಧೈರ್ಯ ಮಾಡುತ್ತಿರಲಿಲ್ಲ.

ಭೂಮಿಗೌಡ ಒಮ್ಮೆ ರೆಸಾರ್ಟನ್ನು ಅವಲೋಕನ ಮಾಡಿದ. ರೂಂಗಳ ಸಾಲು, ಈಜುಕೊಳ ರಸ್ತೆಯಲ್ಲಿ ಅಲ್ಲಲ್ಲಿ ಸಣ್ಣ ದೀಪಗಳನ್ನು ಹಾಕಿದ್ದರು. ತಿಂಗಳ ಬೆಳಕಿನೊಡನೆ ಅವು ಸ್ಪರ್ಧಿಸುವಲ್ಲಿ ಸೋತಿದ್ದವು. ಚಂದ್ರ ಆಗಲೇ ನೆತ್ತಿಯ ಹತ್ತಿರ ಬರುವ ತವಕದಲ್ಲಿದ್ದ. ಚಂದ್ರನ ಕಿರಣ ದಟ್ಟವಾಗಿ ಎಲ್ಲೆಂದರಲ್ಲಿ ಎರಚಿತ್ತು. ಕಾಟೇಜ್‌ಗೆ ಹೋಗುವ ದಾರಿಯ ಎಡಭಾಗಕ್ಕೆ ಹತ್ತು ಅಡಿ ದೂರದಲ್ಲಿದ್ದ ಈಜುಕೊಳದಲ್ಲಿ ಚಂದ್ರ ಪ್ರತಿಫಲಿಸುತ್ತಿದ್ದ. ತಣ್ಣನೆ ಗಾಳಿಗೆ ಅತಿ ಸಣ್ಣದಾಗಿ ಏಳುತ್ತಿದ್ದ ನೀರಿನ ಅಲೆಗಳಲ್ಲಿ ಚಂದ್ರ ಈಜಾಡುತ್ತಿದ್ದ. ಭೂಮಿಗೌಡ ಚಂದ್ರಿಕಾಳನ್ನು ಕುರಿತು "ಬನ್ನಿ, ನೀರು ನೋಡೋಣ" ಎಂದ. ಚಂದ್ರಿಕಾ ಬೆಳ್ಳಿಯನ್ನು ಕೆಳಕ್ಕೆ ಬಿಟ್ಟಳು. ಅದು ನೆಲವನ್ನು ಮೂಸುತ್ತಾ ಅವಳ ಕಾಲುಗಳ ಬಳಿಯೇ ಸುಳಿದಾಡುತ್ತಿತ್ತು. ಅವರಿಬ್ಬರು ಈಜುಕೊಳದ ಅಂಚಿನ ಕಟ್ಟೆಯ ಮೇಲೆ ನಿಂತಿದ್ದರು. ಪುಟ್ಟ ಕೊಳ. ಇಪ್ಪತ್ತು-ಮೂವತ್ತು ಅಡಿ ಇದ್ದ ಹಾಗಿತ್ತು. ಅದರ ಒಂದು ಭಾಗದಲ್ಲಿ ತಳ ಕಾಣುತ್ತಿತ್ತು. ಅಲ್ಲಿಂದ ಅದು ಪೂರ್ವಕ್ಕೆ ಆಳವಾಗುತ್ತಾ ಸಾಗಿ ದಟ್ಟ ನೀಲಿಯಾಗಿ ತೋರುತ್ತಿತ್ತು. ಈಜುಕೊಳದ ಒಳ ಗೋಡೆಗಳಿಗೆ ತೆಳು ನೀಲಿ ಬಣ್ಣವನ್ನು ಬಳಿದದ್ದರಿಂದ ನೀರಿಗೆ ನೀಲಿಯ ಛಾಯೆ ಬಂದಿತ್ತು. ಅವರ ನೆತ್ತಿಯ ಮೇಲೆ ಚಂದ್ರ ಇನ್ನೂ ಬಂದಿರಲಿಲ್ಲವಾಗಿ ಅವರ ನೆರಳು ಅವರ ಕಾಲಬುಡದಿಂದ ಒಂದೆರೆಡು ಅಡಿ ಮುಂದೆ ಚಾಚಿತ್ತು. ರೆಸಾರ್ಟ್‌ನ ಮೌನಕ್ಕೂ, ಚಂದ್ರನ ಬೆಳಕಿನ ದಟ್ಟತನಕ್ಕೂ ಆ ನೆರಳು ಮತ್ತಷ್ಟು ಕಪ್ಪಗೆ ಕಂಡಿತು. ಚಂದ್ರಿಕಾ ಆ ಕಡು ಬೇಸಿಗೆಯಲ್ಲು ನದಿ ಭಾಗದಿಂದ ಬೀಸುತ್ತಿದ್ದ ತಂಗಾಳಿಗೆ ಒಮ್ಮೆ ನಡುಗಿದಳು.

ತುಸು ಬಗ್ಗಿ ನೀರಿನಲ್ಲಿ ತನ್ನ ಬಿಂಬವನ್ನು ಕಂಡು ಕ್ಷಣ ಬೆಚ್ಚಿ, ನಂತರ ಸಾವರಿಸಿ ಕೊಂಡಳು. ಅವಳಿಗೆ ಭೂಮಿಗೌಡನ ಕೈಹಿಡಿದು ಕೊಳ್ಳಬೇಕೆನ್ನಿಸಿತು. ಅವನ ಹತ್ತಿರ ಸರಿದು ನಿಂತಳು.

"ಈ ನಿಶ್ಯಬ್ದವೂ ಹೆದರಿಕೆಯನ್ನುಂಟು ಮಾಡುತ್ತದೆ, ಅಲ್ವಾ ?" ಎಂದು ಅವನನ್ನು ಕೇಳಿದಳು. ಅವಳ ಉಸಿರು ಅವನ ಭುಜವನ್ನು ಸ್ಪರ್ಶಿಸುತ್ತಿತ್ತು.

"ನೀವು, ಬೆಂಗಳೂರಿನ ಜನ. ದಿನದ ಇಪ್ಪತ್ತಾಲ್ಕು ಗಂಟೆ ಗಲಾಟೆ, ಜನಜಂಗುಳಿಯ ಮಧ್ಯೆ ಇದ್ದು, ಅದಕ್ಕೆ ಹೊಂದಿಕೊಂಡು ಬಿಟ್ಟಿರುತ್ತೀರ. ನಿಮಗೆ ಏಕಾಂತ, ಮೌನ ಅಪರಿಚಿತ ವಸ್ತುಗಳು. ಅವು ನಿಮಗೆ ಹೆದರಿಕೆ ಮೂಡಿಸುವುದು ಸಹಜ"ಎಂದ ಭೂಮಿಗೌಡ.

ಚಂದ್ರಿಕಾ ತನ್ನ ಕಣ್ಣುಗಳಿಂದ ಅವನನ್ನು ದಿಟ್ಟಿಸಿ "ಏಕೆ ಭೂಮಿ ಅವರೆ, ಮರೆತು ಬಿಟ್ಟಿರಾ! ನಾನೂ ಮೈಸೂರಿನ ಹುಡುಗಿ. ನಾನು ಹುಟ್ಟಿದ್ದು, ಬೆಳೆದದ್ದು, ಓದಿದ್ದು ಎಲ್ಲಾ ಮೈಸೂರಲ್ಲೇ. ಮೈಸೂರು ನನಗೆ ಪ್ರಿಯವಾದ ಊರು. ಅಲ್ಲಿಯ ಶಾಂತಿ ನೆಮ್ಮದಿ ನನಗೆ ಬೆಂಗಳೂರಲ್ಲಿ ಸಿಕ್ಕಿಲ್ಲ" ಎಂದು ಹೇಳಿ ತ್ನಲ್ಲಿ ತಾನೆ ಹೇಳಿಕೊಳ್ಳುವಂತೆ "ಮತ್ತೆ ನನ್ನ ಪ್ರಿಯ ಮೈಸೂರಿಗೆ ಓಡಿಬರೋಣ ಅನ್ನಿಸುತ್ತೆ. ನಿಮಗೆ ಆಶ್ಚರ್ಯವಾಗಬಹುದು, ಬೆಂಗಳೂರಲ್ಲಿ ಜನಜಂಗುಳಿಯ ಮಧ್ಯೆ ಇದ್ದೂ ನಾನು ಏಕಾಂತ ಅನುಭವಿಸಿದ್ದೇನೆ. ದಿನಗಟ್ಟಳೆ ಒಬ್ಬಳೇ ಮಾತಾಡಿಕೊಂಡಿದ್ದೇನೆ. ಪುಸ್ತಕ, ಟೀವಿಗಳನ್ನು ಸ್ನೇಹಿತರನ್ನಾಗಿಸಿ ಕೊಳ್ಳಲು ಯತ್ನಿಸಿ ವಿಫಲಳಾಗಿದ್ದೇನೆ. ಸುಖ ಅನ್ನೋದು ಸವಲತ್ತು-ಸೌಲಭ್ಯಗಳಲ್ಲಿಲ್ಲವೆಂದು ಅರ್ಥಮಾಡಿಕೊಂಡಿದ್ದೇನೆ. ನನ್ನೊಳಗೆ ಅಪೂರ್ಣತೆಯೊಂದು ಅತೃಪ್ತಿಯ ರೂಪ ತಾಳುತ್ತಿದೆಯೆಂದು ಅನ್ನಿಸಿ ಹೆದರಿಕೆಯಾಗುತ್ತಿದೆ."

ಅವಳು ಅವನ ತೋಳನ್ನು ಹಿಡಿದು "ನೋಡಿ ಭೂಮಿ, ನನ್ನನ್ನು ನೋಡಿ. ನನ್ನಲ್ಲಿ ಎಲ್ಲವೂ ಇದೆ. ಆದರೆ ಆತ್ಮಕ್ಕೆ ಏನೋ ಕೊರತೆಯಿದೆಯೆಂದು ನಿಮಗೆ ಕಾಣುತ್ತದೆಯೇ. ಯಾವುದೇ ವ್ಯಕ್ತಿಯ ವ್ಯಕ್ತಿತ್ವದಲ್ಲಿ ಅಪೂರ್ಣತೆಯೆನ್ನುವುದು ಸಹಜ. ಅದು ಇರಬೇಕು. ಅದು ಇದ್ದಾಗಲೇ ಅವನು ಪೂರ್ಣತೆಯ ಕಡೆ ಸಾಗುವ ನಿರಂತರ ಪ್ರಯತ್ನದಲ್ಲಿ ಸಾಗುತ್ತಾನೆ. ಆದರೆ ಇತ್ತೀಚೆಗೆ ನನ್ನಲ್ಲಿ ಅತೃಪ್ತಿ ಜಾಸ್ತಿಯಾಗುತ್ತಿದೆ. ಅದಕ್ಕೆ ನನಗೆ ಹೆದರಿಕೆಯಾಗ್ತಿದೆ, ಅದು ಆರೋಗ್ಯಕರ ಅಲ್ಲ. ಎಲ್ಲಿ ಅತೃಪ್ತಿಯ ವ್ಯೂಹದಲ್ಲಿ ಹೊರಬರಲಾರದೆ ಹುಚ್ಚಿಯಾದರೆ ಅಂತ ಹೆದರಿಕೆಯಾಗ್ತಿದೆ-" ಎಂದು ಹೇಳಿ ಮೌನವಾದಳು.

ಭೂಮಿಗೌಡನಿಗೆ ಏನು ಹೇಳಬೇಕೆಂದು ತೋಚದಾಯಿತು. ಏನು ಹೇಳಿದರೂ ಉಪದೇಶವಾಗುತ್ತದೆ. ಉಪದೇಶ ಮಾಡುವುದು ಸುಲಭವೆಂದು ಅವನಿಗೆ ಗೊತ್ತು. ಆದರೂ ಏನಾದರೂ ಹೇಳಲೇಬೇಕಲ್ಲ. "ಚಂದ್ರಿಕಾ, ಜೀವನ ತಿರುವುಗಳ ಮೊತ್ತ. ಗುರಿ ಇಟ್ಟುಕೊಂಡು ಅದರ ಸಾಧನೆಯತ್ತ ಸಾಗುವುದು ಒಂದು ದಾರಿಯಾದರೆ, ಆ ಗುರಿಗಳನ್ನು ಅಡ್ಡಾದಿಡ್ಡಿಯಾಗಿಸಿ ತನ್ನಿಷ್ಟ ಬಂದಂತೆ ರೂಪ ತಾಳುವುದು ಬದುಕಿನ ಮತ್ತೊಂದು ದಾರಿ. ನೀವು ಹತಾಶರಾಗಬೇಕಿಲ್ಲ. ನಿಮ್ಮ ದೃಷ್ಟಿ ಧೋರಣೆಗಳು ನಿಮಗೆ ಸ್ಪಷ್ಟವಿದ್ದರೆ, ಆತ್ಮಕ್ಕೆ ದ್ರೋಹ ಬಗೆಯದಂತಿದ್ದರೆ ನೀವು ನಡೆವ ದಾರಿಯಲ್ಲಿ ನಿಮಗೆ ಅರ್ಥಸಿಗುತ್ತದೆ. ನಾನು ಹೋಗುತ್ತಿರುವ ದಾರಿ ಸರಿಯಾಗಿದೆ ಎಂದು ನಿಮಗೆ ಅನಿಸಿದರೆ ಅದರಲ್ಲೊಂದು ತೃಪ್ತಿ ಸಿಗುತ್ತದೆ. ನನಗೆ ಅನ್ನಿಸಿದಂತೆ ಹೇಳುವುದಾದರೆ,

ನೀವು ಕಳೆದ ಕೆಲವು ವರ್ಷಗಳಿಂದ ನಿಮ್ಮೊಳಗೆ ಒಂದು ವೃತ್ತವನ್ನು ಕಟ್ಟಿಕೊಂಡಿದ್ದೀರಾ. ಅದರಾಚೆಯೂ ನಿಮ್ಮ ಜೀವನಕ್ಕೊಂದು ಅರ್ಥ ತಂದು ಕೊಡುವ ಪ್ರಪಂಚವಿದೆಯೆಂಬ ಅರಿವೂ ನಿಮಗಿದೆ. ಅಲ್ಲವೆ? ಆದರೆ ಆ ವೃತ್ತವನ್ನು ಒಡೆದು ಹೊರಬರಲು ನಿಮಗೆ ಭಯ. ಸಮಾಜದ ಭಯ. ಆ ಭಯದಿಂದ ನೀವು ಹೊರಬಂದು ಈ ಸಮಾಜವೊಡ್ಡುವ ಸವಾಲುಗಳನ್ನು ಎದುರಿಸಬಲ್ಲೆ ಅನ್ನುವುದಾದರೆ; ಹೊಸ ಸಾಧ್ಯತೆಗಳು ತನಗೆ ತಾನೆ ನಿಮ್ಮ ಮುಂದೆ ತೆರೆದುಕೊಳ್ಳುತ್ತವೆ. ಯೋಚನೆ ಮಾಡಿ ನೋಡಿ" ಎಂದನು.

ಅವನ ತೋಳನ್ನು ಬಿಡದೆಯೇ ತಲೆ ಎತ್ತಿ ಮತ್ತೊಮ್ಮೆ ಅವನ ಮುಖ ನೋಡಿದಳು. ಅವನ ಕಣ್ಣುಗಳಲ್ಲಿ ಬೆಳಕೊಂದು ಹೊಳೆದಂತಾಯಿತು. ತನ್ನ ತೊಳಲಾಟಕ್ಕೆ, ಕತ್ತಲೆಯ ದಾರಿಗೆ ಅಸ್ಪಷ್ಟವಾಗಿಯಾದರೂ ದಾರಿಯೊಂದು ಗೋಚರಿಸುವಂತೆ ತೋರಿತು. ಅವಳ ಮನಸ್ಸು ಸ್ವಲ್ಪ ನಿರಾಳವಾಯಿತು. ಅವಳು ಅವನ ತೋಳನ್ನು ಬಿಟ್ಟು. ತನ್ನೆರಡು ಕೈಗಳನ್ನು ರೆಕ್ಕೆಯಂತೆ ಹರಡಿ, ಕಣ್ಣು ಮುಚ್ಚಿ, ತಲೆಯನ್ನು ಸ್ವಲ್ಪ ಹಿಂದಕ್ಕೆ ವಾಲಿಸಿ ನಿಡಿದಾಗಿ ಉಸಿರೆಳೆದುಕೊಂಡಳು. ಸ್ವಲ್ಪ ಹೊತ್ತು ಉಸಿರನ್ನು ತನ್ನೊಳಗೇ ತಡೆದು, ಅವನ್ನು ನಿಧಾನವಾಗಿ ಹೊರಬಿಡತೊಡಗಿದಳು. ಅವಳು ಧರಿಸಿದ್ದ ಚೂಡಿದಾರ್ ಮೇಲಿನ ವೇಲ್ ಕುತ್ತಿಗೆಯ ಎರಡೂ ಕಡೆ ಇಳಿಬಿದ್ದು ಜೋತಾಡಿತ್ತು. ಎದೆ ಎತ್ತಿ ತುಸು ಹಿಂದಕ್ಕೆ ಬಾಗಿದ್ದರಿಂದ ಅವಳ ಸ್ತನಗಳು ಮುಂದಕ್ಕೆ ಉಬ್ಬಿ ಭೂಮಿಗೌಡನ ಕಣ್ತುಂಬಿದವು. ಅವಳ ತೆಳುವಾದ ನಡು, ತುಸು ವಿಸ್ತಾರವಾದ ಜಘನ ಅವನನ್ನು ಸೆಳೆದವು. ಆ ಬೆಳದಿಂಗಳ ರಾತ್ರಿಯಲ್ಲಿ ಅವಳು ಪ್ರಕೃತಿ ದೇವತೆಯಂತೆ, ಬೆಟ್ಟತಗ್ಗುಗಳ ಭೂದೇವಿಯಂತೆ ತೋರಿದಳು. ಹೆಣ್ಣನ್ನು ಸ್ಪರ್ಶಿಸಿ ಐದು ವರ್ಷಗಳೇ ಕಳೆದಿದ್ದ ಅವನಿಗೆ, ಪ್ರಕೃತಿ ಸಹಜ ನಿಯಮದಂತೆ ಆಗ ಅವಳನ್ನು ಆಲಂಗಿಸಿ ಸ್ಪರ್ಶಿಸಬೇಕೆಂದು ಆಸೆಯಾಯಿತು. ಆಗ ಅವಳು ಅವನ ಕಣ್ಣಿಗೆ ಕೇವಲ ಒಂದು ಹೆಣ್ಣಿನಂತೆ ತೋರಿದಳು. ಅವನಿಗರಿವಿಲ್ಲದಂತೆ ಅವನ ಕೈ ಅವಳ ಸೊಂಟವನ್ನು ಬಳಸಲು ಮುಂದಾಯಿತು.

ತಕ್ಷಣವೇ ಅವನಲ್ಲಿದ್ದ ವಿಚಾರವಂತ, ಬೌದ್ಧಿಕ ಮನಸ್ಸು ಜಾಗೃತವಾಯಿತು. ಕೈ ಹಿಂದೆ ಸರಿಯಿತು. ಕ್ಷಣ ಮಾತ್ರದ ಭಾವುಕತೆಯ ಬಗ್ಗೆ ವಿಷಾದವಾಯಿತು. ಅವಳನ್ನು ನೋಡಿದ. ಸಂತೋಷ ಅವಳ ಅಂಗಾಂಗದಲ್ಲಿ ಪ್ರಕಾಶಗೊಳ್ಳುತ್ತಿತ್ತು. ಅವಳ ಸಂತೋಷವನ್ನು ಹಾಳು ಮಾಡಿಬಿಡುತ್ತಿದ್ದೆನಲ್ಲ ಎಂದು ತನ್ನ ಮನದಾಸೆಗೆ ಬೇಸರಗೊಂಡ. ಅವಳು ಬೆಳದಿಂಗಳ ರಾತ್ರಿಯಲ್ಲಿ ಅದರ ಸೊಬಗನ್ನು ಸವಿದು ಮೈಮರೆತು ಪರವಶಳಾಗಿರುವ ಮುಗ್ಧೆಯಂತೆ ತೋರಿದಳು.

ಬಹಳ ಸುಮಾರು ಹೊತ್ತು ಗಾಡಿಯಲ್ಲಿ ಕುಳಿತಿದ್ದ ಕಾರಣದಿಂದಲೊ ಅಥವಾ ಬೆಳದಿಂಗಳ, ಈ ಗಲಾಟೆಯಿಲ್ಲದ ಪ್ರಶಾಂತ ವಾತಾವರಣದ ಪ್ರಭಾವದಿಂದಲೊ ಈಜು ಕೊಳದ ಸುತ್ತಲೂ ಹಾಕಿದ್ದ ಲಾನ್ ಮೇಲೆ ಬಿದ್ದು ಒದ್ದಾಡಲಾರಂಭಿಸಿತು. ಅಂಗಾಂತ ಮಲಗಿ ತನ್ನ ನಾಲ್ಕೂ ಕಾಲುಗಳನ್ನು ಆಕಾಶದತ್ತ ನೇರವಾಗಿಸಿ, ಅದು ಆಕಾಶವನ್ನು ನೋಡತೊಡಗಿತು. ತನ್ನ ಬೆಳಂಬೆಳ್ಳನೆಯ ರೂಪದಿಂದ ಬೆಳದಿಂಗಳ ಕಿರುರೂಪದಂತೆ ಕಾಣತೊಡಗಿತು.

ಭೂಮಿಗೌಡ ನಿರುಮ್ಮಳವಾಗಿ ನಿಂತು ಒಮ್ಮೆ ಚಂದ್ರಿಕಾಳನ್ನು ಮತ್ತೊಮ್ಮೆ ಬೆಳ್ಳಿಯನ್ನು, ಮಗದೊಮ್ಮೆ ಆಕಾಶದ ಚಂದ್ರನನ್ನು ನೋಡಿದನು. ಈ ಮೂವರು ಒಂದೇ ಮೂಲದ ಬೇರೆ ಬೇರೆ ರೂಪಗಳು ಅನ್ನಿಸಿತು. ಅವನೊಂದು ಬಗೆಯ ಅವ್ಯಕ್ತ ಆನಂದದಲ್ಲಿ ಮುಳುಗಿದನು.

"ಸಾರ್.........ಸಾರ್" ಎಂಬ ದನಿ ಅವನ ಹಿಂದಿನಿಂದ ಕೇಳಿ ಬಂತು. ಅವನು ಹಿಂತಿರುಗಿ ನೋಡಿದ. "ಬರಬೇಕಂತೆ ಸಾರ್, ಕರೀತ್ತಿದ್ದಾರೆ" ಎಂದು ಹೇಳುತ್ತಿದ್ದ ರೆಸಾರ್ಟ್ ಬಾಯ್ ನಿಂತಿದ್ದ. "ನೀನು ಮುಂದೆ ನಡೆಯಪ್ಪ. ನಾವು ನಿನ್ನನ್ನು ಹಿಂಬಾಲಿಸುತ್ತೇವೆ" ಎಂದು ಚಂದ್ರಿಕಾಳನ್ನು 'ಹೊರಡೋಣ' ಅನ್ನುವಂತೆ ನೋಡಿದ. ಅವಳು ಅವನ ಸರಿಸಮನಾಗಿ ಅಂಗಕ್ಕೆ ಅಂಗಸೋಕಿಸುವಂತೆ ಅವನೊಡನೆ ಹೆಜ್ಜೆಹಾಕಿದಳು. ಲಾನ್ ಮೇಲೆ ಬಿದ್ದು ಒದ್ದಾಡುತ್ತಿದ್ದ ಬೆಳ್ಳಿ ಚೆಂಗನೆದ್ದು ಚಂದ್ರಿಕಾಳ ಕಾಲುಗಳ ಹಿಂದೆ ಸುಳಿ ಸುಳಿದು ನಡೆಯುತ್ತಿತ್ತು.

ಕಾಟೇಜ್ ಹತ್ತಿರ ಹತ್ತಿರ ವಾಗುತ್ತಿದ್ದಂತೆ ನದಿಯ ಮೃದುವಾದ ಕಲರವ ಕೇಳಿಸುತ್ತಿತ್ತು. ಕಾಟೇಜ್‌ನ ಎದುರಿಗೆ ಭೀಮಾಕಾರವಾಗಿ ಬೆಳೆದು ನಿಂತಿದ್ದ ಮರಗಳು ಗಾಳಿಗೆ ಮಂದವಾಗಿ ತೊನೆಯುತ್ತಿರುವಂತೆ ಕಂಡಿತು. ಬೆಳದಿಂಗಳು ಮರದ ಎಲೆಗಳ ಸಂದುಗೊಂದುಗಳಿಂದ ನುಸುಳಿ ನೆಲದಲ್ಲಿ ಕತ್ತಲು ಬೆಳಕಿನಾಟದ ಚಿತ್ತಾರ ಸೃಷ್ಟಿಯಾಗಿತ್ತು. ನದಿಯ ಇಕ್ಕೆಲಗಳ ಮರಗಳ ಸಾಲು ನದಿಗೊಂದು ಕತ್ತಲೆ ಬೆಳಕಿನ ಉಡುಗೆಯನ್ನು ತೊಡಿಸಿದ್ದವು.

ಕಾಟೇಜ್ ಬಾಯ್‌ನನ್ನು ಹಿಂಬಾಲಿಸಿ ನದಿಗೆ ಅಭಿಮುಖವಾಗಿದ್ದ ಸೂಪರ್ ಡಿಲಕ್ಸ್ ಕಾಟೇಜನ್ನು ತಲುಪಿದರು. ಶರಣ್ ಕಾಟೇಜ್‌ನ ಸಿಟ್‌ಔಟ್‌ನಲ್ಲಿ ಕುಳಿತ್ತಿದ್ದನು. ರೆಡ್ಡಿ ಡ್ರಾಯಿಂಗ್ ರೂಂನ ಸೋಫಾದ ಮೇಲೆ ಬೆನ್ನು ಒರಗಿಸಿ ವಿಶ್ರಾಂತಿ ಪಡೆಯುವ ಮೂಡ್‌ನಲ್ಲಿದ್ದನು. "ಮಹೇಶ ಎಲ್ಲಿ?" ಎಂದು ಚಂದ್ರಿಕಾ ಅಣ್ಣನನ್ನು ಕೇಳಿದಳು. "ಅವನು ರೂಂನಲ್ಲಿ ರೆಸ್ಟ್ ತಗೋತ್ತಿದ್ದಾನೆ" ಆಯಾಸದ ಧ್ವನಿಯಲ್ಲಿ ಅವನನ್ನು ಉತ್ತರಿಸಿದ. ಅವಳು ಅವನ ಕಿವಿಯ ಬಳಿ ಸರಿದು ಏನನ್ನೋ ಉಸುರಿದಳು. ಅವನು 'ಬಾ' ಎಂದು ಅವಳನ್ನು ಕರೆದು ಕಾಟೇಜ್‌ನ ಒಳಕ್ಕೆ ಹೋಗಿ, ಬಾತ್‌ರೂಂ ಅನ್ನು ತೋರಿದ, ಅವಳು ಬಾತ್ ರೂಂ ಪ್ರವೇಶಿಸಿ, ಒಳಗಿಂದ ಬೋಲ್ಟ್ ಹಾಕಿದಳು.

ಕನ್ನಡಿಯಲ್ಲಿ ತನ್ನ ಮುಖ ನೋಡಿಕೊಂಡಳು. ಮುಖ ಆಯಾಸದಿಂದ ಬಾಡಿರುವಂತೆ ತೋರಿತು. ಆದರೂ ಎಂದಿನಂತಲ್ಲದ ಒಂದು ಗೆಲವು, ಲವಲವಿಕೆ ಇರುವುದನ್ನು ಗುರುತಿಸಿದಳು. ತನ್ನೊಳಗೆ ನಿದ್ದೆ ಮಾಡುತ್ತಿದ್ದ ಪ್ರಜ್ಞೆ ಎಚ್ಚರಗೊಂಡಂತೆ ಅವಳಿಗೆ ಭಾಸವಾಯಿತು. ತನಗೆ ತಾನೇ ನಕ್ಕಳು. ಅವಳು ಮತ್ತೆ ತರುಣಿಯಾದಂತೆ ತೋರಿತು. ಮೃದುವಾಗಿ ರಾಗವೊಂದನ್ನು ಗುನುಗಿದಳು. ಆನಂದದಿಂದ ಪ್ರಕೃತಿ ಕರೆಯನ್ನು ನಿವಾರಿಸಿಕೊಂಡಳು.

ವ್ಯಾನಿಟಿ ಬ್ಯಾಗಿನಿಂದ ಸೋಪು ತೆಗೆದು, ವೇಲ್ ಅನ್ನು ಹಿಂದಕ್ಕೆ ಬಿಗಿದು, ತುಸು ಬಾಗಿ ಎರಡೂ ಕೈಯಿಂದ ಸಿಂಕ್‌ನ ನಲ್ಲಿಯಿಂದ ನೀರು ಮೊಗೆ ಮೊಗೆದು ಮುಖಕ್ಕೆ ಎರಚಿಕೊಂಡಳು. ನೀರು ಮುಖದಿಂದ ಇಳಿದು ಕುತ್ತಿಗೆಯನ್ನು ಬಳಸಿ ಸ್ವಲ್ಪ ಬೆನ್ನಿನ ಕಡೆಗೂ, ಸ್ವಲ್ಪ ಎದೆಯ ಕಡೆಗೂ ಹರಡಿತು. ತಂಪಾಯಿತು ಮುಖ, ಕುತ್ತಿಗೆ. ದೇಹ ಅದರ ಅನುಭವ ಪಡೆಯಿತು. ಸೋಪಿನಿಂದ ಮುಖ ತೊಳೆದು ಕೊಂಡಳು. ನ್ಯಾಪ್‌ಕಿನ್‌ನಿಂದ ಮುಖವನ್ನು ಮೃದುವಾಗಿ ಒರೆಸಿ,

ಕಣ್ಣುಗಳನ್ನು ಅರಳಿಸಿ ಕನ್ನಡಿಯಲ್ಲಿ ನೋಡಿದಳು. ಕಣ್ಣಿನ ಕೆಳೆಗೆ ಕಂಡೂ ಕಾಣದಂತೆ ಇರುವ ಕಪ್ಪು ಛಾಯೆಯನ್ನು ಅಲ್ಲಿಂದ 'ತೊಲಗು' ಅನ್ನುವಂತೆ ನ್ಯಾಪ್‌ಕಿನ್‌ನಲ್ಲಿ ಮತ್ತೊಮ್ಮೆ ಒರೆಸಿಕೊಂಡಳು. ಬ್ಯಾಗಿನಿಂದ ಪುಟ್ಟ ಪೌಡರ್ ಡಬ್ಬಿಯನ್ನು ಹೊರತೆಗೆದು, ಅದರ ಮುಚ್ಚಳವನ್ನು ತೆರೆದು, ಅಲ್ಲಿದ್ದ ಬಫ್‌ನಿಂದ ಪೌಡರನ್ನು ಅದ್ದಿಕೊಂಡು, ಮುಖಕ್ಕೆ ಅತ್ಯಂತ ತೆಳುವಾಗಿ ಪೌಡರಿನ ಲೇಪನ ಮಾಡಿಕೊಂಡಳು. ಭುಜ, ಕತ್ತು, ಕುತ್ತಿಗೆಯ ಕೆಳಭಾಗಕ್ಕೆ ಬಫ್‌ನಿಂದ ಬ್ರೆಷ್ ಮಾಡುವಂತೆ ಮೃದುವಾಗಿ ತಾಡಿಸಿದಳು. ಪೌಡರ್ ಡಬ್ಬಿಯನ್ನು ಕೆಳಗಿಟ್ಟು, ಕನ್ನಡಿಯಲ್ಲಿ ತನ್ನನ್ನು ತಾನು ನೋಡಿಕೊಂಡಳು. ಎಲ್ಲೆಲ್ಲಿ ಪೌಡರ್ ಜಾಸ್ತಿ ಎದ್ದು ಕಾಣುತ್ತಿತ್ತೋ ಅಲ್ಲಿ ಮೃದುವಾಗಿ ತನ್ನ ಬೆರಳುಗಳಿಂದ ಒರೆಸಿ, ಪೌಡರ್ ಅನ್ನು ಮತ್ತಷ್ಟು ತೆಳುಮಾಡಿದಳು. ಹಣೆಗೆ ಬೊಟ್ಟು ಅನ್ನುವಂತೆ ಸ್ಟಿಕರ್‌ವೊಂದನ್ನು ಅಂಟಿಸಿದಳು.

ಮತ್ತೆ ಆ ಎಲ್ಲ ಅಲಂಕಾರ ಸಾಧನಗಳನ್ನು ತನ್ನ ವ್ಯಾನಿಟಿ ಬ್ಯಾಗಿಗೆ ತುಂಬಿ, ಮತ್ತೊಮ್ಮೆ ತನ್ನನ್ನು ತಾನು ನೋಡಿಕೊಂಡು ಸರಿಯಾಗಿದೆ ಅಂದುಕೊಂಡು, ವೇಲ್ ಅನ್ನು ಸರಿಯಾಗಿ ಕೂರಿಸಿಕೊಂಡು ಬಾತ್ ರೂಂನಿಂದ ಹೊರ ನಡೆದಳು.

ರೆಸಾರ್ಟ್ ಬಾಯ್ ಟ್ರೇಗಳಲ್ಲಿ ಊಟವನ್ನು ಡ್ರಾಯಿಂಗ್ ರೂಂ ನ ಟೀಪಾಯಿಗಳ ಮೇಲೆ ಜೋಡಿಸುತ್ತಿದ್ದ. ನಾಲ್ಕಾರು ಬಾಟಲ್ ಮಿನರಲ್ ನೀರು. ಅದರಲ್ಲಿ ಒಂದರ ಮುಚ್ಚಳ ತೆರೆದು ಶರಣ್ ಗುಟುಕಿಸುತ್ತಿದ್ದ. ರೂಂ ನಿಂದ ಹೊರಬಂದ ಮಹೇಶ್ ಬಾತ್ ರೂಂ ಕಡೆ ಹೋದ. ರೆಡ್ಡಿ ರೆಸಾರ್ಟ್‌ಬಾಯ್‌ಗೆ 'ಎರಡು ಪ್ಲೇಟ್ ಮೊಸರನ್ನ ಬೇಗನೆ ತಾ' ಎಂದು ಹೇಳುತ್ತಿದ್ದುದು ಅವಳಿಗೆ ಕೇಳಿಸಿತು. ಅವಳು ಅಲ್ಲಿ ನಿಲ್ಲದೆ, ಸಿಟ್‌ಔಟ್‌ಗೆ ಬಂದಳು. ಭೂಮಿಗೌಡನನ್ನು ಅವಳ ಕಣ್ಣುಗಳು ತಡಕಾಡಿದವು. ನದಿ ತೀರದಿಂದ ಅವನು ನಿಧಾನವಾಗಿ ಒಂದೊಂದೆ ಮೆಟ್ಟಲನ್ನು ಹತ್ತಿ ಬರುತ್ತಿರುವುದು ಕಾಣಿಸಿತು. ಮೆಟ್ಟಲನ್ನು ಹತ್ತಿ ಬರುತ್ತಿದ್ದ ಅವನ ದೇಹ ಶಿಸ್ತು ಬದ್ಧವಾಗಿ ತೋರುತ್ತಿತ್ತು. ಮಯಸ್ಸು ಮೂವತ್ತೈದರ ಮೇಲಾಗಿದ್ದರೂ ಒಂದು ಚೂರು ಫ್ಯಾಟ್ ಇಲ್ಲ; ಸ್ಲಿಮ್ ಆಗಿದ್ದಾರೆ ಎಂದು ಅವಳ ಮನಸ್ಸು ಮೆಚ್ಚುಗೆ ಸೂಚಿಸಿತು.

ಭೂಮಿಗೌಡ ಅವಳ ಬಳಿ ಬಂದ. ಸಿಟ್‌ಔಟ್‌ನ ಕುರ್ಚಿಯ ಮೇಲೆ ಕುಳಿತು ಮಂದವಾದ ದೀಪದ ಬೆಳಕಿನಲ್ಲಿ, ಚಂದ್ರನ ಹಾಲುಬೆಳಕಿನ ಎಡೆಯಲ್ಲಿ ಅವಳ ಮುಖ ನೋಡಿದ. ತುಂಬಾ ಸುಂದರವಾಗಿ ಕಂಡಳು. ಅದನ್ನು ಅವಳಿಗೆ ಹೇಳಬೇಕೆನ್ನಿಸಿತು. ಅದರ ಬದಲಾಗಿ "ತುಂಬಾ ಫ್ರೆಷ್ ಆಗಿ ಕಾಣ್ತಿದ್ದೀರಿ" ಅಂದನು. ಅವಳು ಅವನ ಕಡೆ ಕಿರುನಗೆ ಬೀರಿದಳು.

ಶರಣ್ ಹೊರಗೆ ಬಂದು "ಊಟ ರೆಡಿಯಿದೆ. ಬನ್ನಿ" ಎಂದು ಅವರಿಬ್ಬರನ್ನು ಕರೆದನು. ಚಂದ್ರಿಕಾಳ ಕಾಲ ಬುಡದಲ್ಲೇ ಕುಳಿತಿದ್ದ ಬೆಳ್ಳಿ ಅವಳನ್ನು ನೋಡಿ ಕುಯ್ ಕುಯ್ ಎಂದಿತು.

## ಅಧ್ಯಾಯ : ಹದಿನೈದು

ಚಂದ್ರಿಕಾ ಅಣ್ಣನ ಮುಖವನ್ನು ನೋಡುತ್ತಾ "ಮೊದಲು ಬೆಳ್ಳಿಗೆ ಊಟ ಹಾಕೋಣ. ಅದಕ್ಕೆ ಆಗಲೇ ನಾನ್‌ವೆಜ್ ವಾಸನೆ ಹೊಡೆದಿದೆ. ಆಮೇಲೆ ಅದೇ ಬೇಕು ಅಂತ ಹಠ ಹಿಡಿಯುತ್ತೆ" ಎಂದವಳು, ಲಗ್ಗೇಜನ್ನು ಇಟ್ಟಿದ್ದ ಜಾಗಕ್ಕೆ ಹೊಗಿ ತನ್ನ ಬ್ಯಾಗನ ಜಿಪ್ ಅನ್ನು ತೆರೆದು ಹಾಲಿನ ಬಾಟಲ್‌ನ್ನು ತೆಗೆದುಕೊಂಡಳು. ಇನ್ನು ಅರ್ಧ ಭಾಗ ಉಳಿದತ್ತು. ಊಟವನ್ನು ಜೋಡಿಸಿದ್ದ ಟೀಪಾಯಿ ಬಳಿಗೆ ಬಂದು ರೆಸಾರ್ಟ್ ಬಾಯ್ ಅನ್ನು "ಇಲ್ಲಿ ಬಿಳಿ ಅನ್ನ ಯಾವುದರಲ್ಲಿದೆ ?" ಎಂದು ವಿಚಾರಿಸಿದಳು. ಅವನು ಒಂದು ಪಾತ್ರೆಯ ಮುಚ್ಚಳ ತೆರೆದು ತೋರಿದ. ಬಿಸಿ ಅನ್ನ ಹೊಗೆಯಾಡುತ್ತಿತ್ತು. ಒಂದು ಟೇಬಲ್ ಚಮಚದಷ್ಟು ಅನ್ನವನ್ನು ಪಿಂಗಾಣಿ ಪ್ಲೇಟಿಗೆ ಹಾಕಿಕೊಂಡು ಸಿಟ್‌ಔಟ್‌ಗೆ ಬಂದಳು. ಬಿಸಿ ಅನ್ನಕ್ಕೆ ಹಾಲನ್ನು ಬಗ್ಗಿಸಿ, ಚಮಚದಿಂದ ಕಲಸಿದಳು. ಒಂದೇ ದೃಷ್ಟಿಯಿಂದ ಬೆಳ್ಳಿ ನೋಡುತ್ತಿತ್ತು. ಅನ್ನ ಇನ್ನೂ ಬಿಸಿಯಾಗಿದೆಯೇ ಎಂದು ಪ್ಲೇಟಿನ ತಳವನ್ನು ಮುಟ್ಟಿ, ಅನ್ನವನ್ನೂ ಬಾಯಿ ಹತ್ತರ ತಂದು 'ಉಸ್ ಉಸ್' ಎಂದು ಉರಿಬಿದಳು. ಗೋಡೆಯ ಒಂದು ಮಗ್ಗುಲಿಗೆ ತಟ್ಟೆಯನ್ನು ಇಟ್ಟಳು. ಬೆಳ್ಳಿ ಅನ್ನವನ್ನು ತಿನ್ನುವ ಮೊದಲು ಸ್ವಲ್ಪ ಹಾಲನ್ನು ತನ್ನ ತೆಳುವಾದ ನಾಲಿಗೆಯಿಂದ ಚಪ್ಪರಿಸಿತು. ಅನಂತರ ನಿಧನವಾಗಿ ಊಟ ಮಾಡತೊಡಗಿತು.

ಭೂಮಿಗೌಡ ತಾನು ಕೂತ ಕಡೆಯಿಂದ ಚಂದ್ರಿಕಾ ಬೆಳ್ಳಿಯನ್ನು ಉಪಚರಿಸುತ್ತಿರುವುದನ್ನು ತದೇಕ ಚಿತ್ತದಿಂದ ನೋಡುತ್ತಿದ್ದ.

ಶರಣ್ ಮತ್ತೆ ಹೊರಬಂದವನೆ "ಬನ್ನಿ ಪ್ರೊಫೆಸರ್, ಊಟ ತಣ್ಣಗಾಗುತ್ತದೆ. ಮಾಡಿ, ಮೈಸೂರಿಗೆ ಹೊರಟು ಬಿಡೋಣ. ಬಾ ಚಂದ್ರಿಕಾ" ಎಂದು ಕರೆದನು. ಭೂಮಿಗೌಡ ಅವನ್ನನು ಹಿಂಬಾಲಿಸಿದ. ಚಂದ್ರಿಕಾ ನೇರವಾಗಿ ಬಾತ್ ರೂಂಗೆ ಹೋಗಿ ಕೈತೊಳೆದು ಡ್ರಾಯಿಂಗ್ ರೂಂಗೆ ಬಂದಳು. ಎರಡು ಟೀಪಾಯ್‌ಗಳ ಎರಡೂ ಕಡೆ ಎರಡು ಸೋಫಾಗಳು. ಅವುಗಳ ತಲೆ ಭಾಗಕ್ಕೆ ಒಂದು ಸಿಂಗಲ್ ಸೋಫಾ. ಸಹಜವೆಂಬಂತೆ ಸಿಂಗಲ್ ಸೋಫಾದ ಮೇಲೆ ರೆಡ್ಡಿ ಕುಳಿತ್ತಿದ್ದ. ಅವನ ಬಲಭಾಗಕ್ಕೆ ಮಹೇಶ ಮತ್ತು ಶರಣ್ ಕುಳಿತರು. ಅವರ ಎದುರಿನ ಸೋಫಾದಲ್ಲಿ ರೆಡ್ಡಿಯ ಕಡೆಗಾದಂತೆ ಭೂಮಿಗೌಡ ಕುಳಿತ. ಬಾತ್ ರೂಂನಿಂದ ಬಂದ ಚಂದ್ರಿಕಾ ಕರ್ಚೀಪಿನಿಂದ ಕೈ ಒರೆಸಿಕೊಳ್ಳುತ್ತಾ ಅವನ ಎಡಭಾಗಕ್ಕೆ ಕುಳಿತಳು.

ರೆಸಾರ್ಟ್ ಬಾಯ್ ಅಗಲವಾದ ಪಿಂಗಾಣಿ ತಟ್ಟೆಗಳನ್ನು ಎಲ್ಲರ ಮುಂದೆ ಇಟ್ಟ, ಅವುಗಳ ಪಕ್ಕ ಗಾಜಿನ ಲೋಟಗಳನ್ನಿಟ್ಟು, ಅವುಗಳಿಗೆ ಮಿನರಲ್ ವಾಟರ್ ತುಂಬಿದ. ನಾಲ್ಕಾರು ತಾಮ್ರದ ಪಾತ್ರೆಗಳನ್ನು ಅವನು ಓರಣವಾಗಿ ಜೋಡಿಸಿದ್ದ, ಒಂದರ ಮುಚ್ಚಳ ತೆರೆದು ಎಲ್ಲರಿಗೂ ಒಂದೊಂದು ಬಟರ್‌ನಾನ್ ಬಡಿಸುತ್ತಾ ಬಂದ. ಚಂದ್ರಿಕಾ ಅವನ ಕೈಯನ್ನೇ ನೋಡುತ್ತಾ

"ನನಗೆ ಬೇಡ" ಎಂದಳು. ರೆಡ್ಡಿ "ಏಕೆ ಸಿಸ್ಟರ್, ತೆಗೆದುಕೊಳ್ಳಿ. ಅದಕ್ಕೆ ಗ್ರೀನ್‌ಪೀಸ್ ಕರಿ ಇದೆ." ಎಂದ. ಅದಕ್ಕೆ ಅವಳು "ಲೇಟಾಯ್ತು ರೆಡ್ಡಿಯವರೆ, ನನಗೆ ಸ್ವಲ್ಪ ಮೊಸರನ್ನ ಸಾಕು" ಎಂದಳು.

ಬಾಯ್ ಅವರ ತಟ್ಟೆಗಳಿಗೆ ಮತ್ತೊಂದು ತಾಮ್ರದ ಪಾತ್ರೆಯಿಂದ ಬಟರ್ ಚಿಕನ್ ಗ್ರೇವಿಯನ್ನು ಬಡಿಸಿದ. ಆಗ ಶರಣ್ ಅವನನ್ನು ತಡೆದು "ನನಗೆ ನಾನ್ ವೆಜ್ ಬೇಡ. ಗ್ರೀನ್ ಪೀಸ್ ಕರಿ ಹಾಕು" ಎಂದನು.

"ಏಕೆ ಶರಣ್ ಅವರೆ, ಸಿಸ್ಟರ್ ಇದ್ದಾರೆ ಅಂತ ಸಂಕೋಚವೇ ? ನಿಮಗೆ ಇಷ್ಟವಾದ ಚಿಕನ್ ಫ್ರೈ, ಮೊಗಲ್ ಬಾದಷಾ, ಬೋನ್‌ಲೆಸ್ ಫಿಶ್, ಮಟನ್ ಬಿರಿಯಾನಿ- ಎಲ್ಲಾ ಇದೆ. ತಕೊಳ್ಳಿ "ಎಂದು ಒತ್ತಾಯಿಸಿದನು ರೆಡ್ಡಿ.

"ಚಂದ್ರಿಕಾ ಇದ್ದಾಳೆ ಅಂತಾ ಅಲ್ಲ. ಅವಳಿಗೆ ನಾನು ನಾನ್‌ವೆಜ್ ತೆಗೆದು ಕೊಳ್ಳುವುದು ಗೊತ್ತು. ಇವತ್ತು ಸೋಮವಾರ, ಜೊತೆಗೆ ಹುಣ್ಣಿಮೆ ಅಮವಾಸ್ಯೆಗಳಂದು ನಾನ್‌ವೆಜ್ ತಿನ್ನುವುದಿಲ್ಲ-" ಎಂದನು.

ರೆಡ್ಡಿ ಅವನನ್ನು ನೋಡಿ ಸ್ವಲ್ಪ ಜೋರಾಗಿಯೇ ನಕ್ಕ. "ದನ ತಿನ್ನೋನ್ಗೆ ಗೊಬ್ಬರದಾಣೆ ಅಂತಾರಲ್ಲ ಹಾಗೆ ನಿಮ್ಮ ನೀತಿ. ತಿನ್ನೋದೆ ಉಂಟಂತೆ, ಅದಕ್ಕೆ ವಾರ ಒಪ್ಪತ್ತು ಬೇರೆ ? ಅದಿರಲಿ..........ಡ್ರಿಂಕ್ಸ್ ತೆಗೆದು ಕೊಳ್ತಿರೋ ಇಲ್ಲವೋ ಅದಕ್ಕೂ ಏನಾದರು ವ್ರತ ಇದೆಯೋ?" ಎಂದು ಪ್ರಶ್ನಿಸಿದ.

"ಅದಕ್ಕೆ ಅಂತ ಬಿಗಿಯಾದ ಕಟ್ಟಿಲ್ಲ. ಆದರೆ ಇವತ್ತು ಬೇಡ. ಮನೆಗೆ ಹೋಗಬೇಕು. ಜೊತೆಗೆ ಚಂದ್ರಿಕಾ ಬೇರೆ........" ಎಂದು ಅವಳತ್ತ ಯಾಚಿಸುವಂತೆ ನೋಡಿದ.

ಚಂದ್ರಿಕಾಳಿಗೆ ಅವಳಣ್ಣ ನಾನ್ ವೆಜ್, ಡ್ರಿಂಕ್ಸ್ ತಕೋಳ್ತಾನೆ ಅಂತಗೊತ್ತಿತ್ತು. ಒಂದೆರಡು ಬಾರಿ ಅವಳ ಅತ್ತಿಗೆ ಈ ಬಗ್ಗೆ ದುಃಖ ತೋಡಿ ಕೊಂಡಿದ್ದಳು. ಅವಳು ಪ್ರಶ್ನೆ ಮಾಡಿದರೆ 'ಇವೆಲ್ಲಾ ಆರ್ಡರ್ ಆಫ್‌ದ ಡೇ. ವ್ಯವಹಾರ-ಫ್ರೆಂಡ್ಸ್ ಕುದುರೋದೆ ಅಂತಾ ಕಡೆ. ಎಲ್ಲರ ತರಹ ಇಲ್ಲದೆ ಹೋದರೆ ಗುಗ್ಗುಗಳು ಅಂತಾರೆ' ಅಂತ ಅತ್ತಿಗೆಯ ಬಾಯ್ಮುಚ್ಚಿಸಿದನಂತೆ. 'ನಿನ್ನ ಮನೆಯದೇನು ? ನನ್ನ ಮನೆಯ ದೋಸೇನೂ ತೂತೇ' ಅಂತ ಚಂದ್ರಿಕಾಳಿಗೆ ಹೇಳಬೇಕಿನ್ನಿಸಿತು.

ಅವಳು "ನಾನು ಇಲ್ಲಿ ಕುಳಿತರೆ ನಿಮಗೆ ಮುಜುಗರವಾಗುತ್ತದೆ. ನಾನು ಸಿಟ್‌ಔಟ್‌ನಲ್ಲಿ ಕೂರುತ್ತೇನೆ. ನೀವು ನಿಮ್ಮ ಪಾಡಿಗೆ ನೀವು ಊಟಮಾಡಿ" ಎಂಎದು ರೆಸಾರ್ಟ್ ಬಾಯ್‌ಗೆ ಮೊಸರನ್ನ ಹಾಕುವಂತೆ ಸೂಚಿಸಿದಳು. ಅವಳ ವರ್ತನೆ ಸಹಜವಾಗಿತ್ತು. ಯಾರ ಮೇಲೂ ಅವಳಿಗೆ ಅಸಹನೆ ಇದ್ದಂತೆ ತೋರಲಿಲ್ಲ. ರೆಸಾರ್ಟ್‌ಬಾಯ್ ಅವಳ ತಟ್ಟೆಗೆ ಎರಡು ಟೇಬಲ್ ಸ್ಪೂನ್ ಮೊಸರನ್ನ ಬಡಿಸಿದ. ಒಂದು ಕೈಯಲ್ಲಿ ಮೊಸರನ್ನ, ಮತ್ತೊಂದು ಕೈಯಲ್ಲಿ ನೀರಿನ ಲೋಟ ಹಿಡಿದ ಚಂದ್ರಿಕಾ ಸಿಟ್‌ಔಟ್‌ನಲ್ಲಿ ಬಂದು ಕುಳಿತಳು. ಅವಳಿಗೆ ಒಳಗಿನ ವಾತಾವರಣಕ್ಕಿಂತ ಹೊರಗೆ ತುಂಬಾ ಹಿತಕರವಾಗಿತ್ತು.

ರೆಡ್ಡಿ, ಮಹೇಶ್ ಮತ್ತು ಶರಣ್ ಕಡೆ ನೋಡಿ ನಕ್ಕರು. ರೆಸಾರ್ಟ್ ಬಾಯ್‌ಗೆ ಕಣ್ಣಿನಿಂದಲೇ ಸನ್ನೆ ಮಾಡಿದ. ಇಂಥ ಹತ್ತಾರು ಸನ್ನೆಗಳನ್ನು ಅರ್ಥಮಾಡಿಕೊಂಡು ಜೀರ್ಣಿಸಿಕೊಂಡಿದ್ದ ಹುಡುಗ ಬೆಡ್‌ರೂಂನಲ್ಲಿಟ್ಟಿದ್ದ ಸ್ಕಾಚ್ ವಿಸ್ಕಿ ಬಾಟಲನ್ನು ತಂದ. ಶರಣ್, ಮಹೇಶ್ ಮತ್ತು ರೆಡ್ಡಿ ಗಾಜಿನ ಲೋಟಕ್ಕೆ ಒಂದೊಂದು ಲಾರ್ಜ್ ಸುರಿದು ಇಟ್ಟ. ಭೂಮಿಗೌಡನ ಮುಂದೆ ಲೋಟ ತಂದು ಇಟ್ಟು, ವಿಸ್ಕಿಯನ್ನು ಹಾಕಲು ಯತ್ನಿಸಿದಾಗ ಅವನು ಕೈ ಅಡ್ಡ ಹಿಡಿದು "ಬೇಡ, ಬೇಡ, ನಾನು ಡ್ರಿಂಕ್ಸ್ ತೆಗೆದುಕೊಳ್ಳೋಲ್ಲ" ಎಂದ.

ಮೂರು ಜನರೂ ಆಶ್ಚರ್ಯದಿಂದ ತಲೆ ಎತ್ತಿ ಅವನತ್ತ ನೋಡಿದರು. ರೆಡ್ಡಿ "ಏನ್ ಸಾರ್, ನಿಮಗೂ ಏನಾದರೂ ವ್ರತಗಿತ ಇದೆಯೋ" ಎಂದ. ಅವನ ಮಾತಿನಲ್ಲಿದ್ದ ಕುಹಕವನ್ನು ಭೂಮಿಗೌಡ ಗುರುತಿಸಿದ. ಅವನು ಅದನ್ನು ತೋರಗೊಡದೆ "ಇಲ್ಲ ರೆಡ್ಡಿಯವರೆ, ನನಗೆ ಅವುಗಳಲ್ಲಿ ನಂಬಿಕೆ ಇಲ್ಲ. ವ್ರತ, ದೇವರು, ಆಚಾರ, ಹಬ್ಬ, ಹುಣ್ಣಿಮೆ ಅಂತ ನಾನು ಎಂದೂ ತಲೆ ಕೆಡಿಸಿಕೊಂಡಿಲ್ಲ. ಈ ದಿನ ಇದನ್ನು ತಿನ್ನಬಾರದು, ಆದಿನ ಅದನ್ನು ತಿನ್ನಬಹುದು ಎಂಬುದೂ ಇಲ್ಲ. ತಿನ್ನುವುದು, ಕುಡಿಯುವುದು ಅವರವರ ಅಭ್ಯಾಸದ ಕ್ರಮ. ಅವರವರಿಗೆ ಏನು ಇಷ್ಟವೋ ಅದನ್ನು ಅವರು ತಿನ್ನುತ್ತಾರೆ. ಅಸ್ಸಾಂ ನಲ್ಲಿ ನಾಯಿ ತಿಂತಾರೆ. ಅದು ಅವರಿಗಿಷ್ಟ. ನಾವು ತಿನ್ನೋಲ್ಲಾಂತ ಅವರನ್ನು ಬಯ್ಯುವುದು ತಪ್ಪಾಗುತ್ತದೆ. ನಾನು ನಿಮ್ಮ ಗುಂಪಿನಲ್ಲೊಬ್ಬ ಆಡ್‌ಮನ್ ! ನಿಮಗೆ ಸಂಕೋಚ ಬೇಡ. ನೀವು ತೆಗೆದು ಕೊಳ್ಳಿ. ನಾನು ಹೊರಗೆ ಒಬ್ಬರೆ ಕುಳಿತಿರುವ ಚಂದ್ರಿಕಾ ಅವರಿಗೆ ಕಂಪನಿ ಕೊಡುತ್ತೇನೆ" ಎಂದವನೆ, ಒಂದು ತಟ್ಟೆಗೆ ಒಂದಷ್ಟು ಮೊಸರನ್ನ ಹಾಕುವಂತೆ ಹುಡುಗನಿಗೆ ಹೇಳಿದನು. ಹುಡುಗ ಮೊಸರನ್ನದ ತಟ್ಟೆಯನ್ನು ಸಿಟ್ ಔಟ್‌ಗೆ ತಂದು ಚಂದ್ರಿಕಾಳ ಎದುರಿನ ಟೀಪಾಯ್ ಮೇಲಿಟ್ಟ. ಅವನ ಹಿಂದೆಯೇ ಬಟರ್ ನಾನ್ ಇದ್ದ ತಟ್ಟೆಯನ್ನು ಕೈಯಲ್ಲಿಡಿದು ಗೌಡ ಅವಳ ಪಕ್ಕ ಬಂದು ಕುಳಿತ. ರೆಸಾರ್ಟ್ ಬಾಯ್‌ಗೆ ಒಂದು ಮಿನರಲ್ ವಾಟರ್ ಬಾಟಲ್ ತಂದಿಡುವಂತೆ ಸೂಚಿಸಿದ.

ಹುಡುಗ ನೀರನ್ನು ತಂದಿಡುತ್ತಾ "ಸಾರಂ ತಮಗೆ ನಾನ್‌ವೆಜ್ ?" ಎಂದು ಕೇಳಿದ. ಭೂಮಿಗೌಡ ಚಂದ್ರಿಕಾಳ ಮುಖವನ್ನು ನೋಡಿದ. ಅವಳು "ನೀವು ತೆಗೆದುಕೊಳ್ಳಿ. ನನ್ನಿಂದಾಗಿ ನೀವು ಬಿಡುವುದು ಬೇಡ" ಎಂದಳು. ಅವಳ ಮಾತಿನಲ್ಲಿ ಸಹಜತೆಯನ್ನು ಗುರುತಿಸಿದ ಅವನು "ನನಗೆ ಬಿರಿಯಾನಿ ಬೇಡ. ಒಂದೆರಡು ಪೀಸ್ ಚಿಕನ್ ಸಾಕು" ಎಂದನು.

ಅವನು ಒಳ ಹೋದವನು ಒಂದು ಪ್ಲೇಟ್‌ನಲ್ಲಿ ಐದಾರು ಪೀಸ್ ಚಿಕನ್ ಹಾಕಿಕೊಂಡು ತಂದಿಟ್ಟ. ಅವನು ಬಟರ್ ನಾನ್ ಅನ್ನು ತಿನ್ನುತ್ತಾ "ಚಂದ್ರಿಕಾ ನೀವು ತಿನ್ನುವುದಿಲ್ಲವೆ ?" ಎಂದು ಕೇಳಿದ.

ಅವಳು ನಗುತ್ತಾ "ನಾವು ವೀರಶೈವರು. ಶುದ್ಧ ಸಸ್ಯಾಹಾರಿಗಳು. ಆದರೆ ನಿಮಗೂ ಗೊತ್ತು, ನಮಗೂ ಗೊತ್ತು. ಮುಕ್ಕಾಲುವಾಸಿ ನಮ್ಮ ಜಾತಿಯ ಗಂಡಸರು ಕುಡಿಯೋದು ತಿನ್ನೋದು ಮಾಡ್ತಾರೆ. ನಮ್ಮ ಪುಣ್ಯಕ್ಕೆ ಅವರು ಮನೆಯಲ್ಲಿ ಅದನ್ನೆಲ್ಲಾ ಮಾಡೋಲ್ಲ. ಹೊರಗೆ ಮಾಡ್ಕೊಂಡು ಬರುತ್ತಾರೆ. ನಮಗೆ ಇದೆಲ್ಲಾ ಅಭ್ಯಾಸವಾಗಿ ಹೋಗಿದೆ-" ಎಂದು ಹೇಳಿ ಗಂಭೀರಳಾದಳು. ಅವಳ ತಲೆಯಲ್ಲಿ ನೆನಪುಗಳು ಸುಳಿದಾಡಿದವು.

ಅವನು "ನಿಮ್ಮ ತಂದೆ ಏನು ಮಾಡ್ತಾರೆ ? ಮೈಸೂರಿನಲ್ಲಿ ಎಲ್ಲಿ ಮನೆ ?" ಕೇಳಿದ.

ಅವಳು ಆ ಪ್ರಶ್ನೆಯಿಂದ ಉತ್ಸುಕಳಾದಂತೆ ತೋರಿದಳು. ಅವಳ ತವರು ಅವಳ ಮಧುರ ನೆನಪು. ತನ್ನ ಮದುವೆಯ ವಿಷಯವೊಂದಕ್ಕೆ ಬಿಟ್ಟರೆ, ಅಪ್ಪ ಅಮ್ಮ ತನಗೆ ಏನೂ ಕೊರತೆಮಾಡಲಿಲ್ಲ. ಮದುವೆಯ ವಿಷಯದಲ್ಲೂ ಅವರದು ತಪ್ಪು ಅನ್ನೊಹಂಗಿಲ್ಲ. ಒಳ್ಳೆಯ ಅಧಿಕಾರಿಗೆ, ಸಿರಿವಂತನಿಗೆ ಕೊಟ್ಟರೆ ಸುಖವಾಗಿರ್ತಾಳೆ ಎಂಬ ಅವರ ಸಾಂಪ್ರದಾಯಿಕ ಮನಸ್ಸು ಹಾಗೆ ಮಾಡಿತ್ತು.

ಅವಳು ಮೊಸರನ್ನವನ್ನು ಚಮಚದಿಂದ ಬಾಯಿಗೆ ಹಾಕಿಕೊಂಡು "ನಮ್ಮ ತಂದೆ ಜಿಲ್ಲಾ ಲೇಬರ್ ಆಫೀಸರ್ ಆಗಿದ್ದರು. ಈಗ ನಿವೃತ್ತರಾಗಿದ್ದಾರೆ. ನಾನು, ನಮ್ಮಣ್ಣ ನಾವಿಬ್ಬರೇ ಮಕ್ಕಳು. ಜಯಲಕ್ಷ್ಮೀಪುರಂನಲ್ಲಿ ಮನೆ ಇದೆ. ಅವರು ಮೂಲತಃ ದಾವಣಗೆರೆ ಕಡೆಯವರಂತೆ. ಚನ್ನಬಸವಪ್ಪ ಅಂತ ಅವರ ಹೆಸರು. ಅವರ ತಂದೆ ಹೆಸರು ಗುರುಬಸವಪ್ಪ ಅಂತ - ಅಂದರೆ ನಮ್ಮ ತಾತ. ನಾನು ನೋಡಿಲ್ಲ ಅವರನ್ನ. ನಮ್ಮ ತಾತನ ಹೆಸರನ್ನೇ ನಮ್ಮಣ್ಣನಿಗೆ ಇಟ್ಟಿರುವುದು. ನಮ್ಮಣ್ಣನ ಪೂರ್ಣ ಹೆಸರು ಗುರುಬಸವಪ್ಪ ಶರಣಬಸವಪ್ಪ ಅಂತ" ಎಂದು ಹೇಳಿ, ತುಟಿಯಂಚಿನಲ್ಲಿ ಕಿರುನಗೆ ಸೂಸುತ್ತಾ "ಇವನು ದೊಡ್ಡವನಾದ ಮೇಲೆ ಬಹುಶಃ ಯುವರಾಜ ಕಾಲೇಜಿನಲ್ಲಿ ಓದುತ್ತಿದ್ದಾಗ ಇರಬಹುದು- ಇಷ್ಟು ದೊಡ್ಡ ಹೆಸರು ಯಾರು ಇಟ್ಕೋತಾರೆ ? ಜೊತೆಗೆ ಹಳೆಯ ಹೆಸರು ಬೇರೆ ? ಎಂದು 'ಶರಣ್' ಎಂದು ನೋಟರಿ ಮೂಲಕ ಹೆಸರು ಬದಲಿಸಿಕೊಂಡ" ಎಂದಳು.

ಭೂಮಿಗೌಡ ಅವಳನ್ನು ಕೆಣಕುವನಂತೆ "ನಿಮ್ಮ ಹೆಸರು ಬದಲಾಗಿಲ್ಲ ತಾನೆ ?" ಎಂದ.

ಅವಳು ಹುಸಿ ಕೋಪ ತೋರಿ ಕಣ್ಣರಳಿಸಿ "ನನ್ನ ಹೆಸರು ಅಪ್ಪ ಅಮ್ಮ ಇಟ್ಟ ಹೆಸರು!" ಎಂದಳು.

ಬೆಳ್ಳಿ ಅವನ ಮುಂದೆ ಕುಳಿತು ಅವನನ್ನು ಆಸೆ ಕಣ್ಣುಗಳಿಂದ ನೋಡುತ್ತಿತ್ತು. ಅವನ ದೃಷ್ಟಿ ಅದರ ಕಡೆ ಹೋದಾಗಲೆಲ್ಲಾ ಅದು ಒಮ್ಮೆ 'ಕುಯ್' ಎಂದು ಮೆಲ್ಲಗೆ ಸದ್ದು ಮಾಡಿ, ಬಾಲ ಅಲ್ಲಾಡಿಸುತ್ತಿತ್ತು. ಅವನಿಗೆ ಅದರ ಆಸೆ ಏನೆಂದು ಗೊತ್ತಾಯಿತು. ಅವನು ಚಂದ್ರಿಕಾಳ ಗಮನವನ್ನು ಬೆಳ್ಳಿಯ ಕಡೆ ಸೆಳೆದು, "ಅದಕ್ಕೆ ಚಿಕನ್ ಬೇಕಂತೆ, ಕೊಡಲೇ ?" ಎಂದು ಕೇಳಿದ.

ಅವಳು ತನ್ನ ಬಲಗಾಲಿನಿಂದ ಅದನ್ನು ಮೃದುವಾಗಿ ಸ್ಪರ್ಶಿಸಿ, "ಅಹಾ, ಆಸೆ ನೋಡು ಮುಂಡೇದಕ್ಕೆ ! ವಾಸನೆ ರಕ್ತದಲ್ಲೇ ಬಂದಿರುತ್ತೆ ಅಂತ ತೋರುತ್ತೆ" ಎಂದು ರೇಗಿದಳು.

ಅವನು "ಅದಕ್ಕೆ ನಿಮ್ಮ ಮನೆಯಲ್ಲಿ ಸಿಗೋಲ್ಲ. ನಿಮ್ಮ ಹಾಗೆ ಅದು ಕೂಡ ಪ್ಯೂರ್ ವೆಜ್ ತಿಂದು ಬೆಳೆದಿರಬೇಕು ?"ಎಂದು ಕೇಳಿದ.

"ಹೌದು, ನಾನ್‌ವೆಜ್ ಅಭ್ಯಾಸ ಮಾಡ್ಸಿಲ್ಲ. ಆದರೆ ವಾರಕ್ಕೊಮ್ಮೆ ಅದಕ್ಕೆ ಮೊಟ್ಟೆ ಕೊಡುತ್ತೇನೆ. ಅದೂ ಕಾಲು ಭಾಗ ಮಾತ್ರ" ಎಂದಳು ಚಂದ್ರಿಕಾ.

ಅವನು ಅವಳನ್ನು ಕೆಣಕುವ ಧ್ವನಿಯಲ್ಲಿ "ಓಹೋ, ಹಾಗ ? ಹಾಗಾದರೆ ಇನ್ನುಳಿದ ಮುಕ್ಕಾಲು ಏನಾಗುತ್ತೆ ? ಬೆಳ್ಳಿಯ ಮಾಲ್ಕಿನ್ ಏನಾದರೂ ........ ?" ಎಂದನು.

ಅವಳು ಹುಸಿಕೋಪ ಪ್ರದರ್ಶಿಸಿ, ಎಡಗೈಯಿಂದ ಅವನ ಭುಜದ ಮೇಲೆ ಏಟೊಂದನ್ನು ಕೊಟ್ಟು "ಒಮ್ಮೊಮ್ಮೆ ಅದೂ ಆಗುತ್ತದೆ. ಚಿಕ್ಕಂದಿನಿಂದ ಆಮ್ಲೆಟ್ ಮಾಡಿ ತಿಂದು ಅಭ್ಯಾಸವಿದೆ. ನಾವು ಹೈಸ್ಕೂಲು ಓದುವಾಗ ನಾನು ಶರಣ್ ನಮ್ಮ ಹಿತ್ತಲಲ್ಲಿ ಸೀಮೆಎಣ್ಣೆ ಸ್ಟೌವ್ ಇಟ್ಟುಕೊಂಡು ಆಗಾಗ್ಗೆ ಆಮ್ಲೆಟ್ ಮಾಡಿ ತಿನ್ನುತ್ತಿದ್ದೆವು. ಅಮ್ಮನಿಗೆ ಗೊತ್ತಾದರೆ ಬಯ್ತಾಳೆ ಅಂತ ಅವಳು ಮನೆಯಲ್ಲಿ ಇಲ್ಲದಾಗ ಈ ಆಟ ನಡೆಯುತ್ತಿತ್ತು. ಒಂದು ದಿನ ಅಮ್ಮನಿಗೆ ಗೊತ್ತಾಗಿ ಬಯ್ದಳು. ರಾತ್ರಿ ಅಪ್ಪ ಬಂದಾಗ ಹೇಳುತ್ತೇನೆಂದಳು. ನಾವು ತುಂಬಾ ಹೆದರಿದ್ದೆವು. ರಾತ್ರಿ ಅಪ್ಪನಿಗೆ ನಮ್ಮ ಆಮ್ಲೆಟ್ ಪ್ರತಾಪವನ್ನು ವಿವರಿಸಿದಳು. ಅಪ್ಪ ಏನನ್ನು ಅನ್ನಲಿಲ್ಲ. ನಮ್ಮನ್ನು ಬಯ್ಯಲೂ ಇಲ್ಲ. ಅದರ ಬದಲು 'ಅವರಿಗೆ ದಿನಾ ಬಿಟ್ಟು ದಿನಾ ಮೊಟ್ಟೆ ಬೇಯಿಸಿ ಕೊಡು' ಅಂದು ಬಿಡುವುದೆ ? ಅಮ್ಮ ಬೇಯಿಸಿಕೊಡಲಿಲ್ಲ. ಅಡುಗೆ ಮನೆಗೆ ಮೊಟ್ಟೆ ತರಲು ಅವಳು ಸಿದ್ಧಳಿರಲಿಲ್ಲ. ಆದರೆ ನಾವು ಮಾತ್ರ ರಾಜಾರೋಷವಾಗಿ ಮೊಟ್ಟೆ ತಿನ್ನ ತೊಡಗಿದೆವು"ಎಂದಳು.

ರಾತ್ರಿ ಹನ್ನೆರಡರ ಮೇಲಾಗಿತ್ತು. ಚಂದ್ರನ ಬೆಳಕು ಎಲ್ಲೆಲ್ಲು ತುಂಬಿಕೊಂಡಿತ್ತು.

ಭೂಮಿಗೌಡ ತಟ್ಟೆಯಿಂದ ಚಿಕನ್ ಪೀಸ್ ಒಂದನ್ನು ತೆಗೆದು ಅದನ್ನು ನೀರಿನಿಂದ ಚೆನ್ನಾಗಿ ತೊಳೆದು ಬೆಳ್ಳಿಗೆ ಕೊಟ್ಟ. ಕುಳಿತಿದ್ದ ಬೆಳ್ಳಿ ದಡಕ್ಕನೆ ಮೇಲೆದ್ದು, ಅವನ ಕೈಯಿಂದ ಅದನ್ನು ಮೃದುವಾಗಿ ತೆಗೆದುಕೊಂಡು, ತನ್ನ ಮುಂಗಾಲುಗಳನ್ನು ನಿಡಿದಾಗಿ ನೀಡಿ, ಅದರ ನಡುವೆ ಚಿಕನ್‌ಪೀಸ್ ಅನ್ನು ಇಟ್ಟುಕೊಂಡು ನಿಧಾನವಾಗಿ ತಿನ್ನುತ್ತಾ ಆನಂದ ಪಡುತ್ತಿತ್ತು. ಚಂದ್ರಿಕಾ ಅದನ್ನೊಮ್ಮೆ ಭೂಮಿಗೌಡನನ್ನೊಮ್ಮೆ ನೋಡಿದಳು.

ಅಷ್ಟರಲ್ಲಿ ಒಳಗಿನಿಂದ ರೆಡ್ಡಿಯ ಮಾತು ಗಟ್ಟಿಯಾಗಿ ಕೇಳಿಬಂತು. ಅವನು ರೆಸಾರ್ಟ್‌ಬಾಯ್ ಅನ್ನು "ನೀನು ಹೋಗು, ಬೇಕಾದರೆ ನಿನ್ನನ್ನು ಕರೆಯುತ್ತೇನೆ" ಎಂದು ಹೇಳುತ್ತಿದ್ದ. ರೆಸಾರ್ಟ್‌ಬಾಯ್ ಇವರಿಬ್ಬರ ಮುಂದಿನಿಂದ ಹಾಯ್ದು ಹೊರ ನಡೆದ.

ಡ್ರಾಯಿಂಗ್ ರೂಂನಲ್ಲಿ ಕುಳಿತ ಮೂವರ ನಡುವೆ ಗಂಭೀರ ಸ್ಥಿತಿ ಮೂಡಿತ್ತು. ಮಾಂಸದ ತುಂಡುಗಳನ್ನು ಅರ್ಧಬರ್ಧ ತಿಂದು ಟೀಪಾಯಿ ಮೇಲೆ ಬಿಸಾಡಿದ್ದರು. ತಟ್ಟೆಯಲ್ಲಿ ಬಿರ್ಯಾನಿಯಿತ್ತು. ಅವರ ಮುಂದಿನ ಗ್ಲಾಸುಗಳು ಮಾತ್ರ ಆಗಾಗ ಖಾಲಿಯಾಗುತ್ತಿದ್ದವು; ಭರ್ತಿಯಾಗುತ್ತಿದ್ದವು. ಮೂವರಲ್ಲೂ ನಿಶೆ ನಿಧಾನವಾಗಿ ಏರುತ್ತಿತ್ತು. ರೆಡ್ಡಿ ಕುಡಿಯುತ್ತಿದ್ದರೂ ಅದರಲ್ಲೂ ಅವನು ಹುಷಾರುಗಾರನಾಗಿದ್ದನು. ಅವರು ಎರಡು ಗ್ಲಾಸು ಮುಗಿಸುವಷ್ಟರಲ್ಲಿ ಅವನು ಒಂದನ್ನು ಮುಗಿಸುತ್ತಿದ್ದ. ಅವನ ಆಲ್ಕೋಹಾಲ್ ಸೇವನೆ ನಿಯಂತ್ರಣ ತಪ್ಪಿರಲಿಲ್ಲ. ಮಹೇಶ ಮತ್ತು ಶರಣ್ ಹೆಚ್ಚು ಕುಡಿಯುವುದು ಅವನಿಗೆ ಬೇಕಿತ್ತು. ಅವನಿಗೆ ಮಹೇಶನಿಂದ ಬರಬೇಕಾದ ಹಣ ವಸೂಲು ಮಾಡುವುದು ಒಂದು ಗುರಿಯಾದರೆ, ಅವನ ಅಪ್ಪನ ಕೊಲೆಯ ಸೇಡು ತೀರಿಸಿಕೊಳ್ಳುವುದು ಮತ್ತೊಂದು ಗುರಿಯಾಗಿತ್ತು. ಅವನು ಎಲ್ಲವನ್ನು ಯೋಜಿತವಾಗಿ ರೂಪಿಸಿದ್ದ.

ಆದರೆ ಹೊರಗೆ ಕೂತ ಇಬ್ಬರು ಅವನಿಗೆ ದೊಡ್ಡ ಸಮಸ್ಯೆಯಾಗಿದ್ದರು. ಅವರನ್ನು ಮೈಸೂರಿಗೆ ಬಿಟ್ಟೇ ಬರಬಹುದಿತ್ತು. ಆದರೆ ನಾಳೆ, ನಾಡಿದ್ದು, ಅವರೇ ತಲೆ ನೋವಾಗುತ್ತಿದ್ದರು. ಈಗ ಏನು ಮಾಡುವುದು ? ಚಿಂತಿಸಿದ. ಮೊದಲ ಗುರಿಯಿಂದ ಹಿಂದೆ ಹೋಗುವುದು ಬೇಡ. ಮುಂದೆ ಹೋಗೋಣ, ದಾರಿ ತನಗೆ ತಾನು ತೆರೆದುಕೊಳ್ಳುತ್ತದೆ. ಆ ಕ್ಷಣದ ನಡೆ ಏನನ್ನು ಹೇಳುವುದೋ ಅದರಂತೆ ತಾನು ಪ್ರತಿಕ್ರಿಯಿಸಬೇಕು. ದಾರಿ ಯಾವುದಾದರೇನು ? ಉದ್ದೇಶ ಈಡೇರಬೇಕು ಅಷ್ಟೆ.

ಮಹೇಶನನ್ನು ಕುರಿತು ರೆಡ್ಡಿ "ಮಹೇಶ್, ನಾನೀಗ ಸಂಕಷ್ಟದಲ್ಲಿದ್ದೇನೆ. ನನಗೆ ಕನಿಷ್ಟ ಒಂದು ಕೋಟಿಯಾದರೂ ಹಣಬೇಕು. ನಾನು ನಿನಗೆ ನೀಡಿರುವ ಹಣದ ಪೈ ಗೆ ಪೈ ಲೆಕ್ಕ ಇಟ್ಟಿದ್ದೇನೆ. ಎಲ್ಲ ಸೇರಿ ಹತ್ತಿರ ಹತ್ತಿರ ಎರಡು ಕೋಟಿಯಾಗುತ್ತದೆ-" ಒಂದು ಸಿಪ್ ಮಾಡಿ "ನಾನು ಕೊಡಬೇಕಾದವರಿಗೆ ಕೊಡಬೇಕು. ಅಪ್ಪ ಸತ್ತಮೇಲೆ ರಿಯಲ್ ಎಸ್ಟೇಟ್ ವ್ಯವಹಾರ ಹೆಚ್ಚು ಕಡಿಮೆ ನಿಂತಿದೆ. ಇನ್ನು ಗ್ರಾನೈಟ್ ಬಿಸಿನೆಸ್ ನಿನಗೇ ಗೊತ್ತಿದೆ. ಕಮಿಟ್‌ಮೆಂಟ್ ಹೆಚ್ಚಾಗಿವೆ. ಈಗ ನೀನೇನಾದೂ ವ್ಯವಸ್ಥೆ ಮಾಡಲೆ ಬೇಕು-" ಎಂದ.

ಮಹೇಶ ಹೊಟ್ಟೆಬಾಕನಾಗಿದ್ದ. ಬಲಗೈಯಲ್ಲಿ ಬಿರ್ಯಾನಿಯನ್ನು ಮುದ್ದೆಮಾಡಿ ಬಾಯಿಗೆ ಹಾಕಿಕೊಂಡು, ವಿಸ್ಕಿಯನ್ನು ಗುಟುಕರಿಸಿ, ಏದುಸಿರು ಬಿಟ್ಟ. ಅವನು ಊಟವನ್ನು ಕೂಡ ಒಂದು ಶ್ರಮದಾಯಕ ಕೆಲಸದಂತೆ ನಿರ್ವಹಿಸುತ್ತಿದ್ದ. ಆಲ್ಕೋಹಾಲ್‌ನ ಪ್ರಭಾವ ಅವನ ಮುಖದಲ್ಲಿ ವ್ಯಕ್ತವಾಗುತ್ತಿತ್ತು. ಅವನು ಹಣೆ ಮೇಲೆ ಮೂಡುತ್ತಿದ್ದ ಬೆವರನ್ನು ನ್ಯಾಪ್‌ಕಿನ್‌ನಿಂದ ಒರೆಸಿಕೊಂಡು "ನನ್ನ ಸ್ಥಿತಿ ನಿನಗೆ ಗೊತ್ತು. ವ್ಯವಹಾರವೆಲ್ಲ ಬಂದ್ ಆಗಿದೆ. ಇನ್ನೂ ಬೇಸಾಯ. ಅದರಿಂದ ಏನು ಬರ್ತದೆ ? ಬೇಸಾಯ, ನೀಸಾಯ ಎಲ್ಲಾ ಸಾಯ- ಅನ್ನೋ ಮಾತು ನಿನಗೊತ್ತಿಲ್ಲವೆ ? ಅಂದ ಮೇಲೆ ನಿನಗೆ ಹಣ ಎಲ್ಲಿಂದ ತರಲಿ ? ಅದೂ ಇವತ್ತೇ ?" ಎಂದ.

"ಅದೆಲ್ಲಾ ನನಗ್ಗೊತ್ತಿಲ್ಲ. ನಿಮ್ಮಣ್ಣನ ಬಳಿ ನೀನು ಹಣ ಕೇಳಬೇಕಿತ್ತು. ಬೇನಾಮಿ ಖಾತೆಗಳಲ್ಲಿ ಅವನು ಅಪಾರ ಹಣ ಇಟ್ಟಿದ್ದಾನೆಂದು ಕೇಳಿದ್ದೇನೆ. ಕೊಡುತ್ತಿದ್ದ. ಆದರೆ ಅವನ ಬಳಿಗೆ ಹೋಗದೆ, ನೀನು ನನ್ನ ಬಳಿ ಬಂದು ಹಣ ಕೇಳ್ತಿದ್ದೆ. ಏನೋ ಬಿಸಿನೆಸ್ ಪಾರ್ಟನರ್ , ಸ್ನೇಹಿತ ಅಂತ ನೀನು ಕೇಳ್ ಕೇಳ್ದಂಗೆ ಹಣ ಕೊಟ್ಟಿದ್ದೇನೆ. ನೀನು ಅದ್ನ ತಕ್ಕೊಂಡು ಮಜ ಮಾಡಿದ್ದೀಯಾ. ಈಗ ಕೇಳಿದರೆ ಹಣ ಇಲ್ಲಿ ಅಂತೀಯಾ ?-" ಆಕ್ಷೇಪಿಸುವ ದನಿಯಲ್ಲಿ ರೆಡ್ಡಿ ನುಡಿದ.

"ನಮ್ಮ ತಾಯಾಣೆಗೂ ನನ್ನ ಹತ್ತಿರ ದುಡ್ಡಿಲ್ಲ, ರೆಡ್ಡಿ. ಅಣ್ಣನ ಹತ್ರ ಕೇಳೋಹಂಗಿಲ್ಲ. ಬೇಸಾಯದ ವ್ಯವಹಾರ, ಕ್ವಾರಿ ವ್ಯವಹಾರ- ಎಲ್ಲವನ್ನೂ ನನಗೆ ಬಿಟ್ಟಿದ್ದಾನೆ. ಯಾವುದಕ್ಕೂ ತಲೆ ಹಾಕೋಲ್ಲ ಅವನು. ಹಣ ಕೇಳಿದರೆ ಸಂಪಾದನೆ ಏನಾಯ್ತು ಅಂತಾನೆ. ಪ್ಲೀಸ್, ಅರ್ಥಮಾಡಿಕೊ-" ಮಹೇಶ ರೆಡ್ಡಿಯನ್ನು ವಿನಂತಿಸುವವನಂತೆ ನುಡಿದ.

"ನಿನ್ನ ಚಟ ಕಡಿಮೆ ಮಾಡ್ಕೋಬೇಕಿತ್ತು. ಕೈಯಲ್ಲಿ ಕಿಸಿಯೋಕ್ಕಾಗದಿದ್ದರೂ ನಿನಗೆ ದಿನಕೊಂಡು ಹೊಸ ಹುಡುಗಿ ಬೇಕು. ಅದೂ ವೆರೈಟಿ ಬೇರೆ ? ಇಂದು ನೀಗ್ರೋ, ನಾಳೆ ಚಿಂಕಿ, ಮತ್ತೊಂದು ದಿನ ಬಿಳಿತೊಗಲು!" ರೆಡ್ಡಿ ಅಬ್ಬರಿಸಿದ.

ಶರಣ್ ಬೆಚ್ಚಿದ. ಅವನ ಅಮಲು ಇಳಿಯುತ್ತಿರುವಂತೆ ಭಾಸವಾಯಿತು. ಇದೇನು ? ಈ ರೆಡ್ಡಿ ಈ ರೀತಿ ಒರಟಾಗಿ ಮಾತಾಡುತ್ತಿದ್ದಾನೆ. ಅಯ್ಯೋ ಶಿವ. ಹೊರಗೆ ನನ್ನ ತಂಗಿ ಕೂತಿದ್ದಾಳೆ. ಅವಳೇನೆಂದು ಕೊಂಡಾಳು ? ನಮ್ಮಣ್ಣನ ಸಹವಾಸ ಎಂಥವರೊಂದಿಗಿದೆ ಎಂದು ಅಸಹ್ಯಪಟ್ಟುಕೊಳ್ಳದಿರುವಳೆ ? ಅವಳ ಇದಿರು ನಾನು ಸಣ್ಣವನಾಗುವುದಿಲ್ಲವೆ ? ಅವನು ಸಣ್ಣಗೆ ಬೆವರಿದ. ರೆಡ್ಡಿಯನ್ನು ಕುರಿತು "ರೆಡ್ಡಿಯವರೆ, ಮೆಲ್ಲಗೆ ಮಾತನಾಡಿ. ಹೊರಗೆ ನನ್ನ ತಂಗಿ ಇದ್ದಾಳೆ. ಅವಳು ಕೇಳಿಸಿಕೊಂಡರೆ ಏನು ತಿಳ್ಕೊಂಡಾಳು. ಈ ವಿಷಯವನ್ನು ಆಮೇಲೆ ಮಾತನಾಡಿ ಸೆಟಲ್ ಮಾಡಿಕೊಳ್ಳೋಣ. ಈಗ ಬೇಡ, ಪ್ಲೀಸ್" ಎಂದು ರೆಡ್ಡಿಯ ಕಡೆ ನೋಡಿದ.

"ಲೇ ಶರಣ್, ಸುಮನೆ ಕೂತ್ಕೊಂಡು ಕುಡಿಯಲೇ, ನೀನ್ಯಾಕೆ ಮಧ್ಯದಲ್ಲಿ ಬಾಯಾಕ್ತಿ ?" ಎಂದು ರೆಡ್ಡಿ ವ್ಯಾಗ್ರನಾಗಿ ನುಡಿದ.

ಶರಣ್‌ಗೆ ಅವಮಾನವಾದಂತಾಯಿತು. ಈ ರೆಡ್ಡಿ ಎಂದೂ ನನ್ನನ್ನು ಏಕವಚನದಿಂದ ಕರೆದಿರಲಿಲ್ಲ. ಇಂದು ನನ್ನ ತಂಗಿಯ ಮುಂದೆ ಏಕ ವಚನದಿಂದ ಕರೆದದ್ದಲ್ಲದೆ ಹೀನಾಯವಾಗಿ ಮಾತಾಡ್ತ ಇದ್ದಾನೆ. ಚಂದ್ರಿಕಾ ಕಣ್ಣಿನಲ್ಲಿ ನಾನು ಇಳಿದು ಹೋಗುತ್ತೇನೆ. ಜೊತೆಗೆ ಆ ಪ್ರೊಫೆಸರ್ ಬೇರೆ ಇದ್ದಾನೆ. ಅವನಲ್ಲುಂಟಾದ ಅವಮಾನದ ಭಾವನೆ ಕೋಪಕ್ಕೆ ಬದಲಾಯಿತು. ಅವನು ರೆಡ್ಡಿಯನ್ನು ನುಂಗುವಂತೆ ನೋಡಿ "ನೋಡಿ ರೆಡ್ಡಿ, ಸ್ವಲ್ಪ ಮರ್ಯಾದೆ ಕೊಟ್ಟು ಮಾತಾಡಿ-" ಎಂದ.

ತಕ್ಷಣ ದಡಕ್ಕನೆ ಮೇಲೆದ್ದ ರೆಡ್ಡಿ "ನಿನಗೆಂಥಾ ಮರ್ಯಾದೇನೋ ಗುಲಾಮ್ ನನ್ಮಗನೆ. ಎಂಜಲು, ಎಂಜಲು ಕಾಸಿಗೆ ಕೈಯೊಡ್ಡುವ ನಿನಗೆ ಮರ್ಯಾದೆ ಬೇರೆ ಕೇಡು" ಎಂದು ಗಟ್ಟಿಯಾಗಿ ನುಡಿದ.

ಚಂದ್ರಿಕಾ ಡ್ರಾಯಿಂಗ್ ರೂಂ ಒಳಗೆ ಪ್ರವೇಶಿಸಿದ್ದಳು. ರೆಡ್ಡಿ ಅವಳ ಅಣ್ಣನಿಗೆ ಮಾಡುತ್ತಿದ್ದ ಅವಮಾನವನ್ನು ಅವಳು ಸಹಿಸಲಾರದವಳಾಗಿದ್ದಳು. ಅವಳಿಗೂ ಅವಮಾನವಾಗಿತ್ತು. ಜೊತೆಗೆ ಅವಳಣ್ಣನ ಮೇಲೆ ಕೋಪವೂ ಬಂದಿತ್ತು. "ರೀ, ಮಿಸ್ಟರ್ ರೆಡ್ಡಿ. ಮಾತಿನಲ್ಲಿ ಒಂದು ಸಭ್ಯತೆ, ಸಂಯಮ ಇರಬೇಕು. ಅವನು ಯಾರೇ ಆಗಿರಲಿ, ಇನ್ನೊಬ್ಬ ವ್ಯಕ್ತಿಯನ್ನು ಸ್ವಲ್ಪ ಮರ್ಯಾದೆಯಿಂದ ಮಾತನಾಡಿಸಬೇಕು. ಇಲ್ಲಿಗೆ ಸಾಕು ನಿಲ್ಲಿಸಿ-" ಎಂದು ತನ್ನ ಅಣ್ಣನನ್ನು ಕುರಿತು "ಅಣ್ಣ ನಿನಗೂ ನಾಚಿಕೆಯಿಲ್ಲಾ. ನಿನ್ನ ಜನ್ಮ ಹಾಳಾಗಬೇಕು. ಎದ್ದೇಳು, ಮೊದಲು ಇಲ್ಲಿಂದ ಹೋಗೋಣ" ಎಂದಳು ಕೋಪದಿಂದ, ಅಷ್ಟು ಮಾತನಾಡುವ ಹೊತ್ತಿಗೆ ಅವಳ ದನಿ ನಡುಗುತ್ತಿತ್ತು, ಮುಖ ಕೆಂಪಗಾಗಿತ್ತು, ಕೈಗಳು ಕಂಪಿಸುತ್ತಿದ್ದವು.

"ಓಹೋ, ಸಿಸ್ಟರ್ ನೀವು ! ಅಣ್ಣನ ಪರ ಮಾತನಾಡಲು ಬಂದ್ರಾ ?" ಒಮ್ಮೆ ಜೋರಾಗಿ ನಕ್ಕ ಅವನು. "ನೀವು ನನಗೆ ಸಭ್ಯತೆ, ಸಂಯಮದ ಬಗ್ಗೆ ನೀತಿ ಹೇಳ್ತೀರಾ ? ಮರ್ಯಾದೆ ಬಗ್ಗೆ ಪಾಠ ಮಾಡ್ತೀರಾ ? ಹ್ಹಾ.....ಹ್ಹಾಂ....ಸಂಜೆಯಿಂದ ಮೇಷ್ಟ್ರು ಜೊತೆ ಇದ್ದೀರಲ್ಲಾ, ಅದರ ಪ್ರಭಾವ ಇರಬಹುದು-" ಎಂದು ನುಡಿದವನೆ ಮತ್ತಷ್ಟು ವ್ಯಗ್ರನಾಗಿ ಏಕವಚನಕ್ಕಿಳಿದು "ಕಂಡದ್ದೀನಿ ಕೂತ್ಕೋಳಮ್ಮಾ ನಿನ್ನ ಮರ್ಯಾದೆನಾ. ನಾನೇನು ನೋಡಿಲ್ಲ ಅಂದ್ಕೊಂಡಿದ್ದಿಯಾ

ನೀನು ಆ ಮೇಷ್ಟ್ರ ಜೊತೆ ಗಾಡೀಲಿ, ಸ್ವಿಮ್ಮಿಂಗ್ ಪೂಲ್ ಹತ್ರ ನಡಿಸ್ತಿದ್ದ ಚಕ್ಕಂದಾನಾ ? ನೀನು ಹೇಳಿ ಕೇಳಿ ಈ ಎಂಜಲ ನನ್ಮಗನ ತಂಗಿ. ನಿನಗೆಲ್ಲಿ ಬರಬೇಕು ಮರ್ಯಾದೆ ? ಬಂದು ಬುಟ್ಟು, ನನಗೆ ಮರ್ಯಾದೆ ಪಾಠ ಹೇಳೋಕೆ ?" ಎಂದ ಅವಳನ್ನು ಗದರಿಸುವ ದನಿಯಲ್ಲಿ.

ಶರಣ್‌ಗೆ ಭೂಮಿಗಿಳಿದು ತಲೆ ಮರೆಸಿಕೊಳ್ಳುವಷ್ಟು ಯಾತನೆಯಾಯಿತು. ತನಗೆ ಅವಮಾನ ಮಾಡಿದ್ದನ್ನು ಸಹಿಸಿಕೊಳ್ಳಬಹುದು. ಆದರೆ ತನ್ನ ತಂಗಿಗೆ ? ತನ್ನ ಪ್ರೀತಿಯ ತಂಗಿಗೆ ? ಅವನು ಕೋಪದಿಂದ ಸಿಡಿದ. "ಏಯ್ ರೆಡ್ಡಿ, ಹಲ್ಲಿಡಿದು ಮಾತನಾಡು. ಇನ್ನೊಂದು ಮಾತನಾಡಿದರೆ ನಿನ್ನ ಹಲ್ಲುದುರಿಸ್ತೇನೆ" ಮುಷ್ಠಿ ಬಿಗಿ ಮಾಡಿ, ಧಸಕ್ಕೆಂದು ಎದ್ದು ನಿಂತು ರೆಡ್ಡಿಯ ಕಡೆ ಕೈ ತೋರಿದ.

ರೆಡ್ಡಿ ಶರಣ್‌ಗಿಂತ ದೊಡ್ಡ ಆಳು. ಸಮವಯಸ್ಕನಾದರೂ ಒಂದು ಬಗೆಯ ಒರಟು ತನ, ದೈತ್ಯ ಶಕ್ತಿ ಅವನಲ್ಲಿದ್ದವು. "ಏನಲೇ ಮಗನೆ, ನನ್ನ ಕಡೆ ಕೈ ತೋರಿಸ್ತಿಯಾ ? ಹಲ್ಲುದುರಿಸ್ತೀನಿ ಅಂತೀಯಾ ? ಯಾರ ಹಲ್ಲು ಉದುರ್ತಾವೋ ಈಗ ನೋಡು-" ಎಂದು ತನ್ನ ನೀಳ ಬಲತೋಳನ್ನು ಎತ್ತಿ ಶರಣ್ ಕೆನ್ನೆಗೆ ಭಾರಿಸಲು ಮುಂದಾದ.

ಕೂಡಲೇ ಅವನ ತೋಳನ್ನು ಒಂದು ಬಲಿಷ್ಟ ಕೈಯೊಂದು ಹಿಡಿದು ತಡೆಯಿತು. ರೆಡ್ಡಿ ಆ ಹಿಡಿತದ ಬಿಗಿಯನ್ನು ಅನುಭವಿಸಿದ. ಆ ಹಿಡಿತದಲ್ಲಿ ದೈಹಿಕ ಶಕ್ತಿಯ ಜೊತೆಗೆ ಮತ್ತೇನೋ ಅಡಗಿದೆಯೆಂದು ಅನ್ನಿಸಿತು. ರೆಡ್ಡಿ ಕೈಯನ್ನು ಆ ಹಿಡಿತದಿಂದ ಬಿಡಿಸಿಕೊಳ್ಳಲು ಹೆಣಗಿದ. ಬಿಗಿತ ಮತ್ತಷ್ಟು ಬಲವಾಯಿತು. ಅವನು ಭೂಮಿಗೌಡನ ಮುಖವನ್ನು ನೋಡಿದ. ಅವನ ಮುಖದಲ್ಲಿರುವ ಭಾವನೆಗಳನ್ನು ಓದುವುದು ಕಷ್ಟವಾಗಿತ್ತು. ಅಲ್ಲಿ ಕೋಪಕ್ಕಿಂತ ಮಿಗಿಲಾದ ವಿಶ್ವಾಸವಿತ್ತು.

ಭೂಮಿಗೌಡ ತನ್ನ ಹಿಡಿತವನ್ನು ಸಡಿಲಿಸದೆಯೇ "ನಿಲ್ಲಿಸಿ ಮಿಸ್ಟರ್ ರೆಡ್ಡಿ. ಇಲ್ಲಿ ಯಾರೂ ಜಗಳವಾಡಲು ಬಂದಿಲ್ಲ. ಅವರವರ ಪಾಡಿಗೆ ಅವರನ್ನು ಬಿಡಿ. ನಿಮ್ಮ ಮಹೇಶ್ ನಡುವೆ ಏನಿದೆಯೋ ಅದನ್ನು ನೀವಿಬ್ಬರು ಪ್ರತ್ಯೇಕವಾಗಿ ಕೂತು ಬಗೆಹರಿಸಿಕೊಳ್ಳಿ. ಅದನ್ನು ಬಿಟ್ಟು ಹೀಗೆ ಒರಟಾಗಿ, ಒಂದು ಹೆಣ್ಣಿನ ಜೊತೆ ಕೀಳಾಗಿ ವರ್ತಿಸಬಾರದು" ಎಂದ. ಅವನ ಧ್ವನಿ ಅತ್ಯಂತ ಸ್ಪಷ್ಟವಾಗಿ, ತಣ್ಣಗೆ ಇತ್ತು. ಅದರಲ್ಲಿ ಕಲ್ಲಿನಂಥ ಕಾಠಿಣ್ಯತೆಯಿತ್ತು. ರೆಡ್ಡಿಯ ಮುಖವನ್ನೇ ನೋಡುತ್ತಾ ತನ್ನ ಕೈಯನ್ನು ಸಡಿಲಿಸಿದ.

ರೆಡ್ಡಿಗೆ ತನ್ನ ತೋಳನ್ನು ಉಜ್ಜಿಕೊಳ್ಳೋಣ ಎನ್ನಿಸಿತು. ನೋಡಲು ಪೈಲ್ವಾನನಂತೆ ಕಾಣದ ಈತನ ಕೈಯಲ್ಲೆಂಥ ಶಕ್ತಿ ? ಅವನ ಎದುರಿಗೆ ತನ್ನ ಕೈಯನ್ನು ಉಜ್ಜಿಕೊಳ್ಳಲು ಅವನು ಇಷ್ಟಪಡಲಿಲ್ಲ. ಆದರೂ ಭೂಮಿಗೌಡನನ್ನು ಗರಂ ಆಗಿ ನೋಡಿದನು.

ಅವನನ್ನು ಲೆಕ್ಕಿಸದ ಭೂಮಿಗೌಡ ಶರಣ್ ಕಡೆ ತಿರುಗಿ "ಬನ್ನಿ ಶರಣ್ ಹೊರಡೋಣ. ನೀವು ಇವರಿಂದ ಇಷ್ಟು ಅನ್ನಿಸಿಕೊಂಡಮೇಲೂ ಇಲ್ಲಿರಬಾರದು. ನಡೆಯಿರಿ-" ಆದೇಶ ನೀಡುವವನಂತೆ ನುಡಿದ.

ಶರಣ್ ಒಂದು ಮೂಲೆಯಲ್ಲಿದ್ದ ತನ್ನ ತಂಗಿಯ ಬ್ಯಾಗನ್ನು ಎತ್ತಿಕೊಂಡ. ಅವನ ಮುಖ ಅವಮಾನದಿಂದ ಬಿಳುಚಿಕೊಂಡಿತ್ತು. ಚಂದ್ರಿಕಾ ವ್ಯಾನಿಟಿ ಬ್ಯಾಗ್ ಅನ್ನು ತನ್ನ ಬಲಭುಜಕ್ಕೆ ನೇತಾಕಿಕೊಂಡಳು. ಅವರು ಕಾಟೇಜ್‌ನ ಬಾಗಿಲು ಕಡೆ ತಿರುಗಿದರು.

"ನೀವ್ಯಾರೂ ಇಲ್ಲಿಂದ ಹೋಗುವ ಆಗಿಲ್ಲ! ನಿಲ್ಲಿ" ಎಂಬ ರೆಡ್ಡಿಯ ಧ್ವನಿ ಅವರ ಹಿಂದಿನಿಂದ ಕೇಳಿಸಿತು. ಅವರು ತುಸು ತಿರುಗಿ ಅವನನ್ನು ನೋಡಿದರು. ರೆಡ್ಡಿ ಹರಿತವಾದ, ದೀಪದ ಬೆಳಕಲ್ಲಿ ಹೊಳೆಯುತ್ತಿದ್ದ ಬಾಕುವೊಂದನ್ನು ಕೈಯಲ್ಲಿ ಹಿಡಿದಿದ್ದ. ಅದಕ್ಕೆ ಹಿಡಿತಕ್ಕೆ ಸುಗಮವಾಗಿರುವಂತೆ ಕೆತ್ತನೆ ಮಾಡಿದ್ದ ಕಪ್ಪನೆಯ ಬೀಟೆ ಮರದ ಹಿಡಿಯಿತ್ತು. ಆ ಹಿಡಿಯು ದೀಪದ ಬೆಳಕಿಗೆ ಪ್ರತಿಫಲಿಸುವಷ್ಟು ನೈಸಾಗಿತ್ತು. ಬಾಕು ಶುದ್ಧ ಉಕ್ಕಿನಿಂದ ಮಾಡಲಾಗಿತ್ತು. ಬುಡದಲ್ಲಿ ಉಬ್ಬಿ ಮುಂದೆ ಒಂದು ಅಡಿ ಮುಂದಕ್ಕೆ ಚಾಚಿ ಚಿಕ್ಕದಾಗುತ್ತಾ ತುದಿಯಲ್ಲಿ ಮೊನಚಾಗಿತ್ತು. ಅದರ ಇಕ್ಕೆಲ್ಲಗಳೆರಡೂ ಅತ್ಯಂತ ಹರಿತವಾದ ಬಾಯನ್ನು ಹೊಂದಿದ್ದವು.

ಭೂಮಿಗೌಡ ರೆಡ್ಡಿಯನ್ನೇ ನೋಡುತ್ತಾ, ಮೆಲ್ಲಗೆ ಅವನ ಬಳಿ ಸಾರಿ "ಏಕೆ ಹೋಗಬಾರದು ? ನೀವು ನಮ್ಮನ್ನು ತಡೆಯಬಲ್ಲಿರಾ, ಮಿಸ್ಟರ್ ರೆಡ್ಡಿ ?" ಎಂದ ರೆಡ್ಡಿಯ ಶಕ್ತಿಯನ್ನು ಅಂದಾಜು ಮಾಡುವವನಂತೆ.

ರೆಡ್ಡಿ ನಕ್ಕ. ಕಾವೇರಿ ತೀರದ ನಡುರಾತ್ರಿಯ ಆ ಮೌನದಲ್ಲಿ ಅದು ವಿಕಾರವಾಗಿ ಕೇಳಿಸಿತು. ಚಂದ್ರಿಕಾ ನಡುಗಿ, ಅಣ್ಣನ ತೋಳನ್ನು ರಕ್ಷಣೆಗೆನ್ನುವಂತೆ ಭದ್ರವಾಗಿ ಹಿಡಿದಳು. ಬಾಕು ಹಿಡಿದ ರೆಡ್ಡಿಯ ಹತ್ತಿರ ಸಾಗುತ್ತಿರುವ ಭೂಮಿಗೌನಿಗೆ ಏನಾಗುವುದೋ ಎಂದು ಭಯಭೀತಳಾಗಿ ನೋಡಿದಳು. ಅವಳು ಗಾಬರಿಯಿಂದ, ಭಯದಿಂದ, ಆಕಸ್ಮಿಕವಾಗಿ ಉಂಟಾದ ಈ ಸನ್ನಿವೇಶದಿಂದ ಮೃದುವಾಗಿ ಕಂಪಿಸುತ್ತಿದ್ದಳು.

ಭೂಮಿಗೌಡನಿಗೆ ಬಾಕು ಹಿಡಿದವನೊಡನೆ ಸೆಣಸಿ ಬಾಕು ಕಿತ್ತು ಕೊಳ್ಳುವುದು ಸ್ವಲ್ಪ ರಿಸ್ಕಿ ಎನ್ನಿಸಿತು. ಅವನ ಮಿತ್ರ ಪೊಲೀಸ್ ಅಧಿಕಾರಿಯೊಬ್ಬ ಒಮ್ಮೆ ಹೇಳಿದ್ದ ಮಾತು ನೆನಪಾಯಿತು. "ಬಾಕು ಹಿಡಿದ ಒಬ್ಬನನ್ನು ಒಂದು ಗುಂಪು ಅನೇಕ ವೇಳೆ ಏನೂ ಮಾಡಲಾಗದು. ಏಕೆಂದರೆ ಅವನು ಮತಿವಿಕಲನಾಗಿರುತ್ತಾನೆ. ಅರೆ ಹುಚ್ಚನಾಗಿರುತ್ತಾನೆ. ಅವನನ್ನು ಹಿಡಿಯಲು ಹೋದರೆ ಸಾವು ಸಂಭವಿಸಬಹುದು. ಮಾರಣಾಂತಿಕ ಗಾಯಗಳಾಗಬಹುದು. ಅವನೊಂದು ರಿಸ್ಕ್ ಫ್ಯಾಕ್ಟರ್. ಅವನೊಡನೆ ಬುದ್ಧಿಯಿಂದ ವ್ಯವಹರಿಸಬೇಕು. ಏಕ್ ಧಂ ಅವನ ಮೇಲೆ ಬೀಳುವ ಬದಲು ಅವನನ್ನು ಮಾತನಾಡಿಸುತ್ತಿರಬೇಕು. ಅವನ ಗಮನವನ್ನು ಬೇರೆಡೆ ಸೆಳೆಯಬೇಕು. ಅವನನ್ನು ಶಾಂತಗೊಳಿಸಿ, ಅವನನ್ನು ಹಿಡಿಯಬೇಕು."

ರೆಡ್ಡಿ ಬಾಕುವನ್ನು ಭೂಮಿಗೌಡನ ಎದೆಯ ನೇರಕ್ಕೆ ಹಿಡಿದು ಅವನಿಗೆ ಸೋಫಾವನ್ನು ತೋರಿ, ಅಲ್ಲಿ ಕೂರುವಂತೆ ಚಾಕುವಿನಿಂದಲೇ ಸನ್ನೆ ಮಾಡಿದ. ಭೂಮಿಗೌಡ ರೆಡ್ಡಿಯಿಂದ ದೃಷ್ಟಿಯಿಂದ ಕದಲಿಸದೆ, ಅವನ ಆಜ್ಞೆಯನ್ನು ಪಾಲಿಸಿದ. ಅನಂತರ ರೆಡ್ಡಿ ಶರಣ್ ಮತ್ತು ಚಂದ್ರಿಕಾರನ್ನು ಭೂಮಿಗೌಡನ ಪಕ್ಕ ಕೂರುವಂತೆ ಸೂಚನೆ ನೀಡಿದ. ಚಂದ್ರಿಕಾ ಭೂಮಿಗೌಡನ ಪಕ್ಕ ಸೋಫಾದ ಮಧ್ಯಭಾಗದಲ್ಲಿ ಕುಳಿತಳು. ಶರಣ್ ಅವಳ ಪಕ್ಕ ಕುಳಿತ.

ರೆಡ್ಡಿ ಅವರ ಎದುರಿನ ಸೋಫಾದಲ್ಲಿ ಮಹೇಶನ ಪಕ್ಕ ಕುಳಿತ. ಚಾಕು ಎದುರಿನ ಮೂವರನ್ನು ನೋಡುತ್ತಿತ್ತು. ಭೂಮಿಗೌಡ ತನ್ನ ಎದುರಿಗೆ ಕುಳಿತಿದ್ದ ತನ್ನ ಬಾಲ್ಯದ ಸಹಪಾಠಿ ಮಹೇಶನನ್ನು ನೋಡಿದ. ಅವನು ತುಂಬಾ ಸುಸ್ತಾಗಿರುವವನಂತೆ ಕಂಡ. ಅವನು ತಿನ್ನುವುದನ್ನು ನಿಲ್ಲಿಸಿದ್ದ.

ಸೋಫಾದ ಹಿಂಬದಿಗೆ ತನ್ನ ತಲೆಯನ್ನು ಒರಗಿಸಿ, ಸುಮ್ಮನೆ ತನ್ನ ಎದುರಿಗೆ ನಡೆಯುತ್ತಿರುವ ಘಟನೆಯನ್ನು ನೋಡುತ್ತಿರುವವನಂತೆ ಕಾಣುತ್ತಿದ್ದ. ಅವನ ಕಾರಣದಿಂದಲೇ ಪ್ರಾರಂಭವಾದ ಈ ಜಗಳಕ್ಕೆ ಅವನ ಶೂನ್ಯ ನೋಟ ಸಾಕ್ಷಿಯಾಗಿತ್ತು. ಅವನ ಹಣೆ, ಕುತ್ತಿಗೆಯ ಬೆವರು ಸಾಲು ದೀಪದ ಬೆಳಕಲ್ಲಿ ಮಿನುಗುತ್ತಿತ್ತು. ಅವನ ಎಡಕಿವಿಯ ಎರಡು ಕವಲುಗಳು ಮತ್ತೂ ಉದ್ದವಾಗಿರುವಂತೆ ಕಾಣುತ್ತಿತ್ತು. ಭೂಮಿಗೌಡನಿಗೆ ಮಹೇಶ ಸರಿಯಾಗಿದ್ದಾನೆ ಅನ್ನಿಸಲಿಲ್ಲ. ಅವನ ಆರೋಗ್ಯ ಕೆಟ್ಟಿರಬಹುದು; ಬಹುಶಃ ಅವನ ಎದೆ ನೋವು ಜಾಸ್ತಿಯಾಗಿರಬಹುದು; ಸಂಜೆ ಮಾತ್ರೆ ನುಂಗುತ್ತಿದ್ದ. ಅವನನ್ನು ಕುರಿತು ಭೂಮಿಗೌಡ "ಮಿಸ್ಟರ್ ಮಹೇಶ್, ಆರಾಮವಾಗಿದ್ದೀರಿ ತಾನೆ ? ತುಂಬಾ ಸುಸ್ತಾದವರಂತೆ ಕಾಣುತ್ತಿದ್ದೀರಿ" ಎಂದನು.

ಮಹೇಶ್ ಮಿಸುಕಾಡಿದ. ತನ್ನ ಬಲಕೈಯನ್ನು ನೋಡಿಕೊಂಡ. ಕೈಯಲ್ಲಿ ಊಟದ ಮುಸುರೆ ಮೆತ್ತಿ ಕೊಂಡಿತ್ತು. ಟೇಬಲ್ ಮೇಲಿದ್ದ ನ್ಯೂಸ್ ಪೇಪರ್‌ನ ತುಣುಕೊಂದನ್ನು ತೆಗೆದುಕೊಂಡು ಕೈಯನ್ನು ಒರೆಸಿಕೊಂಡ. ಅನಂತರ ಬಲಗೈನಿಂದ ಎದೆಯ ಎಡಭಾಗ, ಎಡಕೈನ ಭುಜ, ತೋಳುಗಳನ್ನು ಹಿಸುಕಿಕೊಂಡ. ಕ್ಷಣ ಕಣ್ಣು ಮುಚ್ಚಿದ. ಅನಂತರ ತನ್ನ ಜೇಬನ್ನು ತಡಕಿ ಒಂದು ಮಾತ್ರೆಯನ್ನು ಹೊರ ತೆಗೆದು ಬಾಯಿಗಿಟ್ಟುಕೊಂಡ. ಗಾಜಿನ ಲೋಟದಲ್ಲಿದ್ದ ನೀರನ್ನು ಗುಟುಕಿಸಿದ.

"ಲೇ ಮಹೇಶ, ನೀನು ಎದೆ ನೋವು ಅಂತ ನಾಟಕ ಆಡಿದರೆ ನಿನ್ನ ಬಿಟ್ಟು ಬಿಡುತ್ತೇನೆ ಅಂದ್ಕೊಂಡಿದ್ದಿಯಾ ? ನನಗೆ ಹಣವನ್ನು ಇಂದು ನೀನು ನೀಡಲೇಬೇಕು-" ಎಂದ ರೆಡ್ಡಿ ಬಾಕುವನ್ನು ಮಹೇಶನ ಕಡೆ ಒಮ್ಮೆ ತೋರಿ.

ಭೂಮಿಗೌಡ "ಮಿಸ್ಟರ್ ರೆಡ್ಡಿ, ಈ ರಾತ್ರೀಲಿ ಅವರು ಎಲ್ಲಿಂದ ಹಣ ತರ್ತಾರ್ರೀ ? ಬೆಳಿಗ್ಗೆ ಎದ್ದು ನಿಮ್ಮ ವ್ಯವಹಾರ ಬಗೆಹರಿಸಿ ಕೊಳ್ಳಿ. ಈಗ ನಮ್ಮನ್ನು ಹೋಗಲು ಬಿಡಿ-" ಎಂದನು.

"ರೀ ಮೇಷ್ಟ್ರೆ, ಸುಮ್ನೆ ಕೂತ್ಕೊಳ್ರೀ. ದುಡ್ಡು ಎಲ್ಲಿದೆ ಅಂತ ನನಗೊತ್ತು. ಯಾವ್ಕಾಲದಲ್ಲಿದ್ದೀರ್ರೀ ನೀವು ? ಕಾಲೇಜಿನಲ್ಲಿ ಪ್ರೊಫೆಸರ್ ಅಂತೀರಿ. ದೊಡ್ಡ ವಿದ್ವಾಂಸ ಅಂತೀರಿ. ಈಗ ಇಪ್ಪತ್ನಾಲ್ಕು ಗಂಟೆ ಹಣದ ವ್ಯವಹಾರ ನಡೆಯುತ್ತೆ ಗೊತ್ತೆ ?" ಎಂದ ರೆಡ್ಡಿ.

"ಇಲ್ಲೆಲ್ಲೂ ಎಟಿಎಂ ಇಲ್ವಲ್ಲ. ಈಗಲೇ ನಿಮಗೆ ದುಡ್ಡು ಬೇಕೆಂದರೆ ಮೈಸೂರಿಗೆ ಹೋಗೋಣ. ಹದಿನೈದು ನಿಮಿಷದ ಹಾದಿ. ಅಲ್ಲಿ ಮಹೇಶ್ ಹಣವಿದ್ದರೆ ನೀಡುತ್ತಾರೆ-" ಎಂದ ಗೌಡ.

ರೆಡ್ಡಿ ಬಾಕುವನ್ನು ಎಡಕ್ಕೂ ಬಲಕ್ಕೂ ಆಡಿಸಿ, ಅನಂತರ ನೇರವಾಗಿ ಭೂಮಿಗೌಡನನ್ನು ದೃಷ್ಟಿಸಿ "ಮೇಷ್ಟ್ರೆ, ನೀವು ಬಹಳ ಮಾತಾಡ್ತಾ ಇದ್ದೀರಾ ? ನಿಮ್ಮನ್ನು ನೀವು ಬುದ್ಧಿವಂತರೆಂದು ತೀರ್ಮಾನಿಸಿದ್ದೀರಿ. ನೀವು ನಮ್ಮಂಥವರ ಜೊತೆ ವ್ಯವಹರಿಸಿಲ್ಲ. ನಮ್ಮದು ರಕ್ತದ ಅಂಚಿನ ಬದುಕು. ಸೀಳಿ ಬದುಕುವುದೇ ಕೆಲಸ. ಹಣ ನಮ್ಮ ಉಸಿರಿನ ಟಾನಿಕ್. ಹಣದ ವಾಸನೆಯನ್ನು ನಮ್ಮ ಮೂಗು ಬಹುಬೇಗ ಹಿಡಿಯುತ್ತೆ" ಅವನು ಮಹೇಶ್‌ನ ಕಡೆ ತಿರುಗಿ "ಈ ದಡಿಯನನ್ನು

ನೀವು ಅಂಡರ್ ಎಸ್ಟಿಮೇಟ್ ಮಾಡಿದ್ದೀರಿ. ಅವನು ಎದೆ ಮುಟ್ಟಿನೋಡಿಕೊಳ್ಳುವ ರೋಗದ ನಾಟಕ ನಿಮ್ಮನ್ನು ಮೋಸಮಾಡಿದೆ. ಅವನ ಬಳಿ ಹಣ ಇದೆ. ಇಲ್ಲೇ ಕೊಡುತ್ತಾನೆ. ನೋಡುತ್ತಿರಿ-" ಎಂದನು.

ಸಿಟ್‌ಔಟ್‌ನಲ್ಲಿ ಮೂಳೆ ಕವರುತ್ತಿದ್ದ ಬೆಳ್ಳಿ ಒಳಗಿನ ದನಿಗಳಿಗೆ ಕುತೂಹಲಗೊಂಡೋ ಅಥವಾ ಒಂದೇ ಅಲ್ಲಿರುವುದಕ್ಕೇ ಬೇಸರವಾಗಿಯೋ ಒಳಗೆ ಪ್ರವೇಶಿಸಿತು. ಅದು ಚೆಂಗನೆ ನೆಗೆದು ಭೂಮಿಗೌಡ ಚಂದ್ರಿಕಾರ ನಡುವೆ ಜಾಗಮಾಡಿ ಕುಳಿತು, ತನ್ನ ಪುಟ್ಟ ತಲೆಯನ್ನು ಚಂದ್ರಿಕಾಳ ತೊಡೆಯ ಮೇಲಿಟ್ಟು ತನ್ನ ಎದುರಿನ ರೆಡ್ಡಿಯನ್ನು ಪಿಳಪಿಳನೆ ನೋಡಿತು. ಅವನ ಧ್ವನಿಯೋ ಅಥವಾ ಅವನ ಕೈಯಲ್ಲಿರುವ ಬಾಕುವೋ ಅದಕ್ಕೆ ಇಷ್ಟವಾಗಲಿಲ್ಲವೆಂದು ತೋರುತ್ತದೆ. ಒಮ್ಮೆ ತಲೆ ಎತ್ತಿ ಅವನ ಕಡೆ ನೋಡಿ 'ಬೊವ್ ವವ್' ಎಂದು ಒಮ್ಮೆ ಬೊಗಳಿತು.

ಅದೇ ಹೊತ್ತಿಗೆ ಸರಿಯಾಗಿ ಚಂದ್ರಿಕಾಳ ವ್ಯಾನಿಟಿ ಬ್ಯಾಗಿನಿಂದ ಅವಳ ಮೊಬೈಲ್ ಸದ್ದುಮಾಡಿತು. ಚಂದ್ರಿಕಾ ಬ್ಯಾಗಿಗೆ ಕೈ ಹಾಕಿ ಮೊಬೈಲ್ ತೆಗೆದು, ರಿಸೀವ್ ಮಾಡಿಕೊಳ್ಳಲು ಗುಂಡಿ ಒತ್ತಬೇಕು, ಅಷ್ಟರಲ್ಲಿ ರೆಡ್ಡಿಯ ಧ್ವನಿ ಗುಡುಗಿತು.

"ಏಯ್, ಸಿಸ್ಟರ್. ಫೋನ್ ರಿಸೀವ್ ಮಾಡಿಕೊಳ್ಳಬೇಡ. ಆ ಫೋನನ್ನು ಇಲ್ಲಿ ಕೊಡು" ಎಂದು ರೆಡ್ಡಿ ತನ್ನ ಎಡಗೈ ಚಾಚಿದ.

ಚಂದ್ರಿಕಾ ಮೊಬೈಲ್‌ನನ್ನು ಮತ್ತೊಮ್ಮೆ ನೋಡಿ, "ನಮ್ಮ ಅಮ್ಮಂದು, ಏಕೆ ತಡವಾಯ್ತೆಂದು ವಿಚಾರಿಸಲು ಇರಬೇಕು-" ಎಂದಳು.

"ಅದಕ್ಕೆ ನಾನು ರಿಸೀವ್ ಮಾಡಬೇಡ ಎಂದು ಹೇಳಿದ್ದು. ಅರ್ಥವಾಯಿತೆ?" ಎಲ್ಲರನ್ನು ಒಮ್ಮೆ ತೀಕ್ಷ್ಣವಾಗಿ ನೋಡಿ "ಎಲ್ಲರೂ ನಿಮ್ಮ ನಿಮ್ಮ ಮೊಬೈಲ್ ಫೋನ್‌ಗಳನ್ನು ಟೀಪಾಯ್ ಮೇಲಿಡಿ" ಎಂದು ಅಜ್ಞಾಪಿಸಿದನು.

ಎಲ್ಲರು ಪರಸ್ಪರ ಮುಖ ನೋಡಿಕೊಂಡರು. ಯಾರೂ ತಮ್ಮ ಜೇಬುಗಳಿಗೆ ಕೈ ಹಾಕಿಲಿಲ್ಲ. ರೆಡ್ಡಿ ಬಾಕುವನ್ನು ಮುಂದುಮಾಡಿ, ಮುಂದೆ ಬಗ್ಗಿ ಕ್ಷಣಮಾತ್ರದಲ್ಲಿ ಬೆಳ್ಳಿಯನ್ನು ಎತ್ತಿಕೊಂಡ. ಅವನು ಅದನ್ನು ಎಳೆದುಕೊಂಡ ಒರಟುತನಕ್ಕೆ ಅದು ನೋವಿನಿಂದ ಕುಯ್‌ಗುಟ್ಟಿತು. ಅದರ ಎದೆಗೆ ಬಾಕುವನ್ನು ಒತ್ತಿ ಹಿಡಿದು ಚಂದ್ರಿಕಾಳನ್ನು "ಸೆಲ್ ಅನ್ನು ಟೀಪಾಯ್ ಮೇಲಿಡು" ಎಂದು ಗದರಿದ.

ಬೆಳ್ಳಿಯ ಬಗ್ಗೆ ಗಾಬರಿಯಾದ ಚಂದ್ರಿಕಾ ಮೊಬೈಲ್ ಅನ್ನು ಟೀಪಾಯ್ ಮೇಲಿಟ್ಟಳು. ಅದು ಮತ್ತೆರಡು ಸುತ್ತು ರಿಂಗಿಸಿ ಸುಮ್ಮನಾಯಿತು. ರೆಡ್ಡಿ ತನ್ನ ಹಿಡಿತವನ್ನು ಬಿಗಿಗೊಳಿಸಿ "ನಿಮ್ಮಣ್ಣ, ಪ್ರೊಫೆಸರ್‌ಗೆ ಹೇಳು. ಅವರು ತಮ್ಮ ಸೆಲ್‌ಗಳನ್ನು ಟೀಪಾಯ್ ಮೇಲಿಡಲಿ" ಬಾಕುವನ್ನು ಬೆಳ್ಳಿಯ ಎದೆಗೆ ಮತ್ತಷ್ಟು ಒತ್ತಿ ಹಿಡಿದ. ಬೆಳ್ಳಿ ಅವನಿಂದ ಬಿಡಿಸಿಕೊಳ್ಳಲು ಒದ್ದಾಡಿತು. ಅವನನ್ನು ಕಡಿಯಲು ಯತ್ನಿಸಿತು. ಆದರೆ ಅಸಹಾಯಕವಾಗಿ ಚಂದ್ರಿಕಾಳ ಕಡೆ ಕಾಪಾಡೆಂದು ಕೇಳುವ ರೀತಿಯಲ್ಲಿ ನೋಡಿ ಕುಯ್‌ಗುಡಲಾರಂಭಿಸಿತು.

ಚಂದ್ರಿಕಾ ತನ್ನ ಅಣ್ಣ ಮತ್ತು ಭೂಮಿಗೌಡನನ್ನು 'ಪ್ಲೀಸ್' ಎಂದಳು. ಅವರಿಬ್ಬರು ಮರುಮಾತನಾಡದೆ ತಮ್ಮ ಜೇಬುಗಳಿಂದ ತಂತಮ್ಮ ಸೆಲ್‌ಗಳನ್ನು ಹೊರ ತೆಗೆದು ಟೀಪಾಯ್ ಮೇಲಿಟ್ಟರು. ರೆಡ್ಡಿ ಮಹೇಶನ ಕಡೆ ತಿರುಗಿ "ನಿನಗೆ ಸ್ಪೆಷಲ್ ಆಗಿ ಹೇಳಬೇಕೆ ?" ಎಂದು ಗದರಿದ.

ಮಹೇಶ ತನ್ನ ಜುಬ್ಬದ ಜೇಬಿನಿಂದ ಮೊಬೈಲ್ ಫೋನನ್ನು ಹೊರತೆಗೆದು ಟೀಪಾಯ್ ಮೇಲಿಟ್ಟು "ಅದರಲ್ಲಿ ಪವರ್ರೇ ಇಲ್ಲ. ಚಾರ್ಜ್ ಮಾಡಬೇಕು" ಎಂದ ನಿರ್ವಿಕಾರವಾಗಿ.

ರೆಡ್ಡಿ ಆ ನಾಲ್ಕು ಸೆಲ್‌ಗಳನ್ನು ತೆಗೆದುಕೊಂಡು ಟೀಪಾಯ್‌ನ ಮತ್ತೊಂದು ಮಗ್ಗುಲಲ್ಲಿದ್ದ ನೀರಿನ ಜಗ್‌ಗೆ ಒಂದೊಂದನ್ನಾಗಿ ಮುಳುಗಿಸಿದ. ಅವನ ಕ್ರಿಯೆ ಸವಾಧಾನದಿಂದ ಕೂಡಿತ್ತು. ಅವು ಜಗ್‌ನ ನೀರಿನಲ್ಲಿ ಮುಳುಗಿ ತೊಯ್ದು ನಿರುಪಯುಕ್ತವಾದುದನ್ನು ಖಾತ್ರಿ ಪಡಿಸಿಕೊಂಡು, ತನ್ನ ಎದುರಿನ ಮೂವರನ್ನು ನೋಡಿ ನಗೆ ಬೀರಿದ. ಆ ನಗುವಿನಲ್ಲಿ ಅಸಹಜ ಭಾವವಿತ್ತು.

## ಅಧ್ಯಾಯ : ಹದಿನಾರು

ಭೂಮಿಗೌಡ ಮಾತನಾಡಿದ : "ನೋಡಿ ಮಿಸ್ಟರ್ ರೆಡ್ಡಿ. ನಾನು ಮತ್ತೆ ನಿಮ್ಮನ್ನು ರಿಕ್ವೆಸ್ಟ್ ಮಾಡುತ್ತೇನೆ. ನಿಮ್ಮ ವ್ಯವಹಾರದಲ್ಲಿ ನಾವು ಹೊರಗಿನವರು. ನಿಮ್ಮ ವರ್ತನೆಯಿಂದ ನಮಗೆ ಅಘಾತವಾಗಿದೆ, ನಿಜ. ಆದರೆ ಅದನ್ನು ನಾವು ಮರೆಯಲು ತಯಾರಾಗಿದ್ದೇವೆ. ನಮ್ಮನ್ನು ಹೋಗಲು ಬಿಡಿ-" ಅವನ ದನಿಯಲ್ಲಿ ಒಂದು ಬಗೆಯ ಗಡಸುತನವಿತ್ತು.

ರೆಡ್ಡಿ ತನ್ನ ಎಡಗೈನ ಹಿಡಿತದಲ್ಲಿ ಬೆಳ್ಳಿಯನ್ನು ನೆಲದ ಮೇಲೆ ಇಳಿಸಿ ಮೃದುವಾಗಿ ಅದರ ಬೆನ್ನನ್ನು ತಟ್ಟಿದನು. ಅದು ಚೆಂಗನೆ ನೆಗೆದು ತನ್ನ ಒಡತಿಯ ತೊಡೆ ಏರಿತು.

ರೆಡ್ಡಿ ಭೂಮಿಗೌಡನನ್ನು ನೋಡಿ "ನೀವು ಹೊರಗಿನವರಾಗಿದ್ದಿರಿ. ಆದರೆ ಈಗ ಅಲ್ಲ. ನಮ್ಮೊಡನೆ ಮಿಳಿತವಾಗಿ, ನಮ್ಮ ಮಾತುಕತೆ ಕೇಳಿ, ವ್ಯವಹಾರದ ಬಗ್ಗೆ ತಿಳಿದ ಮೇಲೆ ನೀವು ಹೊರಗಿನವರು ಹೇಗಾಗುತ್ತೀರಿ ? ಇನ್ನು ಈ ಶರಣ್, ಈ ಸಿಸ್ಟರ್ ನಿಮಗೇನು ಗೊತ್ತು ? ಅವರು ಎಂದೋ ನಮ್ಮ ವೃತ್ತದಲ್ಲಿ ಬಂಧಿಗಳಾಗಿದ್ದಾರೆ. ನಮ್ಮ ಅನ್ನ ತಿಂದಿದ್ದಾರೆ ; ನಮ್ಮ ಋಣದ ಹಂಗಿನಲ್ಲಿದ್ದಾರೆ. ಅದು ನಿಮಗೆ ಗೊತ್ತೆ ?" ಎಂದು ಪ್ರಶ್ನೆ ಹಾಕಿದ.

"ಶರಣ್ ನಿಮ್ಮ ವೃತ್ತದಲ್ಲಿರಬಹುದು. ಆದರೆ ಚಂದ್ರಿಕಾ ಹೇಗೆ ಸಾಧ್ಯ ?" ಭೂಮಿಗೌಡ ಕೇಳಿದ.

ರೆಡ್ಡಿ ತನ್ನ ಕೈಯಲ್ಲಿದ್ದ ಬಾಕುವನ್ನು ಅತ್ತಿಂದಿತ್ತ ಆಡಿಸುತ್ತಾ "ಪ್ರೊಫೆಸರ್, ಪಾಪವನ್ನು ನಾವೇ ಮಾಡಬೇಕಿಲ್ಲ. ಆ ಪಾಪದ ಪಾಲನ್ನು, ಫಲವನ್ನು ಅನುಭವಿಸಿದ ಮೇಲೆ ಅದರ ಪಾಲುದಾರರು ಕೂಡ ನಾವೇ ಆಗುತ್ತೇವೆ, ಅಲ್ಲವೆ ? ಹೇಳಿ ಪ್ರೊಫೆಸರ್, ನೀವು ವಿಚಾರವಂತರು" ಎಂದು ಹೇಳಿ, ಬಾಕುವನ್ನು ಚಂದ್ರಿಕಾಳತ್ತ ತೋರಿ "ಈ ಸಿಸ್ಟರ್ ನೇರವಾಗಿ ಅಲ್ಲದಿದ್ದರೂ ಪರೋಕ್ಷವಾಗಿ ನಮ್ಮ ಅನ್ನ ತಿಂದಿದ್ದಾಳೆ. ಅದು ಅವಳಿಗೂ ಗೊತ್ತು. ಗೊತ್ತಿಲ್ಲವೆಂದರೆ ನಾನು ನಂಬುವವನಲ್ಲ" ಎಂದು ಹೇಳಿ, ಸ್ವಲ್ಪ ಮೌನತಾಳಿ, ಮೇಲಕ್ಕೆದ್ದು ವಿಸ್ಕಿ ಬಾಟಲಿಯಿಂದ ಒಂದು ಗುಟುಕು ವಿಸ್ಕಿಯನ್ನು ನೇರವಾಗಿ ಗುಟುಕಿಸಿದ. ನಿಧಾನವಾಗಿ ಹೆಜ್ಜೆಯನ್ನಿಡುತ್ತಾ ಕಾಟೇಜ್‌ನ ಬಾಗಿಲನ್ನು ಒಳಗಿನಿಂದ ಭದ್ರಗೊಳಿಸಿದ.

ಮತ್ತೆ ಹಿಂತಿರುಗಿ ಚಂದ್ರಿಕಾಳ ಕಡೆ ನೋಡಿ, ಅವಳ ಅಂತರಾಳಕ್ಕೆ ನೇರವಾಗಿ "ಸಿಸ್ಟರ್, ನಿನಗೆ ನಿನ್ನ ಗಂಡನ ವ್ಯವಹಾರ ಗೊತ್ತಿಲ್ಲವೆ ? ಅವನಿಗೆ ಬರುವ ಸಂಬಳದಲ್ಲಿ ದಿನಾ ವಿದೇಶಿ ಗುಂಡು ಹಾಕಿ ಮೋಜಿನ ಜೀವನ ನಡೆಸಲು ಸಾಧ್ಯ ಆಗ್ತಿತ್ತೆ ? ಬಸವೇಶ್ವರ ನಗರದಲ್ಲಿ ಬರೀ ಐದೇ ಐದು ವರ್ಷದಲ್ಲಿ ಸೈಟು ತೆಗೆದು, ಭಾರೀ ಮನೆ ಕಟ್ಟಿಸಲು ಆಸುತ್ತಿತ್ತೆ ? ಇದು ನಿನ್ನ ಗಂಡನಿಗೆ ಹೇಗೆ ಸಾಧ್ಯವಾಯಿತು. ಅಂತ ಯೋಚಿಸಿದ್ದೀಯಾ ? ಅವನಿಗೆ ಅಷ್ಟು ಹಣ ಎಲ್ಲಿಂದ ಬರುತ್ತದೆ ? ಅದರ ಮೂಲ ಏನು ? ಎತ್ತ ? ಅಂತ ಎಂದಾದರೂ ನಿನ್ನ ಗಂಡನನ್ನು

ವಿಚಾರಿಸಿದ್ದೀಯಾ ? ನಿನಗೆ ಬೇಕಾದ ಬಟ್ಟೆ ಬರೆ, ಮನೆಗೆ ಲಕ್ಷುರಿ ವಸ್ತುಗಳು, ಮೈ ಮೇಲೆ ಆಭರಣ, ಖರ್ಚು ಮಾಡಲು ಹಣ- ಇವಿಷ್ಟು ಅವನಿಂದ ಪೂರೈಕೆಯಾದರೆ ಸಾಕು. ಪ್ರಶ್ನೆ ಯಾಕೆ ಮಾಡಬೇಕು ಅಂತ ಸುಮ್ನೆ ಇದ್ದೆ !....ಅಲ್ಲವೆ ? ಅಂದರೆ ಅವನು ಮನೆಗೆ ತರುತ್ತಿದ್ದ ಪಾಪದ ಹಣದ ಫಲಾನುಭವಿ ನೀನೂ ಆಗಿರುವೆ; ಅಲ್ಲವೆ ?" ಎಂದು ಮಾತನಾಡಿ, ಭೂಮಿಗೌಡನ ಕಡೆ ತಿರುಗಿ "ಈಗ ನೀವೇ ಹೇಳಿ ಪ್ರೊಫೆಸರ್, ಚಂದ್ರಿಕಾ ಕೂಡ ನಮ್ಮ ವೃತ್ತದಲ್ಲಿರುವವಳೇ. ನಿಮ್ಮಂಥ ಚಳುವಳಿಗಾರರು ಹೇಳುವ ಭ್ರಷ್ಟ ವ್ಯವಸ್ಥೆಯ ಪಾಲುದಾರಳು. ಏನಂತೀರಿ" ಎಂದು ನಕ್ಕ.

"ಭಾರತೀಯ ಸಮಾಜದಲ್ಲಿ ಹೆಣ್ಣನ್ನು ನೋಡುವ, ಅರ್ಥಮಾಡಿಕೊಳ್ಳುವ ನೆಲೆಯೇ ಬದಲಾಗಬೇಕಿದೆ, ಮಿಸ್ಟರ್ ರೆಡ್ಡಿ. ಅವಳು ಬಹುಪಾಲು ಸಂದರ್ಭದಲ್ಲಿ ಅಸಹಾಯಕಳು. ಭ್ರಷ್ಟ ವ್ಯಸ್ಥೆಯಲ್ಲಿರುವ ತಂದೆಯನ್ನೋ ಗಂಡನನ್ನೇ ಅವಳು ಪ್ರಶ್ನೆ ಮಾಡದಷ್ಟು ಅಸಹಾಯಕಳೂ ದುರ್ಬಲಳೂ ಆಗಿರುತ್ತಾಳೆ. ಆದ್ದರಿಂದ ಚಂದ್ರಿಕಾ ಗಂಡ ಮಾಡಿರಬಹುದಾದ ಕೆಲಸಗಳಿಗೆ ಅವಳು ಹೇಗೆ ತಾನೆ ಬಾಧ್ಯಳಾಗುತ್ತಾಳೆ" ಎಂದು ಕೇಳಿದ ಗೌಡ.

ರೆಡ್ಡಿ ಭೂಮಿಗೌಡನ ಹತ್ತಿರ ಬಂದು, ಅವನನ್ನೇ ಸ್ವಲ್ಪ ಹೊತ್ತು ನಿಟ್ಟಿಸಿ "ಪ್ರೊಫೆಸರ್, ವಾದವನ್ನು ನಿಮಗೆ ಹೇಗೆ ಬೇಕೋ ಹಾಗೆ ಮಂಡಿಸುತ್ತೀರಿ. ನೀವು ಎಷ್ಟಾದರೂ ಮೇಷ್ಟ್ರು ! ನಿಮಗೇಕೆ ಅನ್ನಿಸುವುದಿಲ್ಲ ? ನಾನು ಕೂಡ ಈ ವ್ಯವಸ್ಥೆಯಲ್ಲಿ ಅಸಹಾಯಕನೇ ! ನನ್ನ ಕಮಿಟ್‌ಮೆಂಟ್‌ಗಳು, ವ್ಯವಹಾರಗಳು ಯಾವ ಮಾರ್ಗದಲ್ಲಾದರೂ ಸರಿ, ಹಣ ಸಂಪಾದನೆ ಮಾಡು ಎಂದು ಒತ್ತಾಯಿಸುತ್ತವೆ. ನನ್ನನ್ನು, ನನ್ನಂಥವರನ್ನು ಭ್ರಷ್ಟಗೊಳಿಸಿದವರ‍್ಯಾರು ? ಅದು ನಿಮಗೆ ಗೊತ್ತಿಲ್ಲವೆ ? ಗೊತ್ತಿಲ್ಲವೆಂದು ನೀವು ಹೇಳಲಾರಿರಿ ಅಂತ ನನಗೆ ಗೊತ್ತು"- ತನ್ನ ದೃಷ್ಟಿಯನ್ನು ಕದಲಿಸಿ "ಈ ಶರಣ್‌ನಂಥವರು, ಈ ಸಿಸ್ಟರ್‌ನ ಗಂಡನಂಥವರು, ನಿಮ್ಮ ಫ್ರೆಂಡ್ ಬಸಂತ್‌ಕುಮಾರ್‌ನಂಥವರು, ಈ ಮಹೇಶನ ಅಣ್ಣ ಪೀಕೆಯಂಥವರು ಪ್ರತಿನಿತ್ಯ ನಮ್ಮನ್ನು ಕಿತ್ತು ತಿನ್ನುತ್ತಾರೆ. ಅವರು ಸರಿಯಿದ್ದರೆ, ಕಾನೂನು ನಿಯಮ ಅಂತ ಹೇಳ್ತೀರಲ್ಲ, ಆ ರೀತಿ ನಡೆದುಕೊಂಡಿದ್ದರೆ ನಾವ್ಯಾಕೆ ಭ್ರಷ್ಟರಾಗುತ್ತಿದ್ದೋ ? ತಿನ್ನೋ ಅನ್ನ, ಮಾಡೋ ಕೆಲಸ ಎರಡಕ್ಕೂ ಒಂದು ಧರ್ಮದ, ನ್ಯಾಯದ ಸಂಬಂಧ ಇರುತ್ತದೆ. ಆ ಸಂಬಂಧ ಅರ್ಥಮಾಡಿಕೊಂಡು ಇಂಥವರು ನಡೆದುಕೊಂಡಿದ್ದರೆ ನಾವ್ಯಾಕೆ ಭ್ರಷ್ಟರಾಗುತ್ತಿದ್ದೋ ! ನೀವೇ ಹೇಳಿ ಪ್ರೊಫೆಸರ್, ಈ ವ್ಯವಸ್ಥೆ ಭ್ರಷ್ಟಗೊಂಡು ನಮ್ಮನ್ನು ಭ್ರಷ್ಟಗೊಳಿಸಿದೆ. ನಾವು ಅದರಲ್ಲಿ ಹುಟ್ಟಿ ಬೆಳೆದಿದ್ದೇವೆ ; ಉಸಿರಾಡುತ್ತಿದ್ದೇವೆ. ಅದರಿಂದ ಹೊರಬರಲು ಸಾಧ್ಯವಿಲ್ಲ. ಹುಟ್ಟು ಅಲ್ಲೇ ಆಗಿರುವುದರಿಂದ ಸಾವೂ ಅಲ್ಲೇ ಆಗಬೇಕು. ಇದು ವಿಧಿ ನಿಯಮ" ಎಂದು ಮಾತನಾಡಿದ. ಮಾತಿನ ಕೊನೆ ಕೊನೆಯ ಹೊತ್ತಿಗೆ ಅವನು ತನಗೆ ತಾನು ಮಾತನಾಡಿಕೊಳ್ಳುತ್ತಿರುವವನಂತೆ ತೋರಿದ.

ಅವನು ಚಂದ್ರಿಕಾ ಮತ್ತು ಭೂಮಿಗೌಡ-ಇಬ್ಬರನ್ನು ನೋಡಿ" ಇಂದಿನ ನನ್ನ ಈ ಪ್ರಯಾಣದಲ್ಲಿ ನೀವಿಬ್ಬರೂ ಇರಲ್ಲ. ನಾವು ಮೂರೇ ಜನ ಪಾತ್ರಧಾರಿಗಳು

ಅಭಿನಯಿಸಬೇಕಾಗಿದ್ದ ಪ್ಲಾಟ್ ಅನ್ನು ನಾನು ನೆಯ್ದಿದ್ದೆ. ಆದರೆ ನನ್ನ ಯೋಜನೆಯನ್ನು ಮೀರಿ ಆಕಸ್ಮಿಕವೆಂಬಂತೆ, ನಮ್ಮ ಪ್ಲಾಟ್‌ನ ಅನಿರೀಕ್ಷಿತ ಪಾತ್ರಧಾರಿಗಳಾಗಿ ಬಂದು ಸೇರಿಕೊಂಡಿರಿ. ನಮ್ಮ ನಾಟಕ ಪೂರ್ಣಗೊಳ್ಳಬೇಕು; ನೀವಿಬ್ಬರೂ ಅದರಲ್ಲಿ ಅಭಿನಯಿಸಲೇಬೇಕು" ಎಂದು ಹೇಳಿ, ವಿಸ್ಕಿಯನ್ನು ಸಿಪ್ ಮಾಡಿದ.

ಭೂಮಿಗೌಡನಿಗೆ ರೆಡ್ಡಿ ಸಹಜವಾಗಿರುವಂತೆ ತೋರಲಿಲ್ಲ. ಅವನು ಯಾವುದೋ ಕಾರ್ಯತಂತ್ರ ರೂಪಿಸಿ, ಮಹೇಶ್ ಮತ್ತು ಶರಣ್‌ರನ್ನು ಜೊತೆಯಲ್ಲಿಟ್ಟುಕೊಂಡು ಮೈಸೂರಿಗೆ ಹೊರಟಿದ್ದಾನೆ. ರೆಸಾರ್ಟ್ ವ್ಯವಹಾರ ಒಂದು ನೆಪಮಾತ್ರ. ಆ ನೆಪದ ಹಿಂದೆ ಅನೇಕ ಗೂಢಗಳಿವೆ. ಆ ಗೂಢಗಳು ಮಹೇಶ ಮತ್ತು ಶರಣ್‌ರಿಗೆ ಗೊತ್ತಿಲ್ಲ. ಇಂಥ ಹತ್ತಾರು ಬಿಸಿನೆಸ್ ಟ್ರಿಪ್‌ಗಳನ್ನು ಅವರು ಜೊತೆಯಲ್ಲೇ ಮಾಡಿರುವುದರಿಂದ, ಅಂಥದರಲ್ಲಿ ಇದೂ ಒಂದು ಎಂದು ಕೊಂಡಿದ್ದಾರೆ, ಅಷ್ಟೆ. ರೆಡ್ಡಿ ಈಗ ಕುಡಿಯುತ್ತಿದ್ದಾನೆ; ಭಾವಪರವಶನಾಗುತ್ತಿದ್ದಾನೆ. ಅವನನ್ನು ಮತ್ತೆ ಮಾತನಾಡಿಸಿ, ಅವನನ್ನು ಹಗುರಗೊಳಿಸಿ ಇಲ್ಲಿಂದ ಕಳಚಿಕೊಂಡು ಚಂದ್ರಿಕಾಳ ಜೊತೆ ಹೊರ ಹೋಗಬೇಕು ಎಂದೆನ್ನಿಸಿತು.

ಅವನು ರೆಡ್ಡಿಯನ್ನು ಕುರಿತು "ನೀವು ಹೇಳಿದ ಹಾಗೆ ನಾವು ನಿಮ್ಮ ಜೊತೆ ಅನಿರೀಕ್ಷಿತವಾಗಿ ಬಂದು ಸೇರಿಕೊಂಡವರು. ನಿಮ್ಮ ಮಾತಿನಲ್ಲಿ ನಾವು ನಿಮ್ಮ ಬಗ್ಗೆ ಹೆಚ್ಚು ತಿಳಿದುಕೊಂಡಿದ್ದೇವೆ; ನೀವು ಏನೋ ಕಾನೂನು ಬಾಹಿರ ಚಟುವಟಿಕೆಯಲ್ಲಿ ತೊಡಗಿದ್ದೀರಾ, ಅದನ್ನು ನಾವು ತಿಳಿದುಕೊಂಡಿದ್ದೇವೆ. ಅದಕ್ಕೆ ನಾವು ಹೊರ ಹೋಗಬಾರದು ಎಂಬುದು ನಿಮ್ಮ ಭಾವನೆ. ಅಲ್ಲವೆ ರೆಡ್ಡಿ ? ನಿಮಗೆ ಭಯಬೇಡ. ನಿಮ್ಮ ಬಗ್ಗೆ ಈಗಲೂ ನಮಗೇನು ಗೊತ್ತಿಲ್ಲ. ನಮ್ಮ ದೃಷ್ಟಿಯಲ್ಲಿ ನೀವು ಗ್ರಾನೈಟ್ ವ್ಯಾಪಾರಿ ಮಾತ್ರ. ನಮ್ಮನ್ನು ಹೋಗಲು ಬಿಡಿ"ಎಂದು ಹೇಳಿದ. ಅವನ ದನಿಯಲ್ಲಿ ಮೃದುತನವಿತ್ತು. ಮೊದಲಿನ ಗಡುಸುತನವಿರಲಿಲ್ಲ. ಅವನನ್ನು ಒಲಿಸಿಕೊಳ್ಳುವ ಧಾಟಿಯಲ್ಲಿ ಅವನು ಮಾತನಾಡಿದ್ದ.

ರೆಡ್ಡಿ ಅವನ ಮಾತುಗಳನ್ನು ಕೇಳಿಸಿಕೊಂಡ. ಅವನನ್ನು ಮತ್ತೇರಿದ ತನ್ನ ಕಣ್ಣುಗಳಿಂದ ಅಮಾಯಕನಂತೆ ನೋಡಿದ. ತನ್ನ ಷರ್ಟಿನ ಮೊದಲ ಗುಂಡಿಯನ್ನು ಬಿಚ್ಚಿದ. ನಿಂತು ಫ್ಯಾನಿನ ಗಾಳಿಗೆ ಮೊಗವನ್ನೊಡ್ಡಿದ. ಶರಣ್ ತನ್ನ ತಲೆಯನ್ನು ಸೋಫಾದ ಮೇಲಿಟ್ಟು, ಕಾಟೇಜ್‌ನ ಸೀಲಿಂಗ್ ಅನ್ನು ನೋಡುತ್ತಿದ್ದ. ಮಹೇಶ ಮೊದಲಿಗಿಂತ ಹಗುರವಾಗಿರುವಂತೆ ತೋರಿದರೂ ಅವನು ಗಂಭೀರವಾದ ಆಲೋಚನೆಯಲ್ಲಿ ಮುಳುಗಿರುವಂತೆ ತೋರಿತು.

"ಪ್ರೊಫೆಸರ್, ನಿಮ್ಮಂಥವರನ್ನು ನೋಡಿದಾಗ ನಮಗೆ ಹೊಟ್ಟೆ ಉರಿಯುತ್ತದೆ. ನಿಮ್ಮ ನೆಮ್ಮದಿ ನಮಗಿಲ್ಲವಲ್ಲ ಅಂತ". ರೆಡ್ಡಿ ಮತ್ತೆ ಮಾತನಾಡಲು ತೊಡಗಿದ. "ನಮಗೆ ನೆಮ್ಮದಿಯೆಂಬುದೇ ಇಲ್ಲ. ಸದಾ ಪೊಲೀಸರ ಬಗ್ಗೆ, ಅಧಿಕಾರಿಗಳ ಬಗ್ಗೆ ಯೋಚನೆ, ಅವರನ್ನು ಖುಷಿಪಡಿಸುವ ಯೋಚನೆ, ಆಳುಕಾಳುಗಳ ಬಗ್ಗೆ ಯೋಚನೆ, ರಾಜಕಾರಣಿಗಳ ಬಗ್ಗೆ ಯೋಚನೆ. ಇವುಗಳ ನಡುವೆ ನಮ್ಮ ವ್ಯವಹಾರದ ಬಗ್ಗೆಯೂ ಯೋಚಿಸಬೇಕು. ನಮ್ಮ ಬಳಿ ಹಣ, ಒಡವೆ, ಕಾರು, ಮನೆ - ಎಲ್ಲಾ ಇವೆ. ಅವೆಲ್ಲಾ ಬೇರೆಯವರ ಸುಖಕ್ಕಾಗಿ. ನಮಗೆ ಇಷ್ಟ

ಇರಲಿ, ಇಲ್ಲದಿರಲಿ ನಾವು ರಾಜಕೀಯ ವ್ಯಕ್ತಿಗಳ ಕೈಗೊಂಬೆಗಳು. ಅವರ ಮರ್ಜಿಯಲ್ಲಿ ಬದುಕು ಮಾಡಬೇಕು". ಅವನು ಕಣ್ಣು ಮುಚ್ಚಿದ. ಕ್ಷಣ ಹೊತ್ತು ಸುಮ್ಮನಿದ್ದು, "ಸಮಾಜ ನಮಗೆ ಗೌರವ ಕೊಡುವುದಿಲ್ಲವೆಂದು ನಮಗೆ ಗೊತ್ತು. ನಮ್ಮನ್ನು ಸಮಾಜಘಾತಕರೆಂದೂ ಅದರ ಆತ್ಮನಾಶ ಮಾಡುತ್ತಿರುವ ಸ್ವಾರ್ಥಿಗಳೆಂದು ಸದಾ ಬಯ್ಯುತ್ತಾರೆಂದೂ ನಮಗೆ ಗೊತ್ತು. ನಾವು ಮನುಷ್ಯರಲ್ಲವೆ ? ನಮಗೂ ಒಳ್ಳೆಯವರಾಗಿ ಬದುಕಬೇಕೆಂದು ಆಸೆ ಇರುವುದಿಲ್ಲವೆ ? ಆದರೆ ಆಗುವುದಿಲ್ಲ !" ಎಂದು ಮಾತುನಿಲ್ಲಿಸಿದ. ಅನಂತರ ವಾಸ್ತವಕ್ಕೆ ಬಂದವನೆಂಬಂತೆ, "ಹತ್ತುವರ್ಷಗಳ ಹಿಂದೆ ನಾನು, ನಮ್ಮಪ್ಪ ಪೀಕೆ ಜೊತೆ ಸೇರಿ ಗಣಿ ಉದ್ಯಮ-ವ್ಯಾಪಾರ ಪ್ರಾರಂಭ ಮಾಡಿದಾಗಿನಿಂದ ಎಷ್ಟೆಷ್ಟೋ ಜನರಿಗೆ ಎಷ್ಟೆಷ್ಟೋ ಅನ್ಯಾಯ ಮಾಡಿದ್ದೇವೆಂಬುದು ನಿಮ್ಮ ಕಲ್ಪನೆಗೂ ಬಾರದು. ನೂರಾರು ರೈತರನ್ನು ಒಕ್ಕಲೆಬ್ಬಿಸಿದ್ದೇವೆ; ಅವರನ್ನು ದಿವಾಳಿಯನ್ನಾಗಿಸಿದ್ದೇವೆ. ಹಣದ ಆಸೆಗೆ ಅವರನ್ನು ಬೀಳಿಸಿ ದುಶ್ಚಟಗಳನ್ನು ಕಲಿಸಿದ್ದೇವೆ. ಹಲವರನ್ನು ಮುಗಿಸಿದ್ದೇವೆ. ನಾವು ಅಪರಾಧಿಗಳೆಂದು ಕಾನೂನು ವ್ಯವಸ್ಥೆ ಗುರುತಿಸಿಲ್ಲ; ಶಿಕ್ಷೆಗೊಳಪಡಿಸಿಲ್ಲ. ಏಕೆಂದರೆ ಬೇಲಿ ಕಾಯುವ ಜನರೆ, ಬೇಲಿ ಕಿತ್ತು ನಮ್ಮನ್ನು ಒಳಕ್ಕೆ ಬಿಟ್ಟದ್ದರು". ರೆಡ್ಡಿ ಚಂದ್ರಿಕಾಳನ್ನು ಮೃದುವಾಗಿ ನೋಡಿ "ಸಿಸ್ಟರ್, ನನಗೆ ನಿನ್ನ ಮೇಲೆ ಕೋಪವಿಲ್ಲ. ಯಾವ ಭಾವನೆಯೂ ಇಲ್ಲ. ಆದರೆ ನಾನು ಆಗಲೇ ಹೇಳಿದಂತೆ ನೀನು ನಿನಗರಿವಿಲ್ಲದಂತೆ ಈ ದಿನದ ನಮ್ಮ ಬದುಕಿನ ಪಾತ್ರವಾಗಿಬಿಟ್ಟೆ. ಈ ಪ್ರೊಫೆಸರ್‌ಗಿಂತ ನೀನು ಹೆಚ್ಚು ಸಂಬಂಧವನ್ನು ಹೊಂದಿರುವೆ! ನಮ್ಮ ಬದುಕಿನ ಪಾಲುದಾರನಾಗಿ ನಿನ್ನ ಈ ಅಣ್ಣ, ನಿನ್ನ ಆ ಗಂಡ ಉದ್ದಕ್ಕೂ ಇದ್ದಾರೆ. ನಾವು ಭೂಮಿ ಮೇಲೆ ನಡೆಸಿರುವ ಎಲ್ಲ ಕ್ರೌರ್ಯದ ಭಾಗಿಗಳಾಗಿದ್ದಾರೆ. ಆ ಕ್ರೌರ್ಯದ ಫಲವಾಗಿ ಬಂದ ಫಸಲನ್ನು ಹಂಚಿಕೊಂಡಿದ್ದಾರೆ"- ಎಂದನು. ಅವನ ಕಣ್ಣುಗಳು ಶೂನ್ಯದಲ್ಲಿ ನೆಟ್ಟಂತೆ ತೋರುತ್ತಿದ್ದವು. ಅವನ ಮನಸ್ಸಿನಲ್ಲಿ ಐದು ವರ್ಷಗಳ ಹಿಂದೆ ತೆಂಗಿನ ಕಲ್ಲು ಅರಣ್ಯ ವಲಯಕ್ಕೆ ಹೊಂದಿಕೊಂಡಂತೆ ಇರುವ ಅತ್ತಿಹಳ್ಳಿಯ ರೈತ ಹೆತ್ತೇಗೌಡನ ದೇಹ ಧಗಧಗಿಸಿ ಬೇಯುತ್ತಿರುವ ಚಿತ್ರ ಮೂಡಿತು.

ಪಿ.ಕೆ. ಮತ್ತು ಮುನಿರಾಮಿರೆಡ್ಡಿಯ ಸಹಭಾಗಿತ್ವದ ಗಣಿಉದ್ಯಮ ತೆಂಗಿನ ಕಲ್ಲು ಅರಣ್ಯವಲಯದ ಗ್ರಾಮಗಳ ಆಸುಪಾಸು ನಿರಾತಂಕವಾಗಿ ನಡೆದಿತ್ತು. ಗ್ರಾನೈಟ್ ಉದ್ಯಮದಲ್ಲಿ ಉತ್ತಮ ಗುಣಮಟ್ಟದ ಕಲ್ಲಿಗೆ ವಿಶೇಷ ಬೇಡಿಕೆಯಿತ್ತು. ಉತ್ತರ ಇಂಡಿಯಾದ ಶ್ರೀಮಂತರು, ಶ್ರೀಮಂತ ಅಧಿಕಾರಿಗಳು ರಾಜಸ್ಥಾನದ ಪಿಂಕ್ ಕಲ್ಲುಗಳಿಗಿಂತ, ಮಾರ್ಬಲ್‌ಗಳಿಗಿಂತ ಕರ್ನಾಟಕದ ಕರಿಕಲ್ಲುಗಳಿಗೆ ಮುಗಿ ಬೀಳುತ್ತಿದ್ದರು. ಅದಕ್ಕೆ ಕಾರಣವೂ ಇತ್ತು: ತಲೆ ತಲಾಂತರದಿಂದ ಅಮೃತಶಿಲೆಯನ್ನು ನೋಡಿದ್ದ ಅವರಿಗೆ ಚೇಂಜ್ ಬೇಕಿತ್ತು. ಅದರ ಜೊತೆಗೆ ಉತ್ತರ ದೇಶದಲ್ಲಿ ಇತ್ತೀಚೆಗೆ ಮಾರ್ಬಲ್ಲಿನ ಮೇಲೆ ಒಂದು ಬಗೆಯ ಕಪ್ಪುಕೊಳೆ ಪದೆ ಪದೆ ಲೇಪನವಾಗುತ್ತಿತ್ತು. ಪರಿಸರವಾದಿಗಳು ಕೈಗಾರಿಕೆಗಳು ಇದಕ್ಕೆ ಕಾರಣವೆಂದು ದೂರುತ್ತಿದ್ದರು. ವಾತಾವರಣದಲ್ಲಿ ಹೊಗೆಯಂಥ ರಾಸಾಯನಿಕ ಮಿಶ್ರಣವೊಂದು ಗಾಳಿಯಲ್ಲಿ ಸೇರಿದೆ ; ಇದು ಅದರ

ಪರಿಣಾಮವೆಂದು ಕೆಲವರು ವಾದಿಸುತ್ತಿದ್ದರು. ಇನ್ನೂ ಕೆಲವು ಕಟ್ಟಾ ದೇಶ ಪ್ರೇಮಿಗಳು ಇದು ಪಾಕಿಸ್ಥಾನಿಗಳು ಕೆಮಿಕಲ್‌ವಾರ್ ಮಾಡುವ ಮೊದಲ ಹಂತವೆಂದು ಹೇಳಿ ಹೆದರಿಕೆ ಹುಟ್ಟಿಸುತ್ತಿದ್ದರು. ಅದಕ್ಕಿಂತ ಮುಖ್ಯವಾಗಿ ರಾಜಸ್ಥಾನದ ಕಲ್ಲುಗಳ ಗುಣಮಟ್ಟ ಇಳಿಮುಖವಾಗತೊಡಗಿತ್ತು. ಪಾಲಿಷ್ ಮಾಡುವಾಗ ಸಣ್ಣ ಸಣ್ಣ ಚೆಕ್ಕೆಗಳು ಎದ್ದೇಳುವುದು ; ಶುದ್ಧ ಹಾಲಿನಂಥ ಶಿಲೆ ಅಪರೂಪವಾಗುತ್ತಿರುವುದು ; ಕಲ್ಲಿನ ಪದರಗಳು, ಎಳೆಗಳು ಎದ್ದು ಕಾಣುವುದು ಸಾಮಾನ್ಯವಾಗಿತ್ತು.

ಕರ್ನಾಟಕದ ತೆಂಗಿನ ಕಲ್ಲು ಅರಣ್ಯವಲಯದ ಆಸುಪಾಸಿನಲ್ಲಿ ದೊರೆಯುವ ಬ್ಲಾಕ್ ಬ್ಯೂಟಿಸ್ಟೋನ್ ಎಂದೇ ಗುರುತಿಸಲ್ಪಡುವ ಕರಿಕಲ್ಲಿಗೆ ಸ್ಪಾಟ್‌ಲೆಸ್ ಕ್ರಿಸ್ಟಲ್ ಬ್ಲಾಕಿ ಎಂದೂ ಕರೆಯುತ್ತಿದ್ದರು. ಉಕ್ಕಿಗಿಂತ ಕಠಿಣವಾದ ಈ ಕಲ್ಲು ಯಾವ ಹವಾಮಾನ, ಕಲುಷಿತ ವಾತಾವರಣಕ್ಕೂ ಜಗ್ಗುತ್ತಿರಲಿಲ್ಲ. ಜೊತೆಗೆ ಅದರ ಪಾಲಿಷ್ ಮಂಕಾಗದೆ, ಮಿರಮಿರನೆ ಸಹಾ ಮಿಂಚುತ್ತಿತ್ತು.

ಮುನಿರಾಮಿರೆಡ್ಡಿ ಈ ಕಲ್ಲುಗಳಿಗೆ ಗಲ್ಫ್ ದೇಶದ ಗ್ರಾಹಕರನ್ನು ಸೆಳೆದಿದ್ದ. ಅಲ್ಲಿನ ಮರಳುಗಾಡಿನ ಹವೆಗೆ ಈ ಕಲ್ಲು ಹೊಂದಿಕೊಳ್ಳುತ್ತಿತ್ತು. ಎತ್ತ ನೋಡಿದರೂ ಬೆಳ್ಳಗೆ ಎದ್ದು ಕಾಣುವ ಮರಳು ಗಾಡಿನ ಆವರಣದಲ್ಲಿ ಕರಿಕಲ್ಲಿನ ಹೊರಮೈನಿಂದ ಮಿಂಚುತ್ತಿದ್ದ ಅಲ್ಲಿನ ಕಟ್ಟಡಗಳಿಗೆ ವಿಶೇಷ ಮೊರಗು ಬರುತ್ತಿತ್ತು. ರಾತ್ರಿಯ ಹೊತ್ತು ಬೆಚ್ಚಗೂ ಹಗಲು ಹೊತ್ತು ಅತ್ಯಂತ ತಣ್ಣಗೂ ಕರಿಕಲ್ಲುಗಳು ಹವಾನಿಯಂತ್ರಣ ಮಾಡುತ್ತಿದ್ದವು. ಆದ್ದರಿಂದ ಗಲ್ಫ್‌ನ ಶೇಕ್‌ಗಳು ಸ್ವಲ್ಪ ದುಭಾರಿಯಾದರೂ ಈ ಸ್ಪಾಟ್‌ಲೆಸ್ ಕ್ರಿಸ್ಟಲ್ ಬ್ಲಾಕಿಗಳನ್ನು ಕೊಳ್ಳಬಯಸುತ್ತಿದ್ದರು.

ತೆಂಗಿನ ಕಲ್ಲು ಅರಣ್ಯ ವಲಯದ ಸುತ್ತಮುತ್ತ ಭೂಮಿಯ ಮೇಲೆ ಎದ್ದು ನಿಂತು, ತಮ್ಮ ಘನ ಭೀಮಕಾರದಿಂದ ವಿಶೇಷವಾಗಿ ತೋರುತ್ತಿದ್ದ ಬೃಹದಾಕಾರದ ಶಿಲೆಗಳು ಭೂಮಿಯ ಒಳಗಿರುವ ಕಲ್ಲುಗಳ ಅಲ್ಪ ಸಂಕೇತಗಳಾಗಿ ಮಾತ್ರವಿದ್ದವು. ಭೂಮಿಯ ಒಳಗೆ ಸಾವಿರಾರು ಎಕರೆ ವಿಸ್ತೀರ್ಣದವರೆಗೂ ಹಬ್ಬಿ, ಅರೆಯಾಗಿ ಶೀತಲವಾಗಿ ಹಾಸಿಕೊಂಡು ಮಲಗಿದ್ದವು. ಅವುಗಳ ಮೇಲೆ ಶೇಖರ ಕೊಂಡಿದ್ದ ಸುಮಾರು ಒಂದು ಅಡಿಯಿಂದ ಇಪ್ಪತ್ತು-ಮೂವತ್ತು ಅಡಿವರೆಗಿನ ಮಣ್ಣು ಅತ್ಯಂತ ಫಲವತ್ತಾಗಿ ಆ ಭಾಗದ ಜನರ ಮುಖ್ಯ ಅಹಾರಗಳಾದ ರಾಗಿ, ಜೋಳ, ಅವರೆ, ತೊಗರಿ, ಹಲಸಂದೆ, ಎಳ್ಳು, ಹುಚ್ಚೆಳ್ಳು, ಕಡಲೆಕಾಯಿಗಳನ್ನು ಬೆಳೆಯಲು ಸಹಕಾರಿಯಾಗಿತ್ತು. ಕಲ್ಲುಮುಳ್ಳುಗಳ ಈ ಪ್ರದೇಶಗಳಲ್ಲಿ ಮಾವು ವಿಶೇಷವಾಗಿ ಬೆಳೆಯುತ್ತಿತ್ತು. ನೂರಾರು ಪ್ರಭೇದದ ಹುಲ್ಲು, ಗಿಡಮರಗಳು ಒಂದು ವಿಚಿತ್ರ ಸೊಬಗನ್ನು ಆ ಪ್ರದೇಶಕ್ಕೆ ತಂದುಕೊಡುತ್ತಿದ್ದವು.

ಪೀಕೆ ಮತ್ತು ಮುನಿರಾಮಿರೆಡ್ಡಿ ಗಣಿ ಉದ್ಯಮ ಪ್ರಾರಂಭಮಾಡಿದಾಗ ಕಲ್ಲು ಮೊರಡಿಗಳಿಂದ ಕೂಡಿದ ಜಮೀನನ್ನು ಯಾರೂ ಕೇಳುವರಿರಲಿಲ್ಲ. ರೈತರು ಬೇಸಾಯ ಮಾಡದೆ, ಅವನ್ನು ತಕ್ಕಲು ಎಂದು ಕರೆದು ತಮ್ಮ ದನಕರುಗಳನ್ನು ಮೇಯಿಸಲು ಬಿಡುತ್ತಿದ್ದರು. ಅಂದು ಒಂದು

ಎಕರೆಗೆ ಹತ್ತು ಹದಿನೈದು ಸಾವಿರ ರೂಪಾಯಿಗಳಿಗೆ ಆ ಜಮೀನನ್ನು ಯಾರೂ ಕೇಳುವವರಿರಲಿಲ್ಲ. ಅಷ್ಟೇ ಅಲ್ಲ. ಅಷ್ಟೋ ಇಷ್ಟೋ ಬೇಸಾಯ ಯೋಗ್ಯವಾದ ಕೆಬ್ಬೇ ಭೂಮಿಗೂ ಇಪ್ಪತ್ತೈದರಿಂದ ಮೂವತ್ತೈದು ಸಾವಿರ ರೂಪಾಯಿ ಸಿಗುತ್ತಿದ್ದುದು ಹೆಚ್ಚೇ ಆಗಿತ್ತು. ಅಂಥಾದ್ದರಲ್ಲಿ, ಪೀಕೆ ಗಣಿಗಾರಿಕೆಗೆ ಯೋಗ್ಯವಾದ ಜಮೀನನ್ನು ಗುರುತಿಸಿ, ಮಾರುಕಟ್ಟೆಯ ಬೆಲೆಗೆ ದುಪ್ಪಟ್ಟು ಹಣದ ಆಸೆ ತೋರಿಸಿ ಕ್ರಯಿಸಲು ಪ್ರಾರಂಭಿಸಿದ. ತನ್ನ ತಮ್ಮ ಮಹೇಶ, ಅವನ ಹೆಂಡತಿ, ಅವನ ಅಪ್ಪ-ಅಮ್ಮನ ಹೆಸರಿನಲ್ಲಿ ನೂರಾರು ಎಕರೆ ಜಮೀನು ಅವನ ಕೈವಶವಾಯಿತು.

ಪೀಕೆ ಕೆಲಸಕ್ಕೆ ಬಾರದ ತಕ್ಕಲು ಜಮೀನನ್ನು ಖರೀದಿಸುತ್ತಿರುವುದನ್ನು ನೋಡಿ ರೈತರು ನಗಲಾರಂಭಿಸಿದರು. ಆ ಜಮೀನಿನಿಂದ ಏನಾಗುತ್ತದೆ; ಅಲ್ಲಿರುವುದು ಬರೀ ಕಲ್ಲು ! ಜಲ್ಲಿ ಮಾಡಿ ಮಾರಬೇಕಷ್ಟೆ ಎಂದು ಕೆಲವರು ತಮಾಷೆ ಮಾಡಿದರು. ಅವನೇನಾದರೂ ಮಾಡಿಕೊಳ್ಳಲಿ, ತಮ್ಮ ಜೀವಮಾನದಲ್ಲೇ ಆ ಜಮೀನಿನಿಂದ ಒಂದು ನಯಾಪೈಸೆ ಸಂಪಾದನೆ ಮಾಡಿಲ್ಲ; ಮುಂದೆಯೂ ಆಗೋಲ್ಲ. ಈಗ ಪೀಕೆ ಬಂಪರ್ ಬೆಲೆ ಕೊಡ್ತಾ ಇದ್ದಾನೆ. ಯಾಕೆ ಮಾರಬಾರದು ? ಎಂದು ಅಂದುಕೊಳ್ಳುವವರೂ ಇದ್ದರು. ಒಂದೆರಡು ಮೂರು ಎಕರೆ ಒಟ್ಟಿಗೆ ಮಾರಿದರೆ ಒಟ್ಟಿಗೆ ಲಕ್ಷದ ಮೇಲೆ ದುಡ್ಡು ಬರುತ್ತಿತ್ತು. ಲಕ್ಷ ಕಂಡ ಜನ ರೈತಾಪಿ ಸಮುದಾಯದಲ್ಲಿ ಅತ್ಯಂತ ಕಡಿಮೆ ಇದ್ದರು. ಕೆಲಸಕ್ಕೆ ಬಾರದ ಕರಾಬು ಜಮೀನನ್ನು ಮಾರಿದರೆ ಅಷ್ಟು ಹಣ ಬರುತ್ತದೆ ಎಂಬ ಕಲ್ಪನೆಯೇ ಕೆಲವರಿಗೆ ಥ್ರಿಲ್ ಕೊಡುತ್ತಿತ್ತು. ಕೆಲವೆಡೆ ಒಂದೆರಡು ಎಕರೆ ಪ್ರದೇಶದಲ್ಲಿ ಗಣಿಗಾರಿಕೆಯನ್ನು ಆರಂಭಿಸಿದರೆ, ಉತ್ತಮ ಕಲ್ಲಿನ ಹಾಸು ಅಕ್ಕಪಕ್ಕದ ಜಮೀನಿಗೂ ವಿಸ್ತರಿಸಿರುವುದು ಕಂಡುಬರುತ್ತಿತ್ತು. ಅಂಥ ಸಂದರ್ಭದಲ್ಲಿ ಅಕ್ಕಪಕ್ಕದ ಜಮೀನನ್ನು ಖರೀದಿಸುವುದು ಅನಿವಾರ್ಯವಾಗುತ್ತಿತ್ತು. ಆಗ ಬೆಲೆ ಸ್ವಲ್ಪ ಜಾಸ್ತಿಯಾಗುತ್ತಿತ್ತು. ಅಕ್ಕಪಕ್ಕದ ರೈತರಲ್ಲಿ ಕೆಲವರು ಜಮೀನು ಮಾರಲು ಒಪ್ಪುತ್ತಿದ್ದರು; ಕೆಲವರು ಒಪ್ಪುತ್ತಿರಲಿಲ್ಲ. ಒಪ್ಪದ ರೈತರನ್ನು ಮೊದಲು ಒಲಿಸಿಕೊಳ್ಳುವ ಪ್ರಯತ್ನ ನಡೆಯುತ್ತಿತ್ತು. ಹೆಚ್ಚು ಹಣದ ಆಮಿಷ ತೋರಲಾಗುತ್ತಿತ್ತು. ಇದಕ್ಕೂ ಜಗ್ಗದ ಅಲ್ಲೊಬ್ಬ ಇಲ್ಲೊಬ್ಬ ರೈತ ಇದ್ದೇ ಇರುತ್ತಿದ್ದ. ಆಗ ಜಮೀನು ಮಾರುವಂತೆ ಅವನಿಗೆ ದಮ್ಕಿ ಹಾಕಲಾಗುತ್ತಿತ್ತು.

ಗಣಿಗಾರಿಕೆಯ ಕಾರ್ಮಿಕರನ್ನು ಹದ್ದುಬಸ್ತಿನಲ್ಲಿಡಲು, ತಮ್ಮ ಅಪೇಕ್ಷೆಗೆ ಒಪ್ಪದ ರೈತರನ್ನು ಒಪ್ಪಿಸುವ ದಮ್ಕಿ ಕೆಲಸ ಮಾಡಲು ಪೀಕೆ ಒಂದು ಅನಧಿಕೃತ ದಮ್ಕಿ ಪಡೆಯನ್ನು ಸೃಷ್ಟಿಮಾಡಿದ. ಸುತ್ತ ಮುತ್ತಲ ಹಳ್ಳಿಗಳಲ್ಲಿ ಉಂಡಾಡಿಗಳಾಗಿದ್ದುಕೊಂಡು, ತರಲೆ ಮಾಡಿಕೊಂಡು ಅಲೆದಾಡುತಿದ್ದ ಕೆಲವು ಪೋಕರಿಗಳನ್ನು ಕಲೆಹಾಕಿ ದಮ್ಕಿ ಕೆಲಸಕ್ಕೆ ನಿಯೋಜಿಸಲಾಯಿತು. ಅಮಾಯಕರನ್ನು ಹೆದರಿಸುವ ಕೆಲಸದಲ್ಲಿ ಅವರಿಗೆ ಆನಂದವುಂಟಾಗುತ್ತಿತ್ತು. ಜೊತೆಗೆ ಆ ಕೆಲಸಕ್ಕೆ ಸುಲಭವಾಗಿ ಹಣ ದೊರೆಯುತ್ತಿತ್ತು. ತಮ್ಮ ಸುತ್ತಮುತ್ತಲ ಹಳ್ಳಿಗಳಲ್ಲಿ 'ಇವರು ಪೀಕೆ ಬಲಗೈ ಬಂಟರು' ಎಂದು ಹೆಸರಾಗಿ ಒಂದು ಬಗೆಯ ಭಯ ಮಿಶ್ರಿತ ಗೌರವಕ್ಕೂ ಪಾತ್ರರಾದರು. 'ಇವರ ಸಹವಾಸ ನಮಗ್ಯಾಕೆ' ಎಂದು ಜನರು ದೂರಸರಿದು ಹೋಗುವುದನ್ನೇ ಇವರು ಗೌರವವೆಂದು ಭಾವಿಸಿದರು. ದಿನ ಕಳೆದಂತೆ

ಇವರು 'ಪೀಕೆ ಪಡೆ' ಎಂದೇ ಹೆಸರಾಗಿ, ಪೀಕೆ ಹೇಳುತ್ತಿದ್ದ ಕೆಲಸಗಳ ಜೊತೆಗೆ ಇನ್ನೂ ಹತ್ತಾರು ಹಲ್ಕಾ ಕೆಲಸಗಳನ್ನು ಮಾಡಿ ಅತ್ಯಂತ ಜನಪ್ರಿಯರಾದರು !

ಇಂಥ ಸಂದರ್ಭದಲ್ಲೇ ಹೆತ್ತೇಗೌಡನ ದಹನವಾಗಿದ್ದು.

ಪೀಕೆ ಅತ್ತಿಹಳ್ಳಿಯ ರೈತ ಹನುಮೇಗೌಡನ ಐದು ಎಕರೆ ಜಮೀನನ್ನು ಖರೀದಿಸಿ ನೆಲವನ್ನು ಕೊರೆಸಿ, ಕರಿಕಲ್ಲಿನ ಲಾಗ್‌ಗಳನ್ನು ಹೊರತೆಗೆಯುತ್ತಿದ್ದ. ಒಂದು ದಿನ ರಾಮಚಂದ್ರ ರೆಡ್ಡಿ ಮತ್ತು ಮಹೇಶ ಕಲ್ಲಿನ ಲಾಗ್‌ಗಳನ್ನು ಲಾರಿಗಳಿಗೆ ಲೋಡ್ ಮಾಡುತ್ತಿದ್ದಾಗ ಕಲ್ಲು ಸ್ವಲ್ಪ ಭಿನ್ನವಾಗಿ ಕಂಡಿತು. ಹನುಮೇಗೌಡನ ಜಮೀನು ಪೂರ್ವ ಪಶ್ಚಿಮಕ್ಕೆ ಚಾಚಿಕೊಂಡಿತ್ತು. ಹೊರ ಭೂಮಿಯ ಮೇಲ್ಮೈನಿಂದ ಐದಾರು ಅಡಿಯಿಂದ ಹದಿನೈದು ಅಡಿಯವರೆಗೆ ಸುಮಾರು ಹತ್ತು-ಹನ್ನೆರಡು ಅಡಿ ದಪ್ಪದ ಅರೆಯಾಕಾರದಲ್ಲಿ ಕಲ್ಲು ದಕ್ಷಿಣಕ್ಕೆ ಚಾಚಿಕೊಂಡು ಸಾಗಿತ್ತು. ಅದು ದಕ್ಷಿಣಕ್ಕೆ ಸಾಗಿದಂತೆಲ್ಲಾ ಅರೆ ದಪ್ಪವಾಗುತ್ತಾ, ಕಪ್ಪುಶಿಲೆ ಬಣ್ಣ ಬದಲಿಸುತ್ತಿರುವಂತೆ ಭಾಸವಾಗುತ್ತಿತ್ತು. ಕಪ್ಪು ಕಲ್ಲಿಗಿಂತ ಭಿನ್ನವಾದ ಕಲ್ಲು ! ರೆಡ್ಡಿ ತಲೆ ಕರೆದುಕೊಂಡು ಕಲ್ಲನ್ನು ಸೂಕ್ಷ್ಮವಾಗಿ ಗಮನಿಸಿದ. ಕಲ್ಲು ಕಪ್ಪು ಬಣ್ಣದಿಂದ ಕಡುಪಚ್ಚೆ ವರ್ಣಕ್ಕೆ ಪರಿವರ್ತಿತವಾಗುತ್ತಾ ಸಾಗುತ್ತಿರುವುದು ಅವನ ಸೂಕ್ಷ್ಮದೃಷ್ಟಿಗೆ ಬಿದ್ದಿತು.

ಅಂದು ರಾತ್ರಿಯೇ ಅವನು ಶರಣ್‌ಗೆ ಬರುವಂತೆ ತಿಳಿಸಿ ಫೋನ್ ಮಾಡಿದ. ಶರಣ್ ಸೂಕ್ತ ಸಲಕರಣೆಗಳ ಜೊತೆ ಅಂದು ಬೆಳಿಗ್ಗೆ ಸೈಟ್‌ಗೆ ಹಾಜರಾದ.

ಹನುಮೇಗೌಡನ ಜಮೀನಿನ ದಕ್ಷಿಣ ತುದಿಯಲ್ಲಿ ದೊರೆತ ಕಲ್ಲನ್ನು ವಿಶೇಷವಾಗಿ ಪರೀಕ್ಷೆಗೊಳಪಡಿಸಿದ. ಅದು ಕಡುಪಚ್ಚೆ ಕಲ್ಲು ! ತುಂಬಾ ಬೆಲೆಬಾಳುವ, ಲಕ್ಷಾಂತರ ಮಂದಿಯಲ್ಲಿ ಅದೃಷ್ಟವನ್ನು ತೆರೆಯುವ ಕಲ್ಲೆಂದೇ ನಂಬಿಕೆ ಹುಟ್ಟಿಸಿರುವ ಕಲ್ಲು ! ಶರಣ್ ಗಣಿಯಲ್ಲಿ ಕಲ್ಲು ಸಾಗಿರುವ ರೀತಿ, ಕಲ್ಲು ಪಚ್ಚೆ ವರ್ಣಕ್ಕೆ ತಿರುಗಿರುವ ರೀತಿಗಳನ್ನು ಅಧ್ಯಯನ ಮಾಡಿದ. ಹನುಮೇಗೌಡನ ಜಮೀನಿನ ದಕ್ಷಿಣ ಭಾಗಕ್ಕೆ ಅರ್ಧ ಎಕರೆ ಇರುವಂತೆಯೇ ಕಲ್ಲಿನ ವರ್ಣ ಸಂಯೋಜನೆ ರೂಪಾಂತರಗೊಂಡಿರುವುದನ್ನು ಕಂಡುಹಿಡಿದ. ಈ ಪಚ್ಚೆ ವರ್ಣದ ಅರೆ ಗಾತ್ರ ಮತ್ತು ಎತ್ತರದಲ್ಲಿ ಮುಂದೆ ಸರಿದಂತೆಲ್ಲಾ ವಿಸ್ತಾರವಾಗಿ ದಕ್ಷಿಣಕ್ಕೆ ಸರಿದಿರುವುದು ಅವನ ಗಮನಕ್ಕೆ ಬಂತು. ಶರಣ್ ಹನುಮೇಗೌಡನ ಜಮೀನಿನ ದಕ್ಷಿಣ ದಿಕ್ಕಿನತ್ತ ನೋಡಿದ. ಕಲ್ಲು ಮೊರಡಿಗಳಿಲ್ಲದ ಸಮತಟ್ಟಾದ ಹೊಲ. ಸುಮಾರು ಹತ್ತು ಎಕರೆಯಷ್ಟು ಉತ್ತರ-ದಕ್ಷಿಣಕ್ಕೆ ಹಬ್ಬಿದ ಆ ಹೊಲದ ಅಂತರಾಳದಲ್ಲಿ ಕೋಟ್ಯಾಂತರ ರೂಪಾಯಿ ಬೆಲೆಬಾಳುವ ಅಮೂಲ್ಯ ಪಚ್ಚೆ ಶಿಲೆ ಗುಪ್ತನಿಧಿಯಂತೆ ಅವಿತು ಕೂತಿದೆ !.

ಅಂದು ಮಧ್ಯಾಹ್ನ ಪೀಕೆಯ ತೋಟದ ಮನೆಯಲ್ಲಿ ಶರಣ್, ರೆಡ್ಡಿ ಮತ್ತು ಮಹೇಶ್ ಕೋಲ್ಡ್ ಬಿಯರ್ ಹೀರುತ್ತಾ ಸಮಾಲೋಚನೆಯಲ್ಲಿ ತೊಡಗಿದರು. ಶರಣ್ ಉದ್ವಿಗ್ನಗೊಂಡಿದ್ದ. ಅವನು ಪಚ್ಚೆಕಲ್ಲನ್ನು ಮೊದಲಬಾರಿಗೆ ಗುರುತಿಸಿದ್ದ. ಜಿಯಾಲಜಿಯ ವಿದ್ಯಾರ್ಥಿಯಾದ ಅವನಿಗೆ ಅದರ ಬೆಲೆ ಗೊತ್ತಿತ್ತು. ಮಹೇಶ್ ಮತ್ತು ರೆಡ್ಡಿಗೆ ಅದರ ಮೌಲ್ಯದ ನೆನಪಾಗಿ, ಅದನ್ನು ಕಲ್ಪಿಸಕೊಂಡು ಒಳಗೊಳಗೆ ಥ್ರಿಲ್ ಆಗುತ್ತಿದ್ದರು. ವ್ಯಾಪಾರಿ

ಬುದ್ಧಿಯ ರೆಡ್ಡಿ "ಆ ಭೂಮಿಯಲ್ಲಿ ಆ ಕಲ್ಲು ಇದೆಯಾಂತ ಮೊದಲು ಕನ್‌ಫರ್ಮ್ ಮಾಡಿಕೋಬೇಕು. ಅನಂತರ ಆ ಜಮೀನನ್ನು ಖರೀದಿಸುವ ವಿಷಯ" ಎಂದು ಸ್ಪಷ್ಟಪಡಿಸಿದ. ಜಮೀನನ್ನು ನಿಜವಾಗಿ ಖರೀದಿಸಬೇಕಾಗಿದ್ದ ಮಹೇಶ ಅವನ ಮಾತಿಗೆ"ಹೌದೌದು" ಎಂದು ತಲೆಯಾಡಿಸಿದ. ರೆಡ್ಡಿ ತನ್ನ ಮಾತು ಮುಂದುವರಿಸಿ "ಈಗ ನಾವು ಹಗಲಲ್ಲಿ ಹೋಗಿ ಆ ಜಮೀನಿನಲ್ಲಿ ಡಿಗ್ ಮಾಡಿದರೆ, ಆ ಜಮೀನಿನವನಿಗೆ ಗೊತ್ತಾಗುತ್ತೆ. ಏಕೆ ! ಏನು ? ಅಂತ ಪ್ರಶ್ನೆ ಮಾಡುತ್ತಾನೆ. ಅದರಲ್ಲಿ ಅಮೂಲ್ಯ ಕಲ್ಲಿದೆ ಅಂತ ಗೊತ್ತಾದರೆ ಅಟ್ಟದ ಮೇಲೆ ಕೂತ್ಕೋತಾನೆ. ಇಂದು ರಾತ್ರಿ ಆ ಜಮೀನಿನ ನಾಲ್ಕು ಜಾಗಗಳಲ್ಲಿ ಡಿಗ್ ಮಾಡೋಣ. ಸ್ಯಾಂಪಲ್ ತೆಗೆದು ಪರೀಕ್ಷೆ ಮಾಡೋಣ. ಅನಂತರ ಆ ರೈತನ ಜೊತೆ ವ್ಯವಹಾರ !" ರೆಡ್ಡಿಯ ಆಲೋಚನೆ ಸರಿಯೆಂದು ಎಲ್ಲರೂ ತೀರ್ಮಾನಕ್ಕೆ ಬಂದರು.

ಅವರ ಬಳಿ ಅತ್ಯಾಧುನಿಕ ಕೊರೆಯುವ ಯಂತ್ರಗಳಿದ್ದವು. ಮಾರ್ಚಿ ತಿಂಗಳು. ಬೆಳೆ ಇರಲಿಲ್ಲ. ಜಮೀನು ಬಿಸಲಿಗೆ ಒಣಗಿ ತರಗುಟ್ಟುತ್ತಿತ್ತು. ಅಂದು ರಾತ್ರಿ ಅರ್ಧ ಅಡಿ ವ್ಯಾಸದ ಬೋರ್ ಹೊಡೆದು, ಕಲ್ಲು ಸಿಗುವವರೆಗೆ ಕೊರೆದರು. ನಾಲ್ಕಾರು ಕಲ್ಲಿನ ಸ್ಯಾಂಪಲ್‌ಗಳನ್ನು ಭೂಮಿಯಿಂದ ಕೊರೆದು ಮೇಲೆತ್ತಿದರು. ಆ ಸ್ಯಾಂಪಲ್ಲುಗಳನ್ನು ತನ್ನ ಮುಂದಿಟ್ಟುಕೊಂಡು ಅವನ್ನು ನೋಡುತ್ತಾ ಶರಣ್ ಪರವಶನಾದ. ಸಲಕರಣೆಯೊಂದರ ಸಹಾಯದಿಂದ ಅವನ್ನು ಒಂದು ಮಗ್ಗುಲಲ್ಲಿ ಉಜ್ಜಿ ಉಜ್ಜಿ ನೋಡಿ ಅದರ ಅಮೂಲ್ಯತೆಯ ಬಗ್ಗೆ ರೋಮಾಂಚನಗೊಂಡ.

ಅದು ಅಪರೂಪದ ಪಚ್ಚೆ ಶಿಲೆಯಾಗಿತ್ತು. ತೆಳು ಟೈಲ್ಸ್‌ಗಳನ್ನಾಗಿ ಕೊಯ್ದು ಪಾಲೀಶ್ ಕೊಟ್ಟರೆ ಗಾಜಿನ ರೀತಿಯಲ್ಲಿ ಮಂದ ಪಾರದರ್ಶಿಕತ್ವವನ್ನು ಪಡೆಯುತ್ತಿತ್ತು. ಮಣಿಗಳ ರೂಪದಲ್ಲಿ ಅದನ್ನು ಪರಿವರ್ತಿಸಬಹುದಾಗಿತ್ತು. ಅಮೂಲ್ಯ ಶಕ್ತಿಮಣಿಗಳೆಂದು ಅದನ್ನು ಮಾರಾಟ ಮಾಡಬಹುದಿತ್ತು. ಅದನ್ನು 'ಹಸಿರು ಕಲ್ಲು' ಎಂದು ಸರಳವಾಗಿ ಕರೆಯುವುದು ತಪ್ಪಾಗುತ್ತಿತ್ತು. ಕಪ್ಪು ಕಲ್ಲಿನ ದುಪ್ಪಟ್ಟು ಹಣ ಸಂಪಾದನೆ ಮಾಡುವ ನಿಶಾನೆಗಳಾಗಿ ಆ ಮಾದರಿಗಳು ಕಾಣುತ್ತಿದ್ದವು. ಅವನ್ನು ಕಂಡು ರೋಮಾಂಚನಗೊಂಡಿದ್ದ ಶರಣ್ ತಡ ಮಾಡದೆ ಅಲ್ಲಿ ಗಣಿಗಾರಿಕೆಯನ್ನು ಆರಂಭಿಸಬೇಕೆಂದು ಮಹೇಶನನ್ನು, ಅದಕ್ಕೆ ಗ್ರಾಹಕರನ್ನು ಕುದುರಿಸಬೇಕೆಂದು ರೆಡ್ಡಿಯನ್ನು ಪ್ರೇರೇಪಿಸಿದ.

ಅಂದು ಬೆಳಿಗ್ಗೆಯೇ ಮೂವರು ಬೆಂಗಳೂರಿಗೆ ಹೊರಟರು. ಶರಣ್ ತನ್ನ ಕಛೇರಿಗೆ ಹೋದ. ಪೀಕೆ, ಮುನಿರಾಮಿರೆಡ್ಡಿ, ರಾಮಚಂದ್ರರೆಡ್ಡಿ ಮತ್ತು ಮಹೇಶ ಸಮಾಲೋಚನೆಗೆ ಕುಳಿತರು. ಅಲ್ಲಿ ಸಿಗಬಹುದಾದ ಕಲ್ಲಿನ ಪ್ರಮಾಣ, ಗಲ್ಫ್ ಮಾರುಕಟ್ಟೆಯಲ್ಲಿ ಅದಕ್ಕೆ ಸಿಗುವ ಬೆಲೆ, ಅದರಿಂದ ತಮಗಾಗುವ ಲಾಭ - ಎಲ್ಲವನ್ನು ಲೆಕ್ಕಹಾಕಿ ಖುಷಿಪಟ್ಟರು. ಪೀಕೆ ತನ್ನ ತಮ್ಮನನ್ನು ಕುರಿತು " ಯಾರದು ಆ ಜಮೀನು?" ಎಂದು ಪ್ರಶ್ನಿಸಿದ.

"ಅತ್ತಿಹಳ್ಳಿ ಹೆತ್ತೇಗೌಡನದು" ಎಂದುತ್ತರಿಸಿದ.

"ಹೆಂಗೆ ಪಾರ್ಟಿ ?"

"ಅದೆ ವಸಿ ಸಮಸ್ಯೆ ಕಣಣ್ಣ. ಆಸಾಮಿ ವಸಿ ತರ್ಲೇನೆ. ಹಸಿರು ಟವಲ್ಲು. ಚಳವಳಿ ಗಿಳುವಳಿ ಅಂತ ಓಡಾಡ್ತಾನೆ. ಜಮೀನು ಮಾರಾಟ ಮಾಡೋಕೆ ಒಪ್ತಾನೋ ಇಲ್ಲವೋ ?" ಎಂದು ಅನುಮಾನಿಸಿದ ಮಹೇಶ.

"ಮನೆ ಕಡೆ ಹೆಂಗೆ ? ಸೌಂಡ್ ಆಗಿ ಅವನೋ ?"

"ಪರವಾಗಿಲ್ಲ ಕಣ್ಣಣ್ಣ. ಹೊಟ್ಟೆಬಟ್ಟೆಗೆ ತೊಂದರೆಯಿಲ್ಲ. ಒಂದೈದು ಎಕರೆ ಮಾವಿನ ತೋಪು, ಒಂದೆರಡು ಎಕರೆ ತೆಂಗು ಅದೆ. ಆಗ್ಲೆ ಒಳ್ಳೆ ಫಲ ಬತ್ತ ಅದೆ. ರಾಗಿಗೆ ಈಗ ನಾವು ನೋಡ್ತಿರೋ ಜಮೀನೆ ಮುಖ್ಯ ಆಧಾರ"

"ಒಂದ್ಕೆಲಸ ಮಾಡು, ಮಹೇಶ, ನಾಳಿದ್ದು ನಾನು ಊರಿಗೆ ಬತ್ತೀನಿ. ಅವನನ್ನು ತೋಟದ ಮನೆಗೆ ಬರಹೇಳು. ಅವನ ಜೊತೆ ಮಾತಾಡೋಣ. ಒಳ್ಳೇ ದುಡ್ಡು ಕೊಟ್ರೆ ಯಾಕೆ ಮಾರೋಲ್ಲ ? ಪ್ರತಿಯೊಂದಕ್ಕೂ ಒಂದು ರೇಟು ಅಂತ ಇದ್ದೇ ಇರ್ತದೆ. ಅದು ಬಂದ್ರೆ ಮಾರ್ತಾನೆ"- ಎಂದು ಪೀಕೆ ತಮ್ಮನಿಗೆ ಆದೇಶಿಸಿದ.

ಮಾರನೆಯ ದಿನ ಮಹೇಶ ತನ್ನ ಪಲ್ಸರ್ ಹತ್ತಿ ಅತ್ತಿಹಳ್ಳಿಯ ಕಡೆ ಹೊರಟ. ಸಾಮಾನ್ಯವಾಗಿ ಇಂಥ ವ್ಯವಹಾರಗಳಲ್ಲಿ ಗಿರಾಕಿಗಳನ್ನು ಹುಡುಕಿಕೊಂಡು ಮಹೇಶ ಹೋಗುತ್ತಿರಲಿಲ್ಲ. ಅಂಥ ವ್ಯವಹಾರವನ್ನೆಲ್ಲ ಪೀಕೆ ಬಂಟರು ಮಾಡುತ್ತಿದ್ದರು. ಆದರೆ ಇದು ಸ್ಪೆಷಟಲ್ ಕೇಸು. ಅವರು ತಮ್ಮ ಒರಟುತನದಿಂದ ಕೆಲಸ ಕೆಡಿಸುವ ಸಾಧ್ಯತೆಯಿತ್ತು. ಇದನ್ನು ನಯವಾಗಿ ಡೀಲ್ ಮಾಡಬೇಕು ಅಂತ ತಾನೇ ಹೊರಟ. ಅತ್ತಿಹಳ್ಳಿಯಲ್ಲಿ ಹೆತ್ತೇಗೌಡನ ಮನೆ ಹುಡುಕುವುದು ಕಷ್ಟವಾಗಲಿಲ್ಲ. ಅತ್ತಿಹಳ್ಳಿಯ ರೈತ ಮುಖಂಡನಾಗಿದ್ದ ಹೆತ್ತೇಗೌಡ ಎಲ್ಲರಿಗೂ ಪರಿಚಿತ. ಮಹೇಶ ಹೆತ್ತೇಗೌಡನ ಮನೆಯ ಮುಂದೆ ತನ್ನ ಬೈಕನ್ನು ನಿಲ್ಲಿಸಿದಾಗ, ಅವನಿಗೆ ಆಶ್ಚರ್ಯವಾಗುವಂತೆ ಮನೆಯಲ್ಲೇ ಇದ್ದ. ಬಾಗಿಲಿಗೆ ಬಂದ ಮಹೇಶ ಅವನಿಗೇನು ಅಪರಿಚತನಾಗಿರಲಿಲ್ಲ. ತನ್ನ ಜಮೀನಿನ ಪಕ್ಕದಲ್ಲಿ ಗಣಿಗಾರಿಕೆ ಮಾಡುತ್ತಿದ್ದ ಮಹೇಶನನ್ನು ಅವನೇ ಭೇಟಿ ಮಾಡಬೇಕೆಂದಿದ್ದ.

ಪಕ್ಕದ ಜಮೀನಿನ ಗಣಿಗಾರಿಕೆಯಿಂದಾಗಿ ಇವನ ಬೆಳಸಿನ ಮೇಲೆ ಧೂಳು ಕೂತು ಈ ವರ್ಷ ಸರಿಯಾದ ಬೆಳೆ ಆಗಿರಲಿಲ್ಲ. ಪ್ರತಿ ವರ್ಷ ಎಕರೆಗೆ ಐದಾರು ಖಂಡುಗ ರಾಗಿ ಫಸಲು ಬರುತ್ತಿತ್ತು. ಆದರೆ ಧೂಳಿನಿಂದಾಗಿ ಫಸಲು ಕಡಮೆಯಾಗಿತ್ತು. ಜೊತೆಗೆ ಅವನ ಮನೆಯ ರಾಸುಗಳಿಗೆ ಮೇವಿನ ತೊಂದರೆಯಾಗಿತ್ತು. ರಾಗಿ, ಜೋಳದ ಗರಿಗಳ ಮೇಲೆ ಧೂಳು ಕೂತು ತಿನ್ನಲು ಅಯೋಗ್ಯವಾಗಿದ್ದವು. ಈಗ ಅವನು ಮೇವನ್ನು ಹೊರಗಿನಿಂದ ಕೊಂಡುಕೊಳ್ಳುವ ಸ್ಥಿತಿಗೆ ಬಂದಿದ್ದನು.

ಮಹೇಶನನ್ನು ಸ್ವಾಗತಿಸಿದ ಹೆತ್ತೇಗೌಡ ನಲವತ್ತರ ಆಚೆ ಈಚೆ ಇದ್ದ. ಸುಮಾರು ಬೆಳೆದಿದ್ದ ಗಡ್ಡವನ್ನು ತನ್ನ ಕೈಯಿಂದ ಆಗಿಂದಾಗ್ಗೆ ನೀವಿಕೊಳ್ಳುತ್ತಿದ್ದ. ಗಡ್ಡದಲ್ಲಿ ತಲೆಯಲ್ಲಿ ಅಲ್ಲಲ್ಲಿ ಒಂದೊಂದು ಬಿಳಿ ಕೂದಲುಗಳು ಕಾಣಿಸಿಕೊಂಡಿದ್ದವು. ತೆಳ್ಳನೆಯ ಕಾಯ; ಶ್ರಮಕ್ಕೆ ಒಗ್ಗಿಕೊಂಡಿದ್ದನೆಂಬುದು ಅವನ ವ್ಯಕ್ತಿತ್ವದಲ್ಲಿ ಎದ್ದು ಕಾಣುತ್ತಿತ್ತು. ಮಹೇಶನನ್ನು ಒಳಗೆ

ಕರೆದು, ಕಬ್ಬಿಣದ ಕುರ್ಚಿಯನ್ನು ಕೂರಲು ತೋರಿದನು. ಆಮೇಲೆ ತನ್ನ ಹೆಂಡತಿಗೆ ಟೀ ಮಾಡಲು ಹೇಳಿ "ನಾನೇ ನಿನ್ನನ್ನು ನೋಡಲು ಬರುವಾ ಅಂತಿದ್ದೆ, ಮಹೇಶ. ಸ್ವಲ್ಪ ಮಾತನಾಡೋದಿತ್ತು. ಅದಿರಲಿ, ನೀನು ಬಂದ ವಿಚಾರವೇನು ?" ಎಂದು ವಿಚಾರಿಸಿದನು.

"ನಾಳೆ ಸಂಜೆ ನೀನು ನಮ್ಮ ತೋಟದ ಮನೆಗೆ ಬರಬೇಕು, ಹೆತ್ತೇಗೌಡ. ನಮ್ಮಣ್ಣ ನಿನ್ನೊಡನೆ ಮಾತಾಡಬೇಕಂತೆ" ಎಂದ ಮಹೇಶ.

"ಏನು ವಿಷಯ ?" ಕುತೂಹಲದಿಂದಲೂ ಅನುಮಾನದಿಂದಲೂ ಹೆತ್ತೇಗೌಡ ಪ್ರಶ್ನಿಸಿದ.

"ಅದೇನೋ ನಂಗೂ ಸರಿಯಾಗಿ ಗೊತ್ತಿಲ್ಲ. ನಾಳೆ ನೀನೇ ಬಂದು ಬಿಡು. ಆಗ ಹೆಂಗಿದ್ದರೂ ತಿಳಿಯುತ್ತೆ" ಎಂದು ಮಹೇಶ ಉತ್ತರಿಸಿದ.

"ಆಯ್ತು, ಬರ್ತೀನಿ ಬಿಡು. ಅಲ್ಲಾ ಮಹೇಶ, ನಮ್ಮ ಹೊಲದ ಪಕ್ಕ ನೀವು ಗಣಿಗಾರಿಕೆ ಮಾಡ್ತಾ ಇದ್ದೀರಿ. ಮಾಡ್ಕೊಳ್ಳಿ. ನಂದೇನೂ ತಕರಾರಿಲ್ಲ. ಆದರೆ ಅದರಿಂದ ನನಗೆ ತುಂಬಾ ತೊಂದರೆಯಾಯ್ತದೆ ಕಣಪ್ಪ" ಎಂದ.

ಅಷ್ಟರಲ್ಲಿ ಒಳಗಿನಿಂದ ಹೆತ್ತೇಗೌಡನ ಹೆಂಡತಿ ಒಂದು ತಟ್ಟೆಯಲ್ಲಿ ಎರಡು ಲೋಟ ಟೀ ತಂದಳು. ಗಂಡನಿಗೊಂದು ಲೋಟ, ಮಹೇಶನಿಗೊಂದು ಲೋಟ ನೀಡಿದಳು. ಅವಳಿಂದ ಟೀ ಲೋಟ ಪಡೆದು ಮಹೇಶ ಟೀಯನ್ನು ಕುಡಿಯಲಾರಂಭಿಸಿದ. ಒಂದೆರಡು ಗುಟುಕು ಕುಡಿದ ನಂತರ "ಏನ್ ತೊಂದ್ರೆ ಹೆತ್ತೇಗೌಡ" ಅಂತ ಕೇಳಿದ.

ಹೆತ್ತೇಗೌಡ ಗಣಿಗಾರಿಕೆಯ ಧೂಳಿನಿಂದ ತನ್ನ ರಾಗಿ ಫಸಲು ಕಡಿಮೆಯಾಗಿರುವುದನ್ನು, ಹುಲ್ಲು ರಾಸುಗಳಿಗೆ ಮೇಯಲು ಅಯೋಗ್ಯವಾಗಿರುವುದನ್ನು ವಿವರಿಸಿದ. ಅದರಿಂದ ತನಗಾಗಿರುವ ನಷ್ಟದ ವಿವರವನ್ನು ನೀಡಿದ. ಅವನ ಮಾತುಗಳನ್ನು ಆಲಿಸಿದ ಮಹೇಶ "ಹೆಂಗಿದ್ದರೂ ನಾಳೆ ಸಂಜೆ ಬರ್ತಿಯಲ್ಲಾ, ಅಣ್ಣನ ಜೊತೆ ಮಾತನಾಡುವಿಯಂತೆ. ಅಲ್ಲೇ ನಿನ್ನ ಸಮಸ್ಯೆ ಬಗೆಹರಿಸಿಕೊಳ್ಳುವಂತೆ" ಎಂದು ಮೇಲೆದ್ದ "ಬರ್ತೀನಿ" ಎಂದು ತನ್ನ ಪಲ್ಸರ್ ಮೇಲೆ ಕೂತು ಸ್ಟಾರ್ಟ್ ಮಾಡಿದ.

ಹೆತ್ತೇಗೌಡ ಕೊಟ್ಟ ಮಾತಿನಂತೆ ಮಾರನೆಯ ಸಂಜೆ ಸುಮಾರು ಐದು ಗಂಟೆಯ ಹೊತ್ತಿಗೆ ಪೀಕೆಯ ತೋಟದ ಮನೆಗೆ ಹೋದ. ತೋಟದ ಮನೆಯ ಆಳು ಕೆಂಚ ಬಾಗಿಲಲ್ಲಿ ಅವನನ್ನು ಸ್ವಾಗತಿಸಿ "ಒಳಗವರೆ ಹೋಗಣ್ಣ" ಎಂದ. ಹಾಲ್‌ನಲ್ಲಿ ಮಹೇಶ, ರೆಡ್ಡಿ ಮತ್ತು ಪೀಕೆ ಕೂತಿದ್ದರು. ಅವರಿಂದ ಸ್ವಲ್ಪ ದೂರಕ್ಕೆ ನಾಲ್ಕು ಜನ ಪೀಕೆ ಬಂಟರು ಪ್ಲಾಸ್ಟಿಕ್ ಚೇರುಗಳಲ್ಲಿ ಕುಳಿತು ಸಿಗರೇಟು ಸೇದುತ್ತಿದ್ದರು.

ಹೆತ್ತೇಗೌಡನನ್ನು ನೋಡಿದ ಪೀಕೆ "ಬಾ, ಹೆತ್ತೇಗೌಡ ಕೂತ್ಕೊ. ಲೇ ಕೆಂಚ, ಟೀ ತಕ್ಕೊಂಡು ಬಾರ್ಲ" ಎಂದು ಕೂಗಿ ಹೇಳಿದ.

ಹೆತ್ತೇಗೌಡ ತನ್ನ ಹೆಗಲಮೇಲಿನ ಹಸಿರು ಟವಲನ್ನು ಒಮ್ಮೆ ಜಾಡಿಸಿ, ಮತ್ತೆ ಹೆಗಲ ಮೇಲೆ ಸರಿಯಾಗಿ ಹೊದ್ದುಕೊಂಡು, ಪೀಕೆಯ ಎದುರಿನ ಸೋಫಾದಲ್ಲಿ ಕುಳಿತು "ಹೇಳಿ ಎಂ.ಎಲ್.ಸಿ. ಸಾಹೇಬರೆ, ಏನೋ ನನ್ನ ಬರಹೇಳಿದ್ರಂತೆ ?" ಎಂದು ಕೇಳಿದನು.

ಪೀಕೆ ಒಮ್ಮೆ ತನ್ನ ತಮ್ಮ ಮತ್ತು ರೆಡ್ಡಿಯ ಮುಖವನ್ನು ನೋಡಿ, "ಹೆತ್ತೇಗೌಡ, ನೀನು ನಿನ್ನೆದಿನ ನಮ್ಮ ಗಣಿಗಾರಿಕೆಯಿಂದ ಏನೋ ತೊಂದರೆ ಆಗ್ತಿದೆ ಅಂದೆಯಂತೆ. ಏನು ಮಾಡುವುದು. ನಮ್ಮ ಕೆಲಸವೇ ಅಂತಾದ್ದು ಕೆತ್ತುವುದು, ಕೊರೆಯುವುದು. ಧೂಳು ಸಹಜವಾಗಿ ಏದ್ದೇಳುತ್ತೆ. ಈ ವಿಷಯದಲ್ಲಿ ನಾವು ಅಸಹಾಯಕರು. ಇರಲಿ, ಸುಮ್ಮನೆ ಪೀಠಿಕೆ ಬೇಡ. ಆ ವಿಷಯ ಆಮೇಲೆ ಮಾತನಾಡುವ. ಇಂದು ನಿನ್ನ ಇಲ್ಲಿಗೆ ಕರೆಸಿದ ವಿಷಯಕ್ಕೆ ಬರುತ್ತೇನೆ"- ನಿಧಾನವಾಗಿ ಮಾತುಗಳನ್ನು ತೂಗಿ ತೂಗಿ "ನಿನ್ನ ಹೊಲದ ಪಕ್ಕ ನಾವು ಗಣಿಗಾರಿಕೆ ಮಾಡ್ತಾ ಇದ್ದೇವೆ. ಅದರಿಂದ ನಿನಗೆ ತೊಂದರೆಯಾಗ್ತಿದೆ, ನಷ್ಟವಾಗ್ತಿದೆ. ಅದಕ್ಕೆ ನಾನು ನೀನು ಒಂದು ಒಪ್ಪಂದಕ್ಕೆ ಬರೋಣ. ನಿನ್ನ ಹತ್ತು ಎಕರೆ ಜಮೀನನ್ನು ನನಗೆ ಮಾರಿಬಿಡು. ಸುತ್ತಮುತ್ತ ಈಗ ಏನು ರೇಟಿದೆಯೋ ಅದರ ಎರಡರಷ್ಟನ್ನು ನಾನು ಕೊಡುತ್ತೇನೆ. ಏನಂತೀಯಾ ?" ಎಂದು ಕೇಳಿದ.

ಹೆತ್ತೇಗೌಡ ಒಮ್ಮೆ ಪೀಕೆಯನ್ನು ನೋಡಿ "ಆ ಜಮೀನು ನನಗೆ ಪಿತ್ರಾರ್ಜಿತ ಆಸ್ತಿ. ನಮ್ಮನೇಲಿ ಸತ್ತವರನ್ನು ಅಲ್ಲೇ ಹಾಕ್ತೀವಿ. ನಮ್ಮ ತಾತ ಮುತ್ತಾತನ ಕಾಲದ ಭೂಮಿ. ಅದನ್ನು ಮಾರುವ ಹಕ್ಕು ನನಗಿಲ್ಲ. ನಮ್ಮ ಅಪ್ಪನಿಂದ ಅದು ನನಗೆ ಬಂತು. ನಾನು ಅದನ್ನು ನನ್ನ ಮಕ್ಕಳಿಗೆ ವರ್ಗಾಯಿಸುತ್ತೇನೆ. ಅದನ್ನು ನಾನು ಮಾರಲಾರೆ, ಕ್ಷಮಿಸಿ" ಎಂದ.

ಕೆಂಚ ಒಂದು ಟ್ರೇನಲ್ಲಿ ಐದಾರು ಲೋಟ ಟೀ ತಂದು ಎಲ್ಲರಿಗೂ ಒಂದೊಂದು ಲೋಟ ಕೊಟ್ಟು, ಅಲ್ಲಿಂದ ಕಾಲ್ತೆಗೆದ. ಪೀಕೆ ಹೆತ್ತೇಗೌಡನನ್ನು ನೋಡುತ್ತಾ, ಕೈಯಲ್ಲಿ ಟೀ ಲೋಟವನ್ನು ಹಿಡಿದು " ನೋಡು ಹೆತ್ತೇಗೌಡ, ನಾನು ನಿನಗಿಂತ ವಯಸ್ಸಿನಲ್ಲಿ ಚಿಕ್ಕವನು. ಚಿಕ್ಕವನು ಹೇಳ್ತಾ ಅವನೆ ಅಂತ ಬೇಸರ ಮಾಡಿಕೊಳ್ಳಬೇಡ. ನಮ್ಮ ರೈತರಿಗೆ ಬುದ್ದಿ ಇಲ್ಲ ಅನ್ನೋದು ಇದಕ್ಕೆ ನೋಡು. ಒಂದು ಲೆಕ್ಕ ಹಾಕುವ. ನಿನ್ನ ಹತ್ತು ಎಕರೆ ಜಮೀನಲ್ಲಿ ನೀನು ಇದುವರೆಗೆ ಏನು ಸಂಪಾದನೆ ಮಾಡಿದ್ದೀಯಾ ? ವರ್ಷಕ್ಕೆ ಒಂದು ಹತ್ತುಸಾವಿರ ? ಹದಿನೈದು ಸಾವಿರ ? ಅಷ್ಟೆ. ಅದೂ ಮಳೆರಾಯನ ಕೃಪೆ ಬೇಕು. ನಿನ್ನ ಹತ್ತು ಎಕರೆ ಹೊಲ ನನಗೆ ಕೊಡು. ನಾನು ನಿನ್ನ ಒಂದೆಕರೆಗೆ ಐವತ್ತು ಸಾವಿರ ಕೊಡುತ್ತೇನೆ - ಏನ್ ಮಹೇಶ, ಈಗ ಮಾರ್ಕೆಟ್ ರೇಟು ಇಲ್ಲಿ ಎಷ್ಟಿದೆ ?" ಎಂದು ಪ್ರಶ್ನಿಸಿದ.

"ಅಣ್ಣ, ಇಪ್ಪತ್ತೈದರಿಂದ ಮೂವತ್ತುಸಾವಿರ ಇದೆ" ಎಂದ ಮಹೇಶ.

"ಆಯ್ತು, ನಾನು ನಿನಗೆ ಎಕರೆಗೆ ಎಪ್ಪತ್ತೈದು ಕೊಡುತ್ತೇನೆ. ಏಕೆ ಗೊತ್ತಾ ? ನೀನು ನನ್ನ ನೆರೆ. ನನ್ನ ಗಣಿಗಾರಿಕೆಯಿಂದ ನಿನಗೆ ತೊಂದರೆಯಾಗಬಾರದು. ಅದರ ಬದಲು ನನಗೆ ಅದನ್ನು ಮಾರಿ ಕೈ ತುಂಬಾ ಹಣ ತೆಗೆದುಕೋ. ನನಗೂ ನನ್ನ ಗಣಿಯನ್ನು ವಿಸ್ತರಿಸಬೇಕೆಂಬ ಆಸೆಯಿದೆ. ಅದನ್ನು ವಿಸ್ತರಿಸಬೇಕಾದರೆ ನಿನ್ನ ಜಮೀನು ನನಗೆ ಬೇಕು. ಏನಂತೀಯಾ ?" ಎಂದು ಹೆತ್ತೇಗೌಡನನ್ನು ನೋಡಿದ.

"ಅದೆಂಗಾದದು ಸಾಹೇಬರೆ, ಬೇಸಾಯದಲ್ಲಿ ಲಾಭ ನಷ್ಟ ಲೆಕ್ಕ ಹಾಕಲಾಗುತ್ತದೆಯೇ ? ಆ ಭೂಮಿ ನನಗೆ ತಾಯಿ ಇದ್ದ ಹಾಗೆ. ಅದನ್ನು ಮಾರಲಾರೆ. ದುಡ್ಡಿನ ಮೊಖ ನೋಡ್ಕೊಂಡು ತಾಯೀನ ಮರಲಾಗುವುದೆ ? ಇಲ್ಲ....ಇಲ್ಲ...." ಎಂದ.

ಪೀಕೆ "ನೀನು ಯಾವ ಕಾಲದಲ್ಲಿ ಇದ್ದೀಯಾ ಹೆತ್ತೇಗೌಡ ? ಆಯ್ತು, ಎಕರೆಗೆ ಒಂದು ಲಕ್ಷ ಕೊಡುತ್ತೇನೆ. ಹತ್ತು ಎಕರೆಗೆ ಹತ್ತು ಲಕ್ಷ ! ನೀನು ರಾಗಿಗೆ ಬೇಕಾದರೆ ಬೇರೆ ಹೊಲ ಕೊಂಡುಕೋ. ಬೇಕಾದರೆ ನಾವೇ ನಿನಗೆ ಬೇರೆ ಹೊಲ ಕೊಡಿಸುತ್ತೇವೆ. ಒಳ್ಳೆ ಜಮೀನು ಹತ್ತೆಕರೆಗೆ ಮೂರ್‍ನಾಲ್ಕು ಲಕ್ಷ ಆಗಬಹುದು. ಜುಂ ಅಂತ ಆರು ಲಕ್ಷ ನಿನ್ನ ಜೇಬು ಸೇರುತ್ತದೆ" ಎಂದು ನಯವಾಗಿ ಹೇಳಿದನು.

ಹೆತ್ತೇಗೌಡ ಟೀ ಲೋಟವನ್ನು ಎದುರಿನ ಟೀಪಾಯಿಯ ಮೇಲಿಟ್ಟು ಎದ್ದುನಿಂತು "ನಮಸ್ಕಾರ ಸಾಹೇಬರೆ, ನನ್ನ ಜಮೀನನ್ನು ಮಾರುವ ಇರಾದೆ ನನಗಿಲ್ಲ. ಅದು ನನ್ನ ಜೀವ. ಕ್ಷಮಿಸಿ, ನಾನು ಬರುತ್ತೇನೆ" ಎಂದು ಹೊರಡಲು ಅನುವಾದ. ಅವನು ಎದ್ದ ಕೂಡಲೇ ಪೀಕೆ ಬಂಟರು ಕೂಡ ಎದ್ದು ನಿಂತರು. ಪೀಕೆ ಅವರನ್ನು ಕಣ್ಸನ್ನೆಯಿಂದಲೇ ಸುಮ್ಮನೆ ಕೂರುವಂತೆ ಹೇಳಿದ. ಅವರು ಆಜ್ಞೆಯನ್ನು ಪಾಲಿಸಿದರು. ಪೀಕೆ ತಾನೂ ಎದ್ದು ನಿಂತು " ನನ್ನ ಮಾತನ್ನು ಮನೆಗೋಗಿ ಮತ್ತೊಮ್ಮೆ ಯೋಚನೆ ಮಾಡು, ಹೆತ್ತೇಗೌಡ. ಲಕ್ಷ್ಮಿ ಮನೆಗೆ ಬಂದಾಗ ಬೇಡಾಂತ ಬಾಗಿಲು ಹಾಕ್ಕೋಬಾರದು" ಎಂದು ಹೆತ್ತೇಗೌಡನ ಹೆಗಲ ಮೇಲೆ ಕೈ ಹಾಕಿ ಮುಗಳ್ನಕ್ಕನು. ಅವನ ನಗೆಯಲ್ಲಿ ವಿಶೇಷವಾದ ಅರ್ಥವಿತ್ತು. ಹೆತ್ತೇಗೌಡ ಪೀಕೆಯ ದೃಷ್ಟಿಗೆ ದೃಷ್ಟಿ ಇಟ್ಟು "ನಾನು ತೀರ್ಮಾನ ಮಾಡೇ ನಿಮಗೆ ಹೇಳುತ್ತಿರುವುದು ಸಾಹೇಬರೆ. ನನ್ನ ಜಮೀನನ್ನು ಮಾರಲಾರೆ" ಎಂದ. ಅವನ ಮಾತಿನಲ್ಲಿ ನಿರ್ಧಾರ ಎದ್ದು ತೋರುತ್ತಿತ್ತು. ಪೀಕೆ ಆ ನಿರ್ಧಾರವನ್ನು ಗ್ರಹಿಸಿದ್ದ. ಹೆತ್ತೇಗೌಡ ತೋಟದ ಮನೆಯಿಂದ ಹೊರ ನಡೆದ.

ಪುನಃ ಸೋಫಾದ ಮೇಲೆ ಕುಳಿತ ಪೀಕೆ ಗಂಭೀರನಾದ. ಅವನನ್ನು ನೋಡಿದ ಮಹೇಶ ಮತ್ತು ರೆಡ್ಡಿ ಮಾತನಾಡಿಸವ ಗೋಜಿಗೆ ಹೋಗಲಿಲ್ಲ. ಪೀಕೆ ಏನನ್ನೋ ಯೋಚಿಸುತ್ತಿದ್ದಾನೆ; ಹಿಡಿದದ್ದನ್ನೂ ಅವನು ಎಂದೂ ಬಿಡಲಾರ. ಅದು ತನ್ನ ಕೈವಶವಾಗದೆ ನೆಮ್ಮದಿಯಿಂದ ಇರಲಾರ ಎಂಬುದು ಅವರಿಗೆ ಗೊತ್ತಿತ್ತು. ಅವನ ತಲೆಯಲ್ಲೊಂದು ಕಾರ್ಯತಂತ್ರ ಸಿದ್ಧವಾಗುತ್ತಿದೆಯೆಂದು ಅವರು ಬಲ್ಲರು.

ಪೀಕೆ ಧಿಡೀರನೆ ಎದ್ದು ನಿಂತು "ಮಹೇಶ, ನಾಳೇನೆ ನೀನು ಕನಕಪುರಕ್ಕೆ ಹೋಗಿ, ತಹಸೀಲ್ದಾರ್ ಚಂದ್ರಶೇಖರ್‌ನನ್ನು ಭೇಟಿಯಾಗಿ, ಆತ ತಪ್ಪದೆ ನಾಳೆ ರಾತ್ರಿ ನನ್ನನ್ನು ಬಂದು ಭೇಟಾಯಾಗುವಂತೆ ತಿಳಿಸು. ಈ ಹೆತ್ತೇಗೌಡ ಕಂಡರಿಯದ ನರಕಾನ ತೋರಿಸ್ತೀನಿ" ಎಂದು ಹೇಳಿ ತೋಟದ ಮನೆಯಿಂದ ಹೊರಟ. ಅವನೊಡನೆ ಕಾರಿನಲ್ಲಿ ರೆಡ್ಡಿ ಹಿಂದಿನ ಸೀಟಿನಲ್ಲಿ ಕುಳಿತ. ಒಬ್ಬ ಬಂಟ ಕಾರನ್ನು ಡ್ರೈವ್ ಮಾಡಿದರೆ, ಮತ್ತೊಬ್ಬ ಅವನ ಪಕ್ಕ ಕುಳಿತ.

ಕನಕಪುರದ ತಹಸೀಲ್ದಾರ್ ಮಾರನೆಯ ರಾತ್ರಿ ಎಂಟು ಗಂಟೆಯ ಹೊತ್ತಿಗೆ ಪೀಕೆಯ ಬೆಂಗಳೂರಿನ ಮನೆಗೆ ಹಾಜರಾದ. ಸೀನಿಯರ್ ರೆಡ್ಡಿ, ಜೂನಿಯರ್ ರೆಡ್ಡಿ ಪೀಕೆಯ ಪಕ್ಕದಲ್ಲಿ ಕುಳಿತಿದ್ದರು. ಅವನು ಪೀಕೆಗೆ ನಮಸ್ಕಾರ ಮಾಡಿ ಅವನ ಎದುರಿಗೆ ಕುಳಿತ. ಪೀಕೆ ತಹಸೀಲ್ದಾರ್‌ಗೆ ಸಮಸ್ಯೆಯನ್ನು ವಿವರಿಸಿದ. ಆ ಜಮೀನು ತನ್ನ ಕೈವಶವಾಗಬೇಕು. ಅದಕ್ಕೆ ಏನೇನು ಮಾಡಬೇಕೋ ಅದನ್ನೆಲ್ಲ ಮಾಡುವಂತೆ ಆಜ್ಞೆಮಾಡಿದ. ತಹಸೀಲ್ದಾರ್ ಆಯಿತೆಂದು ಎದ್ದು ನಿಂತ. ಪೀಕೆಯ

ಬಂಟನೊಬ್ಬ ಒಂದು ಸಣ್ಣ ಬ್ರೀಫ್‌ಕೇಸನ್ನು ತಹಸೀಲ್ದಾರ್‌ಗೆ ನೀಡಿದ. ಅವನು "ಬರುತ್ತೇನೆ" ಎಂದು ನಮಸ್ಕಾರ ಮಾಡಿ ಹೊರಟನು.

ಪೀಕೆ ರೆಡ್ಡಿಯ ಕಡೆ ನೋಡಿ ನಕ್ಕನು. ಅವನೂ ನಕ್ಕನು.

ಒಂದು ವಾರದೊಳಗೆ ಹೆತ್ತೇಗೌಡನಿಗೆ ಕನಕಪುರದ ಕಂದಾಯ ಇಲಾಖೆಯಿಂದ ನೋಟೀಸೊಂದು ಬಂದಿತ್ತು. ಸರ್ಕಾರಿ ಸರ್ವೆ ನಂಬರ್ ಹತ್ತೊಂಬತ್ತರ ಹತ್ತು ಎಕರೆ ಜಮೀನನ್ನು ನೀನು ಒತ್ತುವರಿ ಮಾಡಿಕೊಂಡು, ಅನಧಿಕೃತವಾಗಿ ಅಕ್ರಮವಾಗಿ ಅನುಭೋಗಿಸುತ್ತಾ ಬಂದಿರುವೆ. ನಿನ್ನ ಮೇಲೆ ಕಾನೂನು ಕ್ರಮ ಜರುಗಿಸಬೇಕಾಗಿದೆ. ಆದ್ದರಿಂದ ಆ ಜಮೀನನ್ನು ಕೂಡಲೇ ಕಂದಾಯ ಇಲಾಖೆಯ ವಶಕ್ಕೆ ಒಪ್ಪಿಸಿ, ಮುಂದಿನ ಸರ್ಕಾರದ ಕ್ರಮಕ್ಕೆ ಒಪ್ಪಿತವಾಗಬೇಕು ಎಂದು ಅದರಲ್ಲಿ ತಿಳಿಸಲಾಗಿತ್ತು.

ಹೆತ್ತೇಗೌಡನಿಗೆ ಗಾಬರಿಯಾಯಿತು. ತಲತಲಾಂತರದಿಂದ ಅವನ ವಂಶಸ್ಥರು ಗೆಯ್ಮೆ ಮಾಡುತ್ತಾ ಬಂದಿದ್ದ ಜಮೀನು ತನ್ನದಲ್ಲವೆಂದು ಈಗ ಸರ್ಕಾರ ಹೇಳುತ್ತಿದೆ. ಆ ಜಮೀನು ತನ್ನದೆನ್ನುವುದಕ್ಕೆ ಖಾತೆಯಿದೆ. ಕಂದಾಯ ಕಟ್ಟಿರುವ ರಶೀದಿಯಿದೆ. ವಿಲೇಜ್ ಅಕೌಂಟೆಂಟ್ ಇಟ್ಟಿರುವ ದಾಖಲೆಗಳಲ್ಲಿ ಸಾಕ್ಷಿಯಿದೆ. ಆ ಜಮೀನು ನಮ್ಮ ಮನೆತನದಲ್ಲದೆ ಹೋಗಿದ್ದರೆ ನೂರಾರು ವರ್ಷಗಳಿಂದ ಸರ್ಕಾರ ಏಕೆ ಕಣ್ಣು ಮುಚ್ಚಿ ಕೂತಿತ್ತು ? ಆಗಲೇ ಏಕೆ ಪ್ರಶ್ನಿಸಲಿಲ್ಲ ? ಹೆತ್ತೇಗೌಡನಿಗೆ ಹತ್ತಾರು ಪ್ರಶ್ನೆಗಳು ಹುಟ್ಟಿಕೊಂಡವು. ಇದು ಪೀಕೆಯ ಪಿತೂರಿಯೇ ? ಅವನಿಗೆ ತಾನು ಜಮೀನು ಮಾರಲೇಬೇಕೆಂಬ ಪರೋಕ್ಷ ಒತ್ತಡದ ರೂಪವೇ ? ಸಂಬಂಧವಿದೆ ಎನ್ನಿಸಿತು. ಪೀಕೆ ತನ್ನನ್ನು ಕರೆದು ಜಮೀನು ಮಾರಬೇಕು ಎಂದು ಕೇಳಿದ್ದಕ್ಕೂ, ತಾನು ನಿರಾಕರಿಸಿದ್ದಕ್ಕೂ, ಅದಾದ ವಾರದೊಳಗೆ ತಹಸೀಲ್ದಾರ್ ಕಛೇರಿಯಿಂದ ತನಗೆ ನೋಟೀಸ್ ಬಂದಿರುವುದು ಕೇವಲ ಕಾಕತಾಳೀಯವಲ್ಲ ಎಂಬುದು ಅವನಿಗೆ ಮನದಟ್ಟಾಯಿತು.

ಹೆತ್ತೇಗೌಡನಿಗೆ ದಟ್ಟವಾದ ರಾಜಕೀಯ ಪ್ರಜ್ಞೆಯಿತ್ತು. ಕರ್ನಾಟಕದ ದಕ್ಷಿಣಭಾಗದಲ್ಲಿ ಕಳೆದ ಶತಮಾನದ ಎಂಬತ್ತರ ದಶಕದಲ್ಲಿ ನಡೆದ ರೈತ ಚಳವಳಿಯ ಅನೇಕ ರೈತಶಿಬಿರಗಳಲ್ಲಿ ಅವನು ಭಾಗವಹಿಸಿದ್ದ. ಅವನ ಯೌವ್ವನದ ದಿನಗಳಲ್ಲಿ ಅತ್ಯಂತ ಉತ್ಸಾಹಿ ಕಾರ್ಯಕರ್ತನಾಗಿದ್ದ. ಅರಳಾಳು ಸಂದ್ರ-ಕಾಡನಕುಪ್ಪೆ ಗ್ರಾಮಗಳ ನಡುವೆ ಪ್ರೊ. ಎಂ.ಡಿ. ನಂಜುಂಡಸ್ವಾಮಿ ಮತ್ತು ಅವರ ಗೆಳೆಯರು ಸ್ಥಾಪಿಸಿದ್ದ ಡಾ. ರಾಮಮನೋಹರ ಲೋಹಿಯಾ ಟ್ರಸ್ಟ್‌ನ ಸಕ್ರಿಯ ಸದಸ್ಯನಾಗಿ ಅರಿವು ಮೂಡಿಸಿಕೊಂಡಿದ್ದ.

ಹೆತ್ತೇಗೌಡ ವಂಶಪಾರಂಪರ್ಯವಾಗಿ ಬಂದ ತನ್ನ ಜಮೀನನ್ನು ಅಷ್ಟು ಸುಲಭವಾಗಿ ಯಾರಿಗೊ ಬಿಟ್ಟುಕೊಡಲು ಸಿದ್ಧನಿರಲಿಲ್ಲ. ನೋಟೀಸ್ ಬಂದ ಕೂಡಲೇ ಹೆಗಲ ಮೇಲೆ ಹಸಿರು ಟವಲ್ ಹಾಕಿಕೊಂಡು ಕನಕಪುರದ ತಹಸೀಲ್ದಾರ್ ಕಛೇರಿಗೆ ಹೋದ. ತಹಸೀಲ್ದಾರ್ ಚಂದ್ರಶೇಖರ್ ಹೆತ್ತೇಗೌಡನನ್ನು ಸೌಜನ್ಯದಿಂದಲೇ ಕರೆದು, ಕೂರಿಸಿ ಮಾತನಾಡಿಸಿದ. ಅತ್ತಿಹಳ್ಳಿ ಸುತ್ತಮುತ್ತಲ ನಕ್ಷೆಯನನು ತೆರೆದು ಹೆತ್ತೇಗೌಡನ ಜಮೀನು ಇರುವ ಜಾಗವನ್ನು ಪೆನ್ಸಿಲ್‌ನಿಂದ ಮಾರ್ಕ್‌ಮಾಡಿ "ನೋಡಿ ಗೌಡರೆ, ನಿಮ್ಮ ಜಮೀನು ದಕ್ಷಿಣಕ್ಕೆ ಫಾರೆಸ್ಟ್‌ಗೆ ಹೊಂದಿಕೊಂಡಂತೆ ಇದೆ. ನಮ್ಮ

ದಾಖಲೆಯಲ್ಲೆಲ್ಲೂ ಆ ಜಾಗದಲ್ಲಿ ನಿಮ್ಮ ಜಮೀನು ಇದೆಯೆಂದು ನಮೂದಾಗಿಲ್ಲ. ಸರ್ಕಾರಿ ಜಮೀನು ಸರ್ವೆನಂಬರ್ ಹತ್ತೊಂಬತ್ತು, ನೋಡಿ ಈ ಗಣಿಗಾರಿಕೆ ನಡೀತಾ ಇದ್ಯಲ್ಲ, ಅದರ ಗಡಿವರೆಗೂ ವಿಸ್ತರಿಸಿದೆ. ನಾನು ಸ್ವತಃ ಹೋಗಿ ಅಳತೆ ಮಾಡಿಸಿದ್ದೇನೆ. ಕ್ಷಮಿಸಿ, ನೀವು ಜಮೀನನ್ನು ಸರ್ಕಾರದ ವಶಕ್ಕೆ ಒಪ್ಪಿಸಬೇಕು ಮತ್ತು ಸುಮಾರು ವರ್ಷಗಳಿಂದ ಸರ್ಕಾರೀ ಜಮೀನನ್ನು ಅಕ್ರಮವಾಗಿ ಅನುಭೋಗಿಸುತ್ತಾ ಬಂದಿರುವುದಕ್ಕೆ ನಿಯಮಾನುಸಾರ ದಂಡ ಕಟ್ಟಬೇಕು" ಎಂದನು.

"ಏನ್‌ಸ್ವಾಮಿ, ಇದು ಅನ್ಯಾಯ ? ತಲತಲಾಂತರದಿಂದ ನಮ್ಮ ಮನೆತನ ಅನುಭವಿಸ್ತಾ ಬಂದಿರೋ ಜಮೀನು. ಶ್ಯಾನುಭೋಗರ ಕಾಲದಿಂದ ಹಿಡಿದು ನಿಮ್ಮ ಕಾಲದವರೆಗೆ ಕಂದಾಯ ತೆಗೆದುಕೊಂಡಿದ್ದೀರಿ; ನೀವೇ ಖಾತೆ ನೀಡಿದ್ದೀರಿ. ಈಗ ಅದು ಸರ್ಕಾರಿ ಜಮೀನು ಅಂದರೆ ಹೆಂಗೆ ?" ಸ್ವಲ್ಪ ಜೋರು ದನಿಯಲ್ಲಿ ಹೆತ್ತೇಗೌಡ ಮಾತನಾಡಿದ.

ತಹಸೀಲ್ದಾರ್ ಶಾಂತಸ್ವರದಿಂದಲೇ ಹೆತ್ತೇಗೌಡನನ್ನು ಕುರಿತು "ನೋಡಿ ಗೌಡರೆ, ಇರುವ ವಿಷಯ ತಿಳಿಸಿದ್ದೇನೆ. ನೀವಾಗಿ ಜಮೀನನ್ನು ನಮ್ಮ ವಶಕ್ಕೆ ಒಪ್ಪಿಸಿದರೆ ಸರಿ, ಇಲ್ಲದಿದ್ದಲ್ಲಿ ನಾವೇ ವಶಕ್ಕೆ ತೆಗೆದುಕೊಳ್ಳುತ್ತೇವೆ, ನೀವಿನ್ನು ಬರಬಹುದು" ಎಂದ ಮಾತು ಮುಗಿಯಿತು ಎಂಬಂತೆ.

ಹೆತ್ತೇಗೌಡ ಮೇಲಕ್ಕೆದ್ದು "ಆಯ್ತು ಸ್ವಾಮಿ, ಈಗ ಹೋಗ್ತೀನಿ. ಈ ಅನ್ಯಾಯಾನ ನಾನು ಸುಮ್ನೆ ಸಹಿಸಿಕೊಳ್ಳಲ್ಲ. ನಿಮ್ಮ ಮೇಲಿನ ಅಧಿಕಾರಿಗಳ ಬಳಿ ಹೋಗ್ತೀನಿ. ಅಲ್ಲೂ ಆಗ್ಲಿಲ್ಲ ಅಂದರೆ ಕೋರ್ಟ್‌ಗೆ ಹೋಗ್ತೀನಿ" ಎಂದವನೆ ತಹಸೀಲ್ದಾರ್ ಕಛೇರಿಯಿಂದ ಹೊರಬಿದ್ದ. ಅವನು ಮನಸ್ಸಲ್ಲಿ ಸಬ್‌ಡಿವಿಜನ್ನಿನ ಮುಖ್ಯಾಧಿಕಾರಿ ಅಸಿಸ್ಟೆಂಟ್ ಕಮೀಷನರ್‌ಗೆ ಅಪೀಲ್ ಹೋಗಲು ತೀರ್ಮಾನಿಸಿದ್ದ.

ತಹಸೀಲ್ದಾರ್ ಚಂದ್ರಶೇಖರ್ ಹೆತ್ತೇಗೌಡ ತನ್ನ ಚೇಂಬರ್‌ನಿಂದ ಹೊರಹೋಗುವುದನ್ನೇ ನೋಡುತ್ತಿದ್ದ. ಹೆತ್ತೇಗೌಡನ ಧ್ವನಿಯಲ್ಲಿದ್ದ ದೃಢತೆಯನ್ನು ಅವನು ಗುರುತಿಸಿದ್ದ. ಈತ ಸುಲಭವಾಗಿ ಜಮೀನು ಬಿಡುವುದಿಲ್ಲವೆಂಬುದು ಖಾತ್ರಿಯಾಯಿತು. ಇಲಾಖೆಯ ಎಲ್ಲ ದಾಖಲೆಗಳಲ್ಲೂ ಹೆತ್ತೇಗೌಡನ ಮನೆತನದವರ ಒಡೆತನ ಸಾಬೀತುಮಾಡಲು ಸಾಕಷ್ಟು ಪುರಾವೆಗಳಿದ್ದವು. ಈ ಥರದ ಒಂದು ಹೆದರಿಕೆಯನ್ನು ಹೆತ್ತೇಗೌಡನ ಮೇಲೇರಿದರೆ, ಈ ಗೋಜಲು ರಂಪಗಳಿಂದ ತಪ್ಪಿಸಿಕೊಳ್ಳಲು ಅವನು ಪೀಕೆಯ ಬಳಿ ಬರುತ್ತಾನೆ. ಜಮೀನು ಮಾರುತ್ತಾನೆ ಎಂಬುದು ಪೀಕೆ ಮತ್ತು ಅವನ ಗೆಳೆಯರ ಯೋಜನೆಯಾಗಿತ್ತು. ಆದರೆ ಈಗ ಅದು ಉಲ್ಟಾ ಆಗುವ ಸೂಚನೆಯಿದೆ. ಕೋರ್ಟು ಕಛೇರಿ ಅಂದರೆ 'ತಡೆ' ಸಿಕ್ಕೇಸಿಗುತ್ತದೆ; ನಾಲ್ಕಾರು ವರ್ಷ ಎಳೆಯುತ್ತದೆ. ಈ ದಾಖಲೆಗಳನ್ನು ನೋಡಿದರೆ ಕೋರ್ಟಿನಲ್ಲಿ ಹೆತ್ತೇಗೌಡನ ಪರವಾಗಿಯೇ ತೀರ್ಪು ಬರುತ್ತದೆ.

ಚಂದ್ರಶೇಖರ್‌ಗೆ ಮತ್ತೊಂದು ಭಯವೂ ಇತ್ತು, ಆತ ಆಗತಾನೇ ಪ್ರೊಬೆಷನರಿ ಮುಗಿಸಿ ಕನಕಪುರಕ್ಕೆ ಬಂದು ವರ್ಷವಾಗುತ್ತಾ ಬಂದಿತ್ತು. ರಾಮನಗರದ ಅಸಿಸ್ಟೆಂಟ್ ಕಮೀಷನರ್

ರುದ್ರಮೂರ್ತಿ ಬಹಳ ಖಡಕ್ ಆಸಾಮಿಯಾಗಿದ್ದ. ದಾಖಲೆಗಳನ್ನು ತಿದ್ದಿದ ಆರೋಪವೇನಾದರೂ ತನ್ನ ಮೇಲೆ ಬಂದರೆ, ಸೇವೆಯ ಆರಂಭದಲ್ಲೇ ಒಂದು ಬ್ಲಾಕ್ ಮಾರ್ಕ್ ಬೀಳುತ್ತದೆ. ಪೀಕೆಗೆ ಇರುವ ವಿಷಯವನ್ನು ತಿಳಿಸಿ, ಜಮೀನಿನ ವಶಕ್ಕೆ ಬೇರೇನಾದರೂ ಯೋಜನೆ ರೂಪಿಸುವಂತೆ ತಿಳಿಸಬೇಕೆಂದುಕೊಂಡ. ಅಂದು ಸಂಜೆ ತಹಸೀಲ್ದಾರ್ ಚಂದ್ರಶೇಖರ್ ಪೀಕೆಯನ್ನು ಭೇಟಿಮಾಡಿದ. ಹೆತ್ತೇಗೌಡನ ಬಗ್ಗೆ ಸುದೀರ್ಘವಾದ ವರದಿಯನ್ನು ನೀಡಿ, ಮುಂದೆ ಆಗಬಹುದಾದ ಅಡೆತಡೆಗಳನ್ನು ವಿವರಿಸಿದ. "ನೀವು ಈ ಮಾರ್ಗವನ್ನು ಬಿಟ್ಟು ಬೇರೇನಾದರೂ ಮಾರ್ಗ ಬಳಸಿ, ಅವನಿಂದಲೇ ಸಹಿಪಡೆದು ಜಮೀನು ಬರೆಸಿಕೊಳ್ಳಬೇಕು. ಅಥವಾ...ಅಥವಾ...ಅವನ ಮನೆಯವರಿಂದ ಖರೀದಿಯಾಗುವಂತೆ ಸನ್ನಿವೇಶ ಸೃಷ್ಟಿಯಾಗಬೇಕು-" ಎಂದು ಮುನಿರಾಮಿ ರೆಡ್ಡಿಯ ಮುಖವನ್ನು ನೋಡಿದ.

ಪೀಕೆ ತಹಸೀಲ್ದಾರ್‌ನ ಮಾತುಗಳನ್ನು ತಾಳ್ಮೆಯಿಂದ ಕೇಳಿದ. ಅವನ ವಿವೇಕದ ಬಗ್ಗೆ ಮೆಚ್ಚುಗೆಯಾಯಿತು. ಹೆತ್ತೇಗೌಡ ಕೋರ್ಟಿನ ಮೆಟ್ಟಿಲೇರಿದರೆ ಸುದ್ದಿಯಾಗುತ್ತದೆ. ನನ್ನ ಹೆಸರು, ದಂದೆ ಎಲ್ಲ ಬಯಲಿಗೆ ಬರುತ್ತದೆ. ಅವನಿಗೆ ಸುದ್ದಿಯಾಗುವುದು ಬೇಕಿರಲಿಲ್ಲ. ಹಾಗಂತ ಸುಮ್ಮನೆ ಕೈ ಚೆಲ್ಲಿ ಕೂರುವುದು ಅವನ ಜಾಯಮಾನವಲ್ಲ. "ಚಂದ್ರಶೇಖರ್, ನಿಮ್ಮ ಸಲಹೆ ಉತ್ತಮವಾಗಿದೆ. ಈಗ ನೀವೊಂದು ಕೆಲಸ ಮಾಡಿರಿ. ಹೆತ್ತೇಗೌಡನನ್ನು ಕರೆದು ಕ್ಷಮೆ ಕೇಳಿರಿ. ಏನೋ ತಪ್ಪಾಗಿದೆ, ಅದು ಏನೆಂದು ಗೊತ್ತಾಗಿದೆ, ಅದನ್ನು ಸರಿಪಡಿಸಿಕೊಂಡಿದ್ದೇವೆ ಎಂದು ಹೇಳಿ, ಅವನನ್ನು ಸಮಾಧಾನ ಮಾಡಿ ಕಳಿಸಿರಿ. ಮುಂದೆ ಆ ಜಮೀನಿನ ಬಗ್ಗೆ ಏನು ಮಾಡಬೇಕೆಂದು ನಾವು ಯೋಚನೆ ಮಾಡುತ್ತೇವೆ. ನಾವು ಇನ್ನು ಹೋಗಬಹುದು. ಹಾಂ.....ಈ ವಿಷಯ ನಿಮ್ಮಲ್ಲೇ ಇರಲಿ" ಎಂದನು.

ತಹಶೀಲ್ದಾರ್ ಚಂದ್ರಶೇಖರ್ ಹೋದ ನಂತರ ಪೀಕೆ, ಮುನಿರಾಮಿರೆಡ್ಡಿ ಹೆತ್ತೇಗೌಡನ ಬಗ್ಗೆ ಕಾರ್ಯತಂತ್ರ ರೂಪಿಸಿದರು. ಕಾರ್ಯತಂತ್ರವನ್ನು ಜಾರಿಗೊಳಿಸಲು ಒಂದೆರಡು ತಿಂಗಳು ಸುಮ್ಮನಿರಬೇಕು. ಎಲ್ಲವೂ ತಣ್ಣಗಾಗಬೇಕು. ಹೆತ್ತೇಗೌಡನೂ ಈ ವಿಷಯವನ್ನು ಮರೆಯಬೇಕು. ಜೂನಿಯರ್ ರೆಡ್ಡಿಯನ್ನು ಮಹೇಶನನ್ನು ಕರೆದು ಏನೇನು ಮಾಡಬೇಕೆಂದು ಸರಿಯಾದ ಸೂಚನೆಗಳನ್ನು ನೀಡಿದರು.

ಗಿಡ ಸೀಮೆಯ ಈ ಸರಹದ್ದಿನಲ್ಲಿ, ಮಳೆಗಾಲದಲ್ಲಿ ಸ್ವಲ್ಪ ಜಾಸ್ತಿಯೇ ಮಳೆ. ಆದರೆ ಸಹ್ಯಾದ್ರಿಯ ಸಾಲುಗಳಲ್ಲಿ ಬೀಳುವಂಥ ಮಳೆಯಲ್ಲ. ಮೈಲಿ-ಅರ್ಧಮೈಲಿಗಳ ಅಂತರದಲ್ಲಿ ಬೃಹದಾಕಾರವಾಗಿ ಎದ್ದು ನಿಂತಿರುವ ಬೆಟ್ಟಗಳ ನಡುವೆ ಹಳ್ಳತಿಟ್ಟುಗಳಿಂದ ಕೂಡಿದ ಹೊಲಗಳು ಹಸಿರು ಹೊದ್ದು ಅತ್ಯಂತ ನಯನಮನೋಹರವಾಗಿರುತ್ತವೆ. ಮುಂಗಾರು ಕಳೆದು ಶ್ರಾವಣಮಾಸ ಬಂದಿತ್ತು. ಹೊಲಗಳಲ್ಲಿ ರಾಗಿ ಹುಲುಸಾಗಿ ಮಂಡಿ ಉದ್ದ ಬೆಳೆದಿತ್ತು. ಸಾಲು ಬೆಳೆ ಸಮೃದ್ಧವಾಗಿ ಬೆಳೆದು ಹಸಿರು ಚೆಲ್ಲುತ್ತಿತ್ತು. ಈ ವರ್ಷ ಕಾಳು ಕಡ್ಡಿಗಳಿಗೆ ತೊಂದರೆಯಿಲ್ಲ ಎಂದು ಹೆತ್ತೇಗೌಡ ಅಂದುಕೊಂಡ. ತಹಸೀಲ್ದಾರ್ ತನ್ನ ಕಛೇರಿಗೆ ಬರುವಂತೆ ಮತ್ತೆ ಹೇಳಿ ಕಳಿಸಿದ್ದು, ಏನೋ

ತಪ್ಪಾಗಿದೆ. ಆ ಘಟನೆಯನ್ನು ಮರೆತುಬಿಡಿ, ಆ ಜಮೀನು ನಿಮ್ಮದೇ ಅಂತ ಹೇಳಿದ್ದು, ಟೀ ತರಿಸಿಕೊಟ್ಟಿದ್ದು ಅವನಿಗೆ ಸಮಾಧಾನ ತಂದಿತ್ತು. ಅದು ತನ್ನ ಹಸಿರು ಟವಲ್ಲಿನ ಮಹಿಮೆ ಎಂದು ಸಂಭ್ರಮಿಸಿದ್ದ. ಜೊತೆಗೆ ಎರಡು ಮೂರು ತಿಂಗಳ ಹಿಂದೆ ಜಮೀನು ಖರೀದಿಸಲು ಪ್ರಸ್ತಾಪಿಸಿದ್ದ ಪೀಕೆ ಕಡೆಯಿಂದ ಯಾವುದೇ ಬಗೆಯ ಚಟುವಟಿಕೆಗಳು ಕಂಡು ಬಾರದೆ ಇರುವುದು ಅವನಿಗೆ ನೆಮ್ಮದಿಯನ್ನು ಉಂಟುಮಾಡಿತ್ತು. ಅವನು ಎಲ್ಲ ರೈತರಂತೆ ತನ್ನ ಕಾಯಕದಲ್ಲಿ ಮುಳುಗಿ ಹೋದ.

ಅಂದು ಸಂಜೆ ಹೊತ್ತು ಮುಳುಗುವ ತನಕ ತನ್ನ ಹೊಲದಲ್ಲಿ ಕಳೆಕೀಳುವ ಕೆಲಸದಲ್ಲಿ ತೊಡಗಿದ್ದ. ಇನ್ನು ಕತ್ತಲಾಗುತ್ತದೆ, ಹೊರಡಬೇಕು ಅಂದುಕೊಂಡು ತೆವರಿ ಅಂಚಿನ ತಕ್ಕಲಲ್ಲಿ ಕಟ್ಟಿದ್ದ ಎತ್ತುಗಳನ್ನು ಕರೆದುಕೊಂಡು ಮನೆಯ ಕಡೆ ಹೆಜ್ಜೆಹಾಕಿದ. ಅವನ ಹೊಲಕ್ಕೂ ಅತ್ತಿ ಹಳ್ಳಿಗೂ ಎರಡು ಮೈಲಿಗಳಾಗುತ್ತಿದ್ದವು. ಇವನದು ಅರಣ್ಯಕ್ಕೆ ಹೊಂದಿಕೊಂಡಂತೆ ಇದ್ದ ಜಮೀನು. ಊರಿನ ರಸ್ತೆ ಕಾಡು ರಸ್ತೆಯಾಗಿದ್ದು, ಇಕ್ಕೆಲಗಳಲ್ಲಿ ದಟ್ಟವಾದ ಬೇಲಿ ಎದ್ದು ನಿಂತಿತ್ತು. ಪೀಕೆಯ ಗಣಿಗಾರಿಕೆ ಪ್ರಾರಂಭವಾದ ಮೇಲೆ ಕಲ್ಲಿನ ಲಾಗ್ ಹೊತ್ತ ಲಾರಿಗಳು ಸಂಚರಿಸಿ ರಸ್ತೆಯ ನಡುವೆ ಎರಡು ದಟ್ಟವಾದ ಜಾಡು ನಿರ್ಮಾಣವಾಗಿತ್ತು. ಆರೇಳು ಅಡಿ ಬೆಳೆದಿದ್ದ ಬೇಲಿಯ ನಡುವೆ ಕತ್ತಲೆ ಆವರಿಸಿಕೊಳ್ಳುತ್ತಿತ್ತು.

ಹಿಂದಿನಿಂದ ಜೀಪ್ ಬರುವ ಸದ್ದಾಯಿತು. ತಿರುಗಿ ನೋಡಿದ. ಪೀಕೆ ಬಂಟರು. ಅವರಿಗೆ ದಾರಿ ಬಿಡಬೇಕೆಂದುಕೊಂಡ ಹೆತ್ತೇಗೌಡ ತನ್ನ ಎತ್ತುಗಳನ್ನು ಒಂದು ಪಕ್ಕಕ್ಕೆ ಎಳೆದುಕೊಂಡ. ಜೀಪು ನಿಧಾನವಾಗಿ ಅವನನ್ನು ಹಾದು, ಹತ್ತು ಅಡಿ ಮುಂದಕ್ಕೆ ಸಾಗಿ ನಿಂತಿತ್ತು. ಅದರಿಂದ ಪೀಕೆ ಬಂಟರು ಕೆಳಗಿಳಿದರು. ನಾಲ್ಕೂ ಜನರು, ಪೊಗದಸ್ತಾದ ಆಳುಗಳು. ಹೆತ್ತೇಗೌಡನ ಬಳಿ ಬಂದು ಅಕ್ಕಪಕ್ಕ ನಿಂತು, ಅವನ ಮಾತನಾಡಬೇಕೆಂದು ತೆರೆದ ಬಾಯನ್ನು ಹಾಗೆಯೇ ಮುಚ್ಚಿ ಅದುಮಿ, ಅನಾಮತ್ತಾಗಿ ಅವನನ್ನು ಎತ್ತಿ ಜೀಪಿಗೆ ತಂದು ಹಾಕಿಕೊಂಡರು. ಅವನ ಕೈಕಾಲು ಕಟ್ಟಿ ಬಾಯಿಗೆ ಬಟ್ಟೆ ತುರಿಕಿದರು.

ಜೀಪಿನ ಹಿಂದಿನ ಸೀಟಿನಲ್ಲಿ ಪೀಕೆ ಬಂಟರ ಕಾಲುಗಳ ಬಳಿ ಹೆತ್ತೇಗೌಡ ಮಿಸುಕಾಡುತ್ತಿದ್ದ. ಅವನ ಗಂಟಲಿಂದ ಗೊರ ಗೊರ ಸದ್ದು ಹೊರಟು ಮೂಗಿನಲ್ಲಿ ಮೂ....ಮೂ....ಹೂಮ್‌ಹೊ....ಎಂಬ ಧ್ವನಿ ಹೊರಡುತ್ತಿತ್ತು. ಅವನ ಒಸಕಾಟ ಜಾಸ್ತಿಯೆಂದು ಬಂಟರಿಗೆ ಅನಿಸಿದ ತಕ್ಷಣ ಅವರ ಕಾಲುಗಳ ಬೂಟುಗಳು ಒದೆಯುತ್ತಿದ್ದವು.

ಊರಿನ ಓಣಿ ರಸ್ತೆಯಲ್ಲಿ ತನ್ನ ಯಜಮಾನನ್ನು ಎತ್ತಿ ಹಾಕಿಕೊಂಡು ಹೋದ ಜೀಪನ್ನು ದಪ್ಪ ಕಣ್ಣುಗಳನ್ನು ಬಿಡುತ್ತಾ, ಬೆರಗಿನಿಂದ ನೋಡುತ್ತಾ ಎತ್ತುಗಳು ನಿಂತಿದ್ದವು. ಸ್ವಲ್ಪ ಹೊತ್ತು ಕಳೆದ ನಂತರ ಅವನು ಬಾರದಿರುವುದನ್ನು ಕಂಡು ಅವು ತಮಗೆ ತಾವೇ ತಮ್ಮ ಮನೆಯ ಹಾದಿಯನ್ನು ತುಳಿದವು.

ಹೆತ್ತೇಗೌಡನನ್ನು ಹಾಕಿಕೊಂಡು ಸಾಗಿದ ಜೀಪು ತೆಂಗಿನ ಕಲ್ಲು ಅರಣ್ಯವನ್ನು ಪ್ರವೇಶಿಸಿತು. ತೆಂಗಿನ ಕಲ್ಲು-ಕಾಡನಕುಪ್ಪೆ ಗ್ರಾಮಗಳ ನಡುವೆ ಇರುವ ವಿಸ್ತಾರವಾದ 'ಗಿಡ' ಪ್ರದೇಶದ ಮೂಲಕ

ಜೀಪು ನಿಧಾನವಾಗಿ ಕಲ್ಲುಮುಳ್ಳುಗಳ ಹಾದಿಯಲ್ಲಿ ದೊಡ್ಡ ಬೆಟ್ಟದ ಕಡೆ ಸಾಗಿತು. ಕಾಡು ಕ್ರಮೇಣ ದಟ್ಟವಾಗುತ್ತಾ ಬಂತು. ಆಗಲೇ ಕತ್ತಲು ಆವರಿಸಿತ್ತು. ಕಕ್ಕೆ, ಬನ್ನಿ, ಕಗ್ಗಲಿ, ಬಾಗೆ, ಬಾಡಬಕ್ಕಗಳು ಒತ್ತೊಟ್ಟಿಗೆ ಸರಿಸಮವಾಗಿ ಬೆಳೆದಿದ್ದವು. ಅವುಗಳ ನಡುವೆ ಎಲ್ಲಿ ಜಾಗ ಸಿಗುತ್ತೋ ಅಲ್ಲೆಲ್ಲಾ ಕಿರುಬಿದಿರು ಹತ್ತು ಹದಿನೈದು ಅಡಿಗಳ ಎತ್ತರದವರೆಗೂ ಬೆಳೆದು ಕತ್ತಲೆಯಲ್ಲಿ ಕಪ್ಪನೆ ಕಪ್ಪಾಗಿ ಕಾಣುತ್ತಿದ್ದವು.

ದೊಡ್ಡ ಬೆಟ್ಟಕ್ಕಿಂತ ಮುನ್ನ ಒಂದು ಭಾರಿ ಹಳ್ಳವೊಂದು ಇದೆ. ಮಳೆಗಾಲದಲ್ಲಿ ಸದಾ ಹರಿದು, ಬೇಸಿಗೆಯಲ್ಲಿ ಸುಂಡಿಹೋಗುತ್ತದೆ. ಆದರೆ ಹಳ್ಳವಾದ್ದರಿಂದ ಅದರ ಆಜುಬಾಜು ಬೇಸಿಗೆಯಲ್ಲಿ ಹಸಿರು ಇರುತ್ತದೆ. ಈ ಏಕಾಂತ ಮತ್ತು ತೇವಾಂಶವನ್ನು ಬಳಸಿಕೊಂಡು ಶಕ್ತಿಯುಳ್ಳ ಜನರು ಅಲ್ಲಿ ಗಾಂಜಾ ಬೆಳೆದು ಹಣ ಸಂಪಾದಿಸುತ್ತಾರೆ. ಅಂಥ ಒಂದು ತಾಣಕ್ಕೆ ಜೀಪು ಬಂದು ನಿಂತಿತು. ಬಂಟರ ಕಾಲಬುಡದಲ್ಲಿ ಮಲಗಿ ಪಿಳಿಪಿಳಿ ಕಣ್ಣು ಬಿಡುತ್ತಿದ್ದ ಹೆತ್ತೇಗೌಡನಿಗೆ ತಾನು ಎಲ್ಲಿದ್ದೇನೆ, ಯಾವ ದಿಕ್ಕಿನಲ್ಲಿದ್ದೇನೆ ಎಂಬುದು ಗೊತ್ತಾಗುತ್ತಿರಲಿಲ್ಲ.

ಈ ಜೀಪು ಅಲ್ಲಿ ಬಂದು ನಿಲ್ಲುವ ವೇಳೆಗಾಗಲೆ ಅಲ್ಲೊಂದು ಜೀಪು ಬಂದು ನಿಂತಿತ್ತು. ಎರಡೂ ಕಡೆ ದಿಣ್ಣೆಯಿರುವ ಸುಮಾರು ನೂರು ಅಡಿ ವ್ಯಾಸದ ಪ್ರದೇಶದಲ್ಲಿ ಎತ್ತರವಾಗಿ ಬೆಳೆದು ನಿಂತಿದ್ದ ಬಸುರಿ ಮರದ ಬುಡದಲ್ಲಿ ಜೀಪಿನಲ್ಲಿ ರೆಡ್ಡಿ ಮತ್ತು ಮಹೇಶ ಕುಳಿತಿದ್ದರು. ಈ ಜೀಪು ಬಂದ ತಕ್ಷಣ ಅವರು ಕೆಳಗಿಳಿದು ನಿಂತರು. ಹೆತ್ತೇಗೌಡನನ್ನು ಬಂಟರು ದರದರನೆ ಎಳೆದು ತಂದು ಅವರ ಕಾಲುಬುಡದಲ್ಲಿ ಹಾಕಿದರು. ಆಗಲೇ ತಿಂದು ತಿಂದೂ ದಡೂತಿಯಾಗಿದ್ದ ಮಹೇಶ ಹೆತ್ತೇಗೌಡನನ್ನುದ್ದೇಶಿಸಿ "ಬಡ್ಡೀಮಗನೆ, ಜಮೀನು ಮಾರು ಅಂದರೆ ಏನೋ ನೀನೊಬ್ಬನೆ ಅಪ್ಪನಿಗೆ ಹುಟ್ಟಿರೋನು ಅನ್ನುವಂತೆ ಮಾತಾಡ್ತೀಯಾ. ಅದು ಹೇಗ್ ಮಾರೋದಿಲ್ವೋ ನಾನು ಈಗ ನೋಡ್ತೀನಿ" ಎಂದು ಹೇಳಿ ಜೀಪಿನಿಂದ ಒಂದು ಫೈಲ್ ಅನ್ನು ತೆಗೆದು, ಅದರಲ್ಲೇ ಆಗಲೇ ಟೈಪ್ ಆಗಿದ್ದ ಚಾಪಾ ಕಾಗದದ ಮೇಲೆ ಸಹಿ ಮಾಡುವಂತೆ ತೋರಿಸಿ, "ಲೇ ಮಗನೆ, ಸಿಗ್ನೇಚರ್ ಮಾಡು" ಎಂದ.

ಹೆತ್ತೇಗೌಡ ಸಹಿ ಮಾಡುವುದಿಲ್ಲವೆಂಬಂತೆ ತಲೆಯಾಡಿಸಿದ. ಮಹೇಶ ಮತ್ತೊಮ್ಮೆ "ನಿನ್ನ ಒಳ್ಳೇದಕ್ಕೆ ಹೇಳ್ತೀನಿ, ಸಿಗ್ನೇಚರ್ ಮಾಡೋ ಲೇ" ಎಂದು ಗರ್ಜಿಸಿದ. ಹೆತ್ತೇಗೌಡ ಬಿಲ್‌ಕುಲ್ ಆಗೋದಿಲ್ಲ ಅನ್ನುವಂತೆ ಕಣ್ಣು ಮೆಡರಿಸಿ, ತಲೆಯಾಡಿಸಿದ. ಮಹೇಶನಿಗೆ ಕೋಪ ನೆತ್ತಿಗೇರಿತು. ತನ್ನ ಬಂಟರಿಗೆ ಬೆಂಡೆತ್ತುವಂತೆ ಆಜ್ಞೆಮಾಡಿದ. ಕೈಕಾಲು ಕಟ್ಟಿ ಬಾಯಿಗೆ ಬಟ್ಟೆ ತುರುಕಿದ್ದ ಅಸಹಾಯಕ ಹೆತ್ತೇಗೌಡನನ್ನು ಬಂಟರು ಎಲ್ಲೆಂದರಲ್ಲಿ ಒದೆಯತೊಡಗಿದರು. ಹೆತ್ತೇಗೌಡನು ಅನುಭವಿಸುತ್ತಿದ್ದ ನೋವಿನ ಆಕ್ರಂದನವು ಕೂಡ ಅವನ ಬಾಯಿಂದ ಹೊರಬರುವಂತಿರಲಿಲ್ಲ. ಅವನ ಕಣ್ಣುಗಳಿಂದ ಬಳ ಬಳ ನೀರು ಹರಿದವು. ತುಟಿಗಳು ಬೂಟು ಏಟಿಗೆ ಒಡೆದು ರಕ್ತ ಕಾರುತ್ತಿದ್ದವು. ಅವನ ದೇಹದ ಅಂಗಾಂಗಳು ಊನಗೊಂಡಿದ್ದವು. ಅವನ ಕುತ್ತಿಗೆಯ ನರಗಳು ಉಬ್ಬಿ ಇಳಿಯುತ್ತಿದ್ದವು.

ಹೆತ್ತೇಗೌಡನನ್ನು ಹೀಗೆ ಹತ್ತು-ಹದಿನೈದು ನಿಮಿಷ ಬೆಂಡೆತ್ತಲಾಯಿತು. ನಾಲ್ಕು ಜನರ ಕ್ರೌರ್ಯಕ್ಕೆ ಅವನು ನಲುಗಿ ಹೋಗಿದ್ದ; ಸಂಪೂರ್ಣ ನಿತ್ರಾಣಗೊಂಡಿದ್ದ. ಅವನು ಮನಸ್ಸಿನಲ್ಲೇ ಆ ನೋವಿನಲ್ಲೂ ಚಿಂತಿಸಿದ; "ಈ ಬಡ್ಡೀ ಮಕ್ಕಳು ನನ್ನ ಒದ್ದು ಸಾಯಿಸ್ತಾರೆ. ಈಗ ಇವರು ಹೇಳಿದಂಗೆ ಕೇಳಿ, ಆಮೇಲೆ ಇವರ ವಿರುದ್ಧ ಹೋರಾಡಬೇಕು. ಈಗ ಪ್ರಾಣ ಒಂದು ಉಳಿಯಲಿ ಆಮೇಲೆ ತೋರಿಸ್ತೀನಿ ಹೆತ್ತೇಗೌಡನ ಹಿಕ್ಮತ್ತು ಎಂಥದು ಅಂತ". ತಕ್ಷಣ ತನ್ನ ಕಣ್ಣುಗಳಿಂದ ಪ್ರಾಣ ಉಳಿಸಬೇಕೆಂದು ಬೇಡುವವನಂತೆ ಮಹೇಶನನ್ನು ನೋಡಿದ. ಅವನ ಮುಖ ಭಾವವನ್ನೇ ಗಮನಿಸುತ್ತಿದ್ದ ಮಹೇಶ "ನಿಲ್ಲಿಸಿ ಸತ್‌ಗಿತ್ ಹೋಗ್ಬುಟ್ಟಾನು ಬಡ್ಡಿ ಮಗ, ವಸಿ ಅವನ ಬಾಯಿಂದ ಬಟ್ಟೆ ತೆಗೀರಿ" ಅಂದ. ಬಂಟರು ಹೆತ್ತೇಗೌಡನ ಬಾಯಿಗೆ ಸಿಕ್ಕಿಸಿದ್ದ ಬಟ್ಟೆಯನ್ನು ಕಿತ್ತರು. ಕಿತ್ತ ತಕ್ಷಣ ಗೊರ ಗೊರ ಸದ್ದು ಬಂತು. "ನೀ....ರೂ..." ಅಂತ ಅಂದ. ಬಂಟನೊಬ್ಬ ಬಿಯರ್ ಬಾಟಲಿಂದ ಅವನ ಬಾಯಿಗೆ ಬಿಯರ್ ಅನ್ನು ಸುರಿದ. ಮೊದಲು ಮುಖ ಕಿವುಚಿದ ಹೆತ್ತೇಗೌಡ ಆಮೇಲೆ ಒಂದೆರಡು ಗುಟುಕು ಕುಡಿದ. ಸ್ವಲ್ಪ ಹೊತ್ತು ಕಣ್ಣು ಮುಚ್ಚಿದ. ಜೋರಾಗಿ ಮಾತನಾಡಲೂ ಅವನಲ್ಲಿ ಶಕ್ತಿ ಇರಲಿಲ್ಲ. ಇನ್ನು ಜೋರಾಗಿ ಕೂಗಲು ಹೇಗೆ ಸಾಧ್ಯ ? ಒಂದು ವೇಳೆ ಕೂಗಿದರೂ ಅವನ ಧ್ವನಿ ಯಾರಿಗೂ ಕೇಳುವಂತಿರಲಿಲ್ಲ.

ಮಹೇಶ ಬಂಟನೊಬ್ಬನಿಗೆ ಹೆತ್ತೇಗೌಡನ ಬಲಗೈಯನ್ನು ಬಿಚ್ಚುವಂತೆ ಹೇಳಿದ. ಬಲಗೈ ಸಡಿಲವಾಯಿತು. ಗೌಡ ಬಲಗೈಯಿಂದ ತನ್ನ ಮುಖ ಒರೆಸಿಕೊಂಡ. ಬಂಟರು ಅವನನ್ನು ಎತ್ತಿ ಕೂರಿಸಿದರು, ಮಹೇಶ ಚಾಪಾ ಕಾಗದವನ್ನು ಅವನ ಮುಂದೆ ಹಿಡಿದು, ಅವನ ಬಲಗೈಗೆ ಪೆನ್ನು ನೀಡಿದ. "ಈಗ ಸಿಗ್ನೇಚರ್ ಮಾಡ್ತಿಯಲ್ಲಾ, ಮಗನೆ ? ಓದಿ ಸೈನ್ ಮಾಡು. ನಿನ್ನಿಂದ ಬಿಟ್ಟಿ ಬರೆಸಿಕೊಂಡಿಲ್ಲ. ನಮ್ಮಣ್ಣನ ನಾಲಗೆ ಯಾವಾಗಲೂ ಒಂದೇ. ಎಕರೆಗೆ ಒಂದು ಲಕ್ಷ, ಹತ್ತು ಲಕ್ಷ ರೂಪಾಯಿ ನಾಳೆ ನಿನ್ನ ಮನೆ ಬಾಗಿಲಿಗೆ ಬಂದು ಬೀಳ್ತದೆ" ಎಂದ.

ಹೆತ್ತೇಗೌಡ ತನ್ನ ಸುತ್ತಲ ಕತ್ತಲನ್ನು ಒಮ್ಮೆ ನೋಡಿದ. ಅವನ ಮುಖ ಬೆವರಿನಿಂದ ತೊಯ್ದಿತ್ತು. ಬಂಟನೊಬ್ಬ ಪ್ರಭಾವಶಾಲಿಯಾಗಿದ್ದ ಟಾರ್ಚ್ ಅನ್ನು ಚಾಪಾ ಕಾಗದದ ಮೇಲೆ ಹಿಡಿದ. ಮಹೇಶ ಅವನ ಕೈಯಿಂದ ಪ್ರತಿ ಪುಟದ ತಳದಲ್ಲಿ ಸಹಿ ಪಡೆದ. ಕೊನೆಯ ಪುಟದಲ್ಲಿ ಸಹಿ ಪಡೆದ ನಂತರ, ಬಂಟನೊಬ್ಬ ಇಂಕ್ ಪ್ಯಾಡನ್ನು ತಂದ. ಇನ್ನೊಬ್ಬ ಬಂಟ ಹೆತ್ತೇಗೌಡನ ಬಲಗೈಯನ್ನು ಹಿಂದಕ್ಕೆ ಎಳೆದು ಕಟ್ಟಿ, ಎಡಗೈಯನ್ನು ಬಿಚ್ಚಿದ. ಅವನ ಎಡಗೈ ಹೆಬ್ಬೆಟ್ಟನ್ನು ಇಂಕ್‌ಪ್ಯಾಡಿಗೆ ಅಜ್ಜಿ ಒಮ್ಮೆ ಒತ್ತಿ, ಚಾಪಾ ಕಾಗದದ ಕೊನೆಯ ಪುಟಕ್ಕೆ ಹೆಬ್ಬೆರಳಿನ ಗುರುತು ಮೂಡಿಸಿದ. ಅನಂತರ ಎಡಗೈಯನ್ನು ಹಿಂದಕ್ಕೆ ಎಳೆದು ಬಲಗೈ ಜೊತೆ ಬಿಗಿದು ಕಟ್ಟಲಾಯಿತು. ಮೊದಲಿನಂತೆ ಅವನ ಬಾಯಿಗೆ ಬಟ್ಟೆ ತುರುಕಲಾಯಿತು.

ಹಳ್ಳದ ಒಂದು ಮಗ್ಗುಲಲ್ಲಿ ಒಂದು ಗಾಡಿ ಸೌದೆಯನ್ನು ನೀಟಾಗಿ ಜೋಡಿಸಲಾಗಿತ್ತು.

ಸುತ್ತ ಬಿದಿರುಮೆಳೆ ಬೆಳೆದು ನಿಂತಿದ್ದರಿಂದ ಸೌದೆ ಹೊರಗಿನ ನೋಟಕ್ಕೆ ಕಾಣುತ್ತಿರಲಿಲ್ಲ. ಹೆತ್ತೇಗೌಡನನ್ನು ಎತ್ತಿಕೊಂಡ ಬಂಟರು ಆ ಒಣಗಿದ ಸೌದೆಯ ಮೇಲೆ ಮಲಗಿಸಿದರು. ಹೆತ್ತೇಗೌಡನಿಗೆ ಅರ್ಥವಾಯಿತು. ಭಯ ಅವನ ಕಣ್ಣಲ್ಲಿ ಹರಿದಾಡಿತು. ಕೈಕಾಲುಗಳ ಬಡಿತದ ಒಳಗಿಂದಲೇ ತಪ್ಪಿಸಿಕೊಳ್ಳಲು ಹೆಣಗಾಡಿದ. ವಿಫಲನಾದ.

ಅವನ ಮೇಲೆ ಮತ್ತೆ ಅರ್ಧಗಾಡಿಯಷ್ಟು ಹಿಪ್ಪನೇರಳೆ ಪುಳ್ಳೆಯನ್ನು ಜೋಡಿಸಿದರು. ಜೀಪಿನಿಂದ ಒಂದು ಕ್ಯಾನ್ ಸೀಮೆಎಣ್ಣೆ ತಂದು ಹಿಪ್ಪನೇರಳೆ ಕಡ್ಡಿ-ಸೌದೆಯ ಮೇಲೆ ಸುರಿದರು. ಬಂಟನೊಬ್ಬ ಬೆಂಕಿ ಕಡ್ಡಿಗೀರಿ ಎಸೆದ. ಬೆಂಕಿ ಪಟ್ಟಂತ ಹತ್ತಿಕೊಂಡಿತು. ಹಿಪ್ಪನೇರಳೆ ಕಡ್ಡಿಯ ಒಳಗೆ ಹೆತ್ತೇಗೌಡನ ದೇಹ ಮಿಸುಕಾಡತೊಡಗಿತು. ಒಣಗಿದ ಕಡ್ಡಿ ಚಟಪಟನೆ ಸಿಡಿಯಲಾರಂಭಿಸಿತು. ನೋಡು ನೋಡುತ್ತಲೇ ಬೆಂಕಿಯ ಜ್ವಾಲೆ ಆಳುದ್ದ ಎದ್ದು ಧಗಧಗಿಸಿತೊಡಗಿತು.

ಮಹೇಶನ ಪಕ್ಕ ನಿಂತು ಹೆತ್ತೇಗೌಡ ದಹಿಸುವುದನ್ನೇ ನೋಡುತ್ತಾ ನಿಂತ ರೆಡ್ಡಿಯ ಕಣ್ಣುಗಳಲ್ಲಿ ಬೆಂಕಿಯ ಜ್ವಾಲೆ ಕುಣಿಯುತ್ತಿತ್ತು. ಅವನು ಆ ಹಳ್ಳದ ತಂಪಿನಲ್ಲೂ ಬೆವರಿದ್ದನು.

ರೆಡ್ಡಿ ಭೂತಕಾಲವನ್ನು ವರ್ತಮಾನಕ್ಕಿಳಿಸಿದ್ದನು. ರೂಂನಲ್ಲಿದ್ದ ಯಾರೂ ಮಾತನಾಡುವ ಸ್ಥಿತಿಯಲ್ಲಿರಲಿಲ್ಲ. ಶರಣ್ ಮತ್ತು ಮಹೇಶ್ ತಲೆತಗ್ಗಿಸಿ ಕುಳಿತಿದ್ದರು. ಭೂಮಿಗೌಡನ ಮುಖದಲ್ಲಿ ಯಾವುದೇ ಭಾವನೆಗಳು ಕಾಣುತ್ತಿರಲಿಲ್ಲ.

ರೆಡ್ಡಿ ಮಾತನಾಡಿದ. "ಹೆತ್ತೇಗೌಡನನ್ನು ನಾವು ಮೇಲಕ್ಕೆ ಕಳಿಸಿದ್ದೆವು. ಕೇವಲ ನಾನು, ಮಹೇಶ, ಪೀಕೆ, ನಮ್ಮಪ್ಪ ಮಾತ್ರ ಬಾಧ್ಯಸ್ಥರೆ, ಸಿಸ್ಟರ್ ? ಅದರಲ್ಲಿ ನಿನ್ನಣ್ಣನ, ನಿನ್ನ ಗಂಡನ ಪಾತ್ರವಿರಲಿಲ್ಲವೆ ? ಅದಕ್ಕೇ ನೀವೂ ಅದರ ಪಾಲಿನ ಅನುಭೋಗಿ ಎಂದು ಆಗಲೆ ಹೇಳಿದ್ದು" ಸ್ವಲ್ಪ ಹೊತ್ತು ಮೌನವಾಗಿದ್ದು "ನಮ್ಮ ಗಣಿಗಾರಿಕೆಯನ್ನು ವಿಸ್ತರಿಸುವಾಸೆಗೆ ಬಲಿಯಾದವರಲ್ಲಿ ಈ ಹೆತ್ತೇಗೌಡನೂ ಒಬ್ಬ. ಪೀಕೆ ವಿರುದ್ಧ ಧ್ವನಿ ಎತ್ತಿದ ಎಷ್ಟೋ ಜನರ ಹೆಂಡತಿ, ಮಕ್ಕಳು ಅನಾಥರಾದರು. ಅದು ನಮಗೆ ಅನಿವಾರ್ಯವೂ ಆಗಿತ್ತು" ಎಂದು ನುಡಿದ ರೆಡ್ಡಿ.

## ಅಧ್ಯಾಯ : ಹದಿನೇಳು

"ವಿಚಿತ್ರ ನೋಡಿ ಪ್ರೊಫೆಸರ್, ರಿಸ್ಕ್ ತಕ್ಕೊಂಡು ಬಿಸಿನೆಸ್ ಮಾಡಿದ ನಮ್ಮಪ್ಪ ಈಗಿಲ್ಲ. ಗೊತ್ತೆ ನಿಮಗೆ ? ಅವನು ಕೊಲೆಯಾದ. ಯಾರು ಅವನನ್ನು ಮುಗಿಸಿದವರು ಅಂತ ನನಗೆ ಗೊತ್ತು. ಮುಗಿಸಲು ಸುಫಾರಿ ತಕ್ಕೊಂಡವನನ್ನು ಆಫ್‌ಮರ್ಡರ್ ಮಾಡಿಸಿದ್ದೇನೆ. ಅವನಿಗೆ ಸುಫಾರಿ ನೀಡಿದವನು ಬೆಂಗಳೂರು ಪೇಟೆಯಲ್ಲಿ ಆರಾಮವಾಗಿ ದೊಡ್ಡಮನುಷ್ಯನಂತೆ ಬದುಕುತ್ತಿದ್ದಾನೆ. ನಮ್ಮಪ್ಪನ ರೀತಿಯಲ್ಲಿ ರಿಸ್ಕ್ ತೆಗೆದುಕೊಂಡು ವ್ಯವಹಾರ ಮಾಡಿದ ನಾನು ಇಂದು ಅತ್ಯಂತ ತೊಂದರೆಯಲ್ಲಿದ್ದೇನೆ; ಮಹೇಶ ಮಹಾನ್ ಸಾಲಗಾರನಾಗಿದ್ದಾನೆ"- ರೆಡ್ಡಿ ಮಾತು ನಿಲ್ಲಿಸಿ, ಚಂದ್ರಿಕಾಳ ಕಡೆ ತಿರುಗಿ "ನಮ್ಮಿಂದ ಹಣ ಪಡೆದು ಶ್ರೀಮಂತರಾಗಿರುವ ಈ ನಿನ್ನಣ್ಣ ಆ ನಿನ್ನ ಗಂಡ ಚೆನ್ನಾಗೇನೋ ಇದ್ದಾರೆ. ಅವರಿಗೆ ಹಣ ಮಾಡಲು ನಮ್ಮಂಥವರು ಸಿಗುತ್ತಲೇ ಇರುತ್ತಾರೆ, ಎಂಜಲು ಸಿಗುತ್ತಲೇ ಇರುತ್ತದೆ. ಇದೇ ನೋಡು, ಬದುಕಿನ ದುರಂತ!" ಎಂದು ಮಾತು ನಿಲ್ಲಿಸಿದ.

ರೂಂನಲ್ಲಿ ಮೌನ ಹೆಪ್ಪುಗಟ್ಟಿತು. ಭೂಮಿಗೌಡ ಕಿಟಕಿಯಿಂದ ಹೊರಗೆ ನೋಡಿದ. ಚಂದ್ರನ ಬೆಳದಿಂಗಳು ಮತ್ತಷ್ಟು ದಟ್ಟವಾದಂತೆ ತೋರಿತು. ಅವನು ಮೌನ ಮುರಿದು ರೆಡ್ಡಿಯನ್ನು ಕುರಿತು "ಆಯ್ತು ರೆಡ್ಡಿ ಅವರೆ, ನಿಮ್ಮ ಮಾತಿನಲ್ಲಿ ಅನೇಕ ಸತ್ಯಗಳು ಅಡಗಿವೆ; ಆ ಸತ್ಯಗಳು ನಮ್ಮ ವಾಸ್ತವಿಕ ಬದುಕಿನ ದುರಂತಗಳೂ ಹೌದು. ಧನದಾಸೆಯ ಮೋಹ ಒಂದು ಚಟವಾದಾಗ ಇಂಥ ಘಟನೆಗಳು ಸಂಭವಿಸುತ್ತವೆ. ಈ ದುರಂತ ಸತ್ಯದ ಒಂದು ಭಾಗ ನೀವೂ ಆಗಿದ್ದೀರಿ. ತೃಪ್ತಿ, ನೆಮ್ಮದಿಯನ್ನು ಮತ್ತೆ ಹಣದ ಮೂಲಕವೇ ಕಂಡುಕೊಳ್ಳಲು ಯತ್ನಿಸುತ್ತಿದ್ದೀರಿ. ಅದೊಂದು ಮರೀಚಿಕೆ. ನಿಮಗೆಂದೂ ಸಿಗದು"- ರೆಡ್ಡಿಯನ್ನೇ ನೋಡುತ್ತಾ "ಈಗ ನಮ್ಮನ್ನು ಹೊರ ಹೋಗಲು ಬಿಡಿ. ನಿಮ್ಮ ವ್ಯವಹಾರ ನೀವು ಬಗೆಹರಿಸಿಕೊಳ್ಳಿ" ಎಂದನು.

ರೆಡ್ಡಿ ತನ್ನ ವಿಸ್ಕಿಯನ್ನು ಮುಗಿಸಿದ. ಮಾತನಾಡುತ್ತಾ ಆಡುತ್ತಾ ಅವನು ಹೆಚ್ಚು ಆಲ್ಕೋಹಾಲನ್ನು ಸೇವಿಸಿದ್ದ. ರೂಂನ ಫ್ಯಾನು ಬಿರುಸಾಗಿ ತಿರುಗುತ್ತಿದ್ದರೂ ಅವನು ಬೆವರುತ್ತಿದ್ದ. ಅವನು ಜೇಬಿನಿಂದ ಕರ್ಚೀಪನ್ನು ತೆಗೆದು ಒಮ್ಮೆ ಮುಖವನ್ನು ಒರೆಸಿಕೊಂಡು, ರೂಂನ ಒಂದು ಮಗ್ಗುಲಿಗೆ ಹೋಗಿ ಲ್ಯಾಪ್‌ಟಾಪ್ ಅನ್ನು ತಂದನು. ಅದು ಅತ್ಯಾಧುನಿಕ ತಂತ್ರಜ್ಞಾನವನ್ನೊಳಗೊಂಡ ಲ್ಯಾಪ್‌ಟಾಪ್. ಇಂಟರ್‌ನೆಟ್ ಸೌಲಭ್ಯವಿತ್ತು. ಅದನ್ನು ತೆರೆದು ಆನ್ ಮಾಡಿದನು. ಭೂಮಿಗೌಡನ ಪಕ್ಕದಲ್ಲಿ ಬಂದು ಕುಳಿತು ಲ್ಯಾಪ್‌ಟಾಪ್ ಅನ್ನು ಅವನಿಗೆ ಕೊಟ್ಟು, "ನಾನು ಹೇಳಿದಂಗೆ ಮಾಡಿ. ಮಹೇಶ್ ನನಗೆ ಕೊಡಬೇಕಾದ ಹಣ ವಸೂಲು ಮಾಡಿಕೊಳ್ಳುತ್ತೇನೆ. ಅನಂತರ ನೀವು ಹೋಗಬಹುದು" ಎಂದ.

ಭೂಮಿಗೌಡ ಲ್ಯಾಪ್‌ಟಾಪನ್ನು ತನ್ನ ತೊಡೆಯ ಮೇಲಿಟ್ಟುಕೊಂಡು ಆಶ್ಚರ್ಯದಿಂದ ರೆಡ್ಡಿಯನ್ನು ನೋಡಿದನು. ಶರಣ್ ಮತ್ತು ಚಂದ್ರಿಕಾ ಕೂಡ ಅದೇ ಭಾವದಿಂದ ದೃಷ್ಟಿ ಬೀರಿದರು. ಮಹೇಶ ಮಿಸುಕಾಡದೆ ಕುಳಿತಿದ್ದ.

ರೆಡ್ಡಿ ಬಾಕುವನ್ನು ಮಹೇಶನ ಕುತ್ತಿಗೆಯ ಬಳಿ ಹಿಡಿದು "ಮಹೇಶ, ನೀನು ಹೆಚ್‌ಡಿಎಫ್‌ಸಿ ಬ್ಯಾಂಕಿನಲ್ಲಿ ರಹಸ್ಯ ಖಾತೆಯನ್ನು ಹೊಂದಿರುವುದು ನನಗೆ ಗೊತ್ತು. ಅದರ ನಂಬರ್ರೂ ನನಗೆ ಗೊತ್ತು. ಆದರೆ ಅದರಲ್ಲಿ ಎಷ್ಟು ಹಣ ಇದೆಯೆಂದು ನನಗೆ ಗೊತ್ತಾಗುತ್ತಿಲ್ಲ. ಈಗ ನಿನ್ನ ಅಕೌಂಟ್‌ನ ಪಾಸ್‌ವರ್ಡ್ ಹೇಳು. ನಾನು ಆ ಹಣವನ್ನು ನನ್ನ ಅಕೌಂಟ್‌ಗೆ ವರ್ಗಾವಣೆ ಮಾಡಿಕೊಳ್ಳುತ್ತೇನೆ"- ಎಂದು ಮೃದುವಾಗಿ ಶೀತಲನಾಗಿ ಕೇಳಿದ.

ಮಹೇಶ ನೋವಿನಿಂದ ಮುಖ ಕಿವುಚಿಕೊಂಡು "ನೀನು ತಪ್ಪು ತಿಳಿದಿದ್ದಿಯಾ ರೆಡ್ಡಿ. ನಿಜ, ಹೆಚ್‌ಡಿಎಫ್‌ಸಿಯಲ್ಲಿ ನನ್ನ ಖಾತೆ ಇರುವುದು ನಿಜ. ಆದರೆ ಅಲ್ಲಿ ಹಣ ಇಲ್ಲ. ಇದ್ದಿದ್ದರೆ ನಿನ್ನ ಬಳಿ ಯಾಕೆ ಸಾಲ ಮಾಡ್ಬೇಕಿತ್ತು?" ಎಂದು ನುಡಿದ. ಅವನಿಗೆ ಎದೆ ನೋವು ಜಾಸ್ತಿಯಾಗುತ್ತಾ ಬಂದಿತ್ತೆಂದು ತೋರುತ್ತದೆ. ಕೂರಲು ತೊಂದರೆ ಪಡುತ್ತಿದ್ದ. ಅವನ ಹಣೆಯ ಮೇಲೆ ಬೆವರ ಸಾಲುಗಳು ಮೂಡಿದ್ದವು.

"ಹತ್ತು ವರ್ಷದಿಂದ ನಾನು, ನಮ್ಮಪ್ಪ ಇಬ್ಬರೂ ನಿಮ್ಮಣ್ಣನ ಚಾಕರಿ ಮಾಡಿದ್ದೇವೆ. ನಿಮ್ಮ ಮನೆ ಸಂಪತ್ತು ಬೆಳೆಯುವ ಹಾಗೆ ನೋಡ್ಕೊಂಡಿದ್ದೇವೆ. ಜೊತೆಯಲ್ಲಿ ಉಂಡು, ಜೊತೆಯಲ್ಲಿ ಮಲಗಿದ್ದೇವೆ. ನೀವು ಮಾಡಿದುದೇನು ? ನನಗೆ ತಿಳಿಯದ ಹಾಗೆ ಎಚ್‌ಡಿಎಫ್‌ಸಿಯಲ್ಲಿ ಹಣ ಇಟ್ಟಿದ್ದೀಯಾ ! ಪದೆ ಪದೆ ದುಡ್ಡಿಲ್ಲಾಂತ ನನ್ನತ್ರ ದುಡ್ಡು ತಕ್ಕೊಂಡಿದ್ದೀಯಾ. ಈಗ ಆ ಹಣವನ್ನೆಲ್ಲಾ ಕಕ್ಕು. ಹೂಂ....ಹೇಳು ಪಾಸ್ ವರ್ಡ್ ಹೇಳು ?" ಬಾಕುವನ್ನು ಅವನ ಕುತ್ತಿಗೆಗೆ ಒತ್ತಿ ಕೇಳಿದ. ಮಹೇಶ ಮತ್ತಷ್ಟು ಬೆವರಿದ.

ಮಹೇಶನನ್ನೇ ನೋಡುತ್ತಿದ್ದ ಭೂಮಿಗೌಡನಿಗೆ ಅವನು ನಾಟಕ ಆಡುತ್ತಿಲ್ಲವೆಂಬುದು ಖಚಿತವಾಗಿತ್ತು. ಅವನಿಗೆ ಸಮಸ್ಯೆಯಿದೆ. ಸಂಕಟ ಪಡುತ್ತಿದ್ದಾನೆಂದು ತೋರಿತು. "ರೆಡ್ಡಿ, ಮಹೇಶನಿಗೆ ನಿಜಕ್ಕೂ ಆರೋಗ್ಯ ಕೆಟ್ಟಿದೆ. ನೋಡಿ, ಹೇಗೆ ಸಂಕಟಪಡುತ್ತಿದ್ದಾರೆ ? ಮೊದಲು ಅವರನ್ನು ಆಸ್ಪತ್ರೆಗೆ ಕರೆದುಕೊಂಡು ಹೋಗೋಣ. ತಡವಾದರೆ ಹೆಚ್ಚುಕಮ್ಮಿ ಆಗಬಹುದು" ಎಂದನು.

ಭೂಮಿಗೌಡನ ಮಾತನ್ನು ಅಲಕ್ಷಿಸಿದ ರೆಡ್ಡಿ ಭೂಮಿಗೌಡನ ಬಳಿ ಬಂದು, ಲ್ಯಾಪ್‌ಟಾಪ್‌ನ ಕೀ ಬೋರ್ಡಿನ ಮೇಲೆ ಬೆರಳುಗಳಿಂದ ಪಟ ಪಟನೆ ಒತ್ತಿದ. ಮೊದಲು ಹೆಚ್.ಡಿ.ಎಫ್.ಸಿ. ಬ್ಯಾಂಕಿನ ವೆಬ್‌ಸೈಟನ್ನು ಓಪನ್ ಮಾಡಿಕೊಂಡ. ಅನಂತರ ಟಕಾಟಕ್ ಅಂತ ಹದಿನೈದು ಅಂಕಿಗಳ ಒಂದು ನಂಬರ್ ಅನ್ನು ಟೈಪ್ ಮಾಡಿದ. ತೆರೆಯ ಮೇಲೆ ಮಹೇಶನ ಭಾವಚಿತ್ರ ಮೂಡಿತು. ಮುಂದಿನ ಹೆಜ್ಜೆಗೆ ಪಾಸ್‌ವರ್ಡ್ ಕೇಳಿತು. ರೆಡ್ಡಿ ಭೂಮಿಗೌಡನ ಮುಖವನ್ನು ನೋಡಿ "ನೋಡಿದ್ರಾ ಪ್ರೊಫೆಸರ್, ಮಹೇಶನ ಅಕೌಂಟ್ ! ದುಡ್ಡಿಲ್ದೆ ಇರುತ್ತಾ ? ಇದು ಸೀಕ್ರೆಟ್ ಅಕೌಂಟ್, ಯಾರಿಗೂ ಗೊತ್ತಾಗಬಾರದು ಅಂತ ಹಣ ಇಟ್ಟಿದ್ದಾನೆ. ಎಷ್ಟಾದರೂ

ಇವನು ಪೀಕೆ ತಮ್ಮನಲ್ಲವೆ ?" ಮಹೇಶನ ಕಡೆ ತಿರುಗಿ "ಹೂಂ ಹೇಳು, ಪಾಸ್‌ವರ್ಡ್ ಹೇಳು?" ಎಂದ.

ಮಹೇಶ ತನ್ನ ಎಡಗೈಯನ್ನು ಅದುಮಿಕೊಳ್ಳುತ್ತಾ "ರೆಡ್ಡಿ ನಾನು ನಿನಗೆ ಸುಳ್ಳು ಹೇಳುತ್ತಿಲ್ಲ. ಅಕೌಂಟ್ ಇದೆ ನಿಜ. ಆದರೆ ಅದರಲ್ಲಿ ದುಡ್ಡಿಲ್ಲ. ನನ್ನ ಮಾತನ್ನು ನಂಬು" ಎಂದ.

"ನಿನ್ನ ಮಾತನ್ನು ಹೇಗೆ ನಂಬುದವುದು? ಮೊದಲು ಪಾಸ್‌ವರ್ಡ್ ಕೊಡು ಪರೀಕ್ಷೆ ಮಾಡಿ ನೋಡಿ ಬುಡ್ತೇನೆ. ದುಡ್ಡಿಲ್ಲದಿದ್ದರೆ ಆಮೇಲೆ ಮುಂದಿನ ಮಾತು".

"ಇಲ್ಲ ರೆಡ್ಡಿ ದುಡ್ಡಿಲ್ಲ. ನನ್ನ ಮಾತನ್ನು ನಂಬು. ಜೊತೆಗೆ, ನನ್ನ ಪಾಸ್ ವರ್ಡ್ ನನಗೆ ಮರೆತು ಹೋಗಿದೆ. ನೆನಪಿಗೆ ಬರ್‍ತಾಯಿಲ್ಲ" ಎಂದು ಮಹೇಶ ತನ್ನ ಹಣೆಯನ್ನು ಎರಡೂ ಕೈಗಳಿಂದ ಒತ್ತಿಕೊಂಡ.

ಅವನನ್ನು ಒಮ್ಮೆ ದುರುಗುಟ್ಟಿ ನೋಡಿದ ರೆಡ್ಡಿ ಮಹೇಶನ ಜುಬ್ಬಾವನ್ನು ಕುತ್ತಿಗೆಯ ಬಳಿ ಹಿಡಿದು, ತಿರುಗಿಸಿ ಒತ್ತಿ "ನೆನಪಿಗೆ ಬರ್‍ತಾಯಿಲ್ವ? ನೆನಪಿಗೆ ಈಗ ಬರುತ್ತೆ ನೋಡು "- ಎಂದು ಹೇಳಿ ಬಾಕು ಹಿಡಿದ ಕೈಯಿಂದ ಅವನ ಕಪಾಳಕ್ಕೆ ಬಿರುಸಾಗಿ ಭಾರಿಸಿದ. ಕೈ-ಬಾಕು ಎರಡರ ಸಮಾನ ತಪರಾಕಿಯಿಂದ ಮಹೇಶ ಅಲ್ಲಾಡಿಹೋದ. 'ಹೋ' ಎಂದು ನರಳಿದ. ಬಾಕುವಿನ ಒಂದು ಅಂಚು ಗೀರಿದ್ದರಿಂದ ಕೆನ್ನೆಯ ಚರ್ಮ ಸೀಳಿದಂತಾಗಿ ರಕ್ತ ನಿಧಾನವಾಗಿ ಹೊರಹೊಮ್ಮಿ ಗಲ್ಲದ ಮೇಲಿಳಿದು, ಅವನ ಬಿಳಿಯ ಜುಬ್ಬಾದ ಮೇಲೆ ತೊಟ್ಟಿಕ್ಕಿತು.

ಅದನ್ನು ನೋಡಿದ ಚಂದ್ರಿಕಾ ಭೀತಿಯಿಂದ ತತ್ತರಿಸಿದಳು. ಭೂಮಿ ಗೌಡನ ಕೈಯನ್ನು ಆಸರೆಗೆ ಹಿಡಿದಳು. ಅವಳು ನಡುಗುತ್ತಿದ್ದಳು. ಭೂಮಿಗೌಡ "ಮಿಸ್ಟರ್ ರೆಡ್ಡಿ, ನಿಲ್ಲಿಸಿ. ಏನಿದು ? ಕೈಮಾಡ್ತಾ ಇದ್ದೀರಾ ?" ಎಂದು ರಭಸವಾಗಿ ಎದ್ದು ರೆಡ್ಡಿಯ ಕೈಯಿಂದ ಬಾಕು ಕಿತ್ತುಕೊಳ್ಳಲು ಮುಂದಾದ.

ರೆಡ್ಡಿ ಬಾಕುವನ್ನು ಮಹೇಶನ ಕುತ್ತಿಗೆಗೆ ಮತ್ತಷ್ಟು ಬಲವಾಗಿ ಒತ್ತಿದ್ದ. ಬಾಕುವಿನ ಮೊನಚಾದ ಮೊನೆ ಅವನ ಕುತ್ತಿಗೆಯ ಚರ್ಮವನ್ನು ಸೀಳಿ, ಸಣ್ಣಗೆ ಕೆಂಪನೆಯ ರಕ್ತದ ಹನಿ ಕಾಣಿಸಿಕೊಂಡಿತು. "ಕುಳಿತುಕೊಳ್ಳಿ ಪ್ರೊಫೆಸರ್, ಹತ್ತಿರ ಬಂದರೆ ಇವನನ್ನು ಈಗಲೇ ಮುಗಿಸಿಬಿಡ್ತೇನೆ. ನಾನು ಹೇಳಿದಷ್ಟು ನೀವು ಮಾಡಿದರೆ ನೀವು ವಾಪಸ್ ಮೈಸೂರಿಗೆ ಹೋಗ್ತೀರಾ. ಅರ್ಥವಾಯಿತೆ ?" ಎಂದ.

ಭೂಮಿಗೌಡನಿಗೆ ರೆಡ್ಡಿ ಅರೆಹುಚ್ಚನಾಗಿದ್ದಾನೆ ಎನ್ನಿಸಿತು. ಈಗ ತಾನು ಮುಂದೆ ಹೋದರೆ ಮಹೇಶನ ಪ್ರಾಣ ತೆಗೆಯುತ್ತಾನೆ. ಅವನು ಹೇಳಿದ ಹಾಗೆ ಕೇಳಿ, ಅವನನ್ನು ಸರಿದಾರಿಗೆ ತಬೇಕು ಅನ್ನಿಸಿ, ಸುಮ್ಮನೆ ಕೂತನು.

ರೆಡ್ಡಿ ನೋವಿನಿಂದ, ಹೆದರಿಕೆಯಿಂದ ನರಳುತ್ತಿದ್ದ ಮಹೇಶನನ್ನು ನೋಡಿ "ಹೇಳು ಮಹೇಶ, ಪಾಸ್‌ವರ್ಡ್ ಹೇಳು ?" ಎಂದು ಬಾಕುವಿನ ಒತ್ತಡವನ್ನು ಹೆಚ್ಚಿಸಿದ.

ಮಹೇಶ ಮತ್ತೆ ನೋವಿನಿಂದ ಚೀರಿದ. "ಹೇಳ್ತೇನೆ, ಮೊದಲು ಬಾಕು ತೆಗಿ" ಎಂದ. ಮಹೇಶನ ಕುತ್ತಿಗೆ ಮೇಲಿದ್ದ ಬಾಕುವಿನ ಒತ್ತಡವನ್ನು ರೆಡ್ಡಿ ಸ್ವಲ್ಪ ಸಡಿಲ ಮಾಡಿದ. ಮಹೇಶ

ತನ್ನ ಜುಬ್ಬಾದ ಬಲಜೇಬಿನಿಂದ ಒಂದು ಪುಟ್ಟಡೈರಿಯನ್ನು, ಹೊರ ತೆಗೆದ ಕೆಲವು ಹಾಳೆಗಳನ್ನು ಮಗುಚಿದ. ರೆಡ್ಡಿಯ ಮುಖವನ್ನೇ ನೋಡಿ 'ಕೆಬಿಪಿಬಿ ೬೦೮೦೨೦' ಇದು ಪಾಸ್‌ವರ್ಡ್" ಎಂದ.

ರೆಡ್ಡಿ ಭೂಮಿಗೌಡನನ್ನು ನೋಡಿ "ಈ ಪಾಸ್ ವರ್ಡ್ ಕೊಡಿ" ಎಂದು ಆದೇಶಸಿದ. ಭೂಮಿಗೌಡ 'ಕೆಬಿಪಿಬಿ ೬೦೮೦೨೦' ಎಂಬ ಪಾಸ್‌ವರ್ಡ್‌ನ್ನು ಟೈಪ್ ಮಾಡಿದ. ತೆರೆಯ ಮೇಲೆ ಮಹೇಶನ ಖಾತೆಯ ಹಣಕಾಸಿನ ವಿವರ ಬಿಚ್ಚಿಕೊಳ್ಳಲಾರಂಭಿಸಿತು. ರೆಡ್ಡಿ ಮಹೇಶನ ಪಕ್ಕ ನಿಂತುಕೊಳ್ಳಲಾರದೆ, ಆತುರ ತಡೆಯಲಾರದೆ ಭೂಮಿಗೌಡನ ಹಿಂದೆ ಬಂದು ನಿಂತು ಲ್ಯಾಪ್‌ಟಾಪ್‌ನ ತೆರೆಯನ್ನು ನೋಡಲಾರಂಭಿಸಿದನು.

ನೋಡುತ್ತಾ, ನೋಡುತ್ತಾ ರೆಡ್ಡಿಯ ಮುಖ ನಿರಾಶೆಯ ಕಾರ್ಮೋಡವಾಯಿತು. ಮಹೇಶ ಸುಳ್ಳು ಹೇಳಿರಲಿಲ್ಲ. ಅವನ ಖಾತೆಯಲ್ಲಿ ಕೆಲವೇ ಕೆಲವು ಸಾವಿರರೂಪಾಯಿಗಳಿದ್ದವು. ಆ ಖಾತೆಯಲ್ಲಿ ಅವನು ಕಳೆದ ಮೂರು ವರ್ಷಗಳಲ್ಲಿ ಐದಾರು ಕೋಟಿ ವ್ಯವಹಾರ ನಡೆಸಿದ್ದ. ಆದರೆ ಈಗ ಅಲ್ಲಿ ಹಣವಿರಲಿಲ್ಲ. ನಿರಾಸೆ ಅವನಲ್ಲಿ ಒಂದು ಬಗೆಯ ಹತಾಸೆಯನ್ನು ಮೂಡಿಸಲಾರಂಭಿಸಿತು. ಹತಾಸೆ ಅವನನ್ನು ಕೆರಳಿಸುತ್ತಿತ್ತು. ಇಂದು ಮಹೇಶನಿಂದ ಹಣ ವಸೂಲು ಮಾಡುವುದು, ಅದರಿಂದ ತನ್ನ ತಕ್ಷಣದ ಸಾಲ ಸೋಲದ ಹೊರೆಯನ್ನು ಕಡಿಮೆಮಾಡಿಕೊಳ್ಳುವುದು, ತನ್ನ ಅಪ್ಪನ ಕೊಲೆಯ ರೂವಾರಿಗಳನ್ನು ಮುಗಿಸುವುದು-ಈ ಎಲ್ಲ ಯೋಜನೆಗಳು ವಿಫಲವಾಗುವ ರೀತಿ ತೋರತೊಡಗಿದವು. ತಾನು ಎಲ್ಲೋ ಸೋಲುತ್ತಿದ್ದೇನೆ ಎಂಬ ಆತಂಕ ಅವನಲ್ಲಿ ಮೂಡಲಾರಂಭಿಸಿತು. 'ಹಣ ಇಲ್ಲ. ಹಣ ಇಲ್ಲ' ತನ್ನಲ್ಲೇ ಗೊಣಗಿಕೊಂಡ ? ಅವನು ಧಿಡೀರನೆ ಮಹೇಶನ ಬಳಿಗೆ ಬಂದು ಅವನ ಕುತ್ತಿಗೆಗೆ ಬಾಕುನ್ನು ಒತ್ತಿ ಹಿಡಿದು "ಕಳ್ಳ ನನ್ನ ಮಗನೆ, ಕೊನೆಗೂ ನೀನು ನನಗೆ ಕೈ ಕೊಟ್ಟೆ. ಹಣ ಏನು ಮಾಡಿದೆ ? ಬೇರೆ ಕಡೆ ವರ್ಗಾಯಿಸಿರುವೆಯಾ ? ಅಥವಾ ತಿಂದು ಮಜ ಮಾಡಿರುವೆಯಾ ? ಇಲ್ಲ....ಇಲ್ಲ....ನೀನು ಮಜಾ ಮಾಡೋಕೆ ಹುಟ್ಟಿರೋನು. ನನಗೆ ಗೊತ್ತಿಲ್ಲವೆ ? ಮಜ ಮಾಡಿರ್‍ತಿಯಾ ?" ಎಂದು ರೋಷದಿಂದ ಕಿರುಚಿದ. ಅವನ ತುಟಿಗಳು ಅದುರುತ್ತಿದ್ದವು. ನಾಲಗೆ ತೊದಲುತ್ತಿತ್ತು. ಕಣ್ಣುಗಳು ಕಿರಿದಾಗಿ ಕೆಂಪಗಾಗಿದ್ದವು.

ಮಹೇಶ ರೆಡ್ಡಿಯ ಮುಖವನ್ನೇ ನೋಡುತ್ತಾ "ರೆಡ್ಡಿ, ನಾನು ನಿನ್ನತ್ರ ಸುಳ್ಳು ಹೇಳ್ತೀನಾ ? ನನ್ನತ್ರ ಹಣ ಇಲ್ಲ, ನಮ್ಮ ತಾಯಾಣೆಗೂ" ಎಂದ ಬೆವರುತ್ತಾ.

ರೆಡ್ಡಿಯ ಮುಖ ಮತ್ತಷ್ಟು ಗಡುಸಾಯಿತು. ಅವನ ಕುತ್ತಿಗೆಯಿಂದ ಬಾಕುವನ್ನು ಕದಲಿಸದೆ "ನೀವು ಅಣ್ಣ ತಮ್ಮ, ನಮ್ಮ ಬದುಕನ್ನು ಹಾಳು ಮಾಡಿದಿರಿ. ನಿಮ್ಮಣ್ಣ ನಮ್ಮಪ್ಪನನ್ನು ಚೆನ್ನಾಗಿ ದುಡಿಸಿಕೊಂಡು, ಬಳಸಿಕೊಂಡು ನಾಶಮಾಡಿದ. ಪ್ರಾಮಾಣಿಕವಾಗಿ ಹೇಳು ಮಹೇಶ ? ನಿಮ್ಮಣ್ಣ ನಮ್ಮಪ್ಪನನ್ನು ಕೊಲ್ಲಲು ಸುಫಾರಿ ಕೊಟ್ಟ ವಿಷಯ ನಿನಗೆ ಗೊತ್ತಿಲ್ಲವೆ ?" ಎಂದು ಕೇಳಿದ.

ಮಹೇಶನ ಕಣ್ಣುಗಳು ಆಶ್ಚರ್ಯದಿಂದ ರೆಡ್ಡಿಯನ್ನು ನೋಡಿದವು. ಇದು ಅವನಿಗೆ ಹೊಸ ವಿಷಯವಾಗಿತ್ತು. ಪೀಕೆ ಏನೇ ಮಾಡಿದರೂ ತನ್ನ ಜೊತೆ ಮೊದಲು ಚರ್ಚಿಸುತ್ತಿದ್ದ; ಒಮ್ಮೊಮ್ಮೆ ಸಲಹೆ ಕೇಳುತ್ತಿದ್ದ. ಆದರೆ...ಆದರೆ ಈ ವಿಷಯದಲ್ಲಿ ಅಣ್ಣ ತನ್ನೊಡನೆ

ಚರ್ಚಿಸಿಲ್ಲ. ಅಂದರೆ ಅಣ್ಣ ವಿಷಯವನ್ನು ತನ್ನೊಡನೆಯೇ ಮುಚ್ಚಿಟ್ಟಿದ್ದಾನೆ !ಅಥವಾ ರೆಡ್ಡಿ ಸುಳ್ಳು ಹೇಳುತ್ತಿದ್ದಾನೆಯೇ ? ಅಥವಾ ರೆಡ್ಡಿಗೆ ಬಂದಿರುವ ಮಾಹಿತಿಯೇ ಸುಳ್ಳಿರಬಹುದೆ? ಅದು ಹೇಗೆ ಸಾಧ್ಯ ? ಪೀಕೆ ಮತ್ತು ಸೀನಿಯರ್ ರೆಡ್ಡಿಯ ಸಂಬಂಧ ವ್ಯವಹಾರವನ್ನು ಮೀರಿ ಸ್ನೇಹದ ಹಂತವನ್ನು ಮುಟ್ಟಿತ್ತು, ಅಂಥ ಸ್ನೇಹಿತನನ್ನು ಅಣ್ಣ ಮುಗಿಸಲು ಸುಫಾರಿ ನೀಡುತ್ತಾನೆ ಅಂದರೆ ನಂಬಲು ಅಸಾಧ್ಯ. ಮಹೇಶ ರೆಡ್ಡಿಯನ್ನು ನೋಡತ್ತಾ "ನಿನಗೆ ತಪ್ಪು ಮಾಹಿತಿ ಬಂದಿದೆ. ನೀನು ಅದನ್ನು ಸತ್ಯ ಎಂದು ನಂಬಿರುವೆ. ನಮ್ಮಣ್ಣ, ನಿಮ್ಮಪ್ಪನನ್ನು ಕೊಲ್ಲಲು ಸುಫಾರಿ ನೀಡಿರಲು ಸಾಧ್ಯವೇ ಇಲ್ಲ. ಅಂಥಾ ಸ್ನೇಹ ಅವರದು" ಎಂದ.

ರೆಡ್ಡಿ ನಕ್ಕನು. ಹಿಂದಕ್ಕೆ ತಿರುಗಿ ಸೋಫಾದ ಮೇಲೆ ಕುಳಿತು ಕುತೂಹಲದಿಂದ ಕೇಳುತ್ತಿದ್ದವರನ್ನು ಒಮ್ಮೆ ನೋಡಿ, ಮತ್ತೆ ಮಹೇಶನತ್ತ ತಿರುಗಿ, "ನೀವು ಅಣ್ಣ ತಮ್ಮ ಇಬ್ಬರೂ ಕಳ್ಳನನ್ನ ಮಕ್ಕಳು. ನಿಮಗೆ ಸ್ನೇಹ ನಂಬಿಕೆ ಅಂದರೆ ಏನೂ ಗೊತ್ತಿಲ್ಲ. ನಿಮ್ಮ ನಂಬಿಕೆ, ಮೌಲ್ಯ ಎಲ್ಲ ಬರೀ ಹಣ. ನಿನಗೆ ಹಣವಾದ್ರೆ, ನಿಮ್ಮಣ್ಣನಿಗೆ ಹಣ, ಆಸ್ತಿ, ಹೆಸರು, ಅಧಿಕಾರ! ಅವುಗಳ ಮುಂದೆ ಮನುಷ್ಯರು ತೃಣಮಾತ್ರ. ನಿಮ್ಮಣ್ಣ ನಮ್ಮಪ್ಪನನ್ನು ಮುಗಿಸಲು ನಾಯ್ಡುಗೆ ಸುಫಾರಿ ಕೊಟ್ಟಿದ್ದು ನನಗೆ ಗೊತ್ತಿದೆ. ಅದನ್ನು ಎರಡೆರಡು ಮೂಲಗಳಿಂದ ದೃಢಪಡಿಸಿಕೊಂಡಿದ್ದೇನೆ. ಕೈಕಾಲು ಕಳೆದುಕೊಂಡ ನಂತರ ಸ್ವತಃ ನಾಯ್ಡು ನನ್ನ ಬಳಿ ಹೇಳಿದ್ದಾನೆ"- ಅವನು ಹಾಗೆ ನುಡಿದವನೆ ತನ್ನೊಳಗೆ ಮಾತನಾಡಿಕೊಳ್ಳುವಂತೆ ಮೆಲ್ಲಗೆ ಮಾತನಾಡತೊಡಗಿದ. ಅವನು ಏನೋ ನಿರ್ಧಾರಕ್ಕೆ ಬಂದವನಂತೆ, ಆ ನಿರ್ಧಾರದಿಂದ ಆತ್ಮವನ್ನು ತಡಕಾಡುವವನಂತೆ " ನಮ್ಮಪ್ಪನ ಬದುಕು ಹಾಳಾಯಿತು. ಹೆಚ್ಚು ಕಡಿಮೆ ನನ್ನ ಬದುಕು ಹಾಳಾಗುವ ಸ್ಥಿತಿಯಲ್ಲದೆ. ಈ ಪಾಪದ ಬದುಕಿನಲ್ಲಿ ಕಣ್ಣು ಬಿಟ್ಟು ನಾನು ಅದರಲ್ಲಿ ಬಹಳ ದೂರ ಬಂದುಬಿಟ್ಟಿದ್ದೇನೆ. ಇನ್ನೂ ನನಗೆ ಹಿಂತಿರುಗಲು ಸಾಧ್ಯವಿಲ್ಲ. ಅದರಲ್ಲೇ ಬದುಕಬೇಕು, ಅದರಲ್ಲೇ ನನ್ನ ಎಲ್ಲ ಸಮಸ್ಯೆಗಳಿಗೆ ಉತ್ತರವನ್ನು ಕಂಡುಕೊಳ್ಳಬೇಕು"- ಅವನ ಮಾತನ್ನು ತಡೆದು ಏನನ್ನೋ ಹೇಳಲು ಪ್ರಯತ್ನಿಸಲು ತೊಡಗಿದ ಭೂಮಿಗೌಡನನ್ನು ತಡೆದು ಗಟ್ಟಿಯಾಗಿ "ನೀವು ಮಾತನ್ನಾಡಬೇಡಿ ಪ್ರೊಫೆಸರ್, ನನಗೆ ಗೊತ್ತು ನೀವು ಏನ್ ಮಾತ್ನಾಡ್ತೀರಾ ಅಂತ. ಅದು ಬರೀ ಮಾತು, ಬರೀ ಉಪದೇಶ. ನೀನು ಒಳ್ಳೆಯವನಾಗು, ಸನ್ಮಾರ್ಗ ತುಳಿ, ಇನ್ನು ಜೀವನ ವಿಸ್ತಾರವಾಗಿದೆ...ಅದು ಇದು ಅಂತ ಉಪದೇಶ. ಅವೆಲ್ಲಾ ನೀವೇ ಇಟ್ಕೊಳ್ಳಿ. ನಮಗೆ ದುಡ್ಡು ಬೇಕು. ಅದರಲ್ಲೇ ನಾವು ಹುಟ್ಟಿದ್ದೇವೆ, ಬೆಳೆದಿದ್ದೇವೆ. ಅದಕ್ಕಾಗಿ ನಾವು ಮಾಡಬಾರದ್ದನ್ನೆಲ್ಲಾ ಮಾಡಿದ್ದೇವೆ. ನಮಗೆ ಚುರುಕ್ ಅನ್ನೋ ಕರಳು ಎಂದೂ ಇರಲೇ ಇಲ್ಲ. ಅಂಥಾದ್ದನೆಲ್ಲ ಇಟ್ಟುಕೊಂಡು ಈ ದಂದೆಯಲ್ಲಿರೋಕಾಗಲ್ಲ. ನೀವು ಸುಮ್ನೆ ಕೂತ್ಕೊಳ್ಳಿ" ಎಂದು, ಮಹೇಶನನ್ನು ಕುರಿತು "ಈಗ ನನಗಿರೋದು ದ್ವೇಷ ಮಾತ್ರ. ನಮ್ಮಪ್ಪನನ್ನು ಕೊಂದ ನಿನ್ನಣ್ಣನ ಮೇಲೆ ಸೇಡು ತೀರಿಸಿಕೊಳ್ಳೋದು. ನಿಮ್ಮಣ್ಣನ ಕಣ್ಣೆದುರಿಗೇ ಅವನ ರಕ್ತಸಂಬಂಧದ ಒಂದೊಂದೇ ಕೊಂಡಿಯನ್ನು ಕತ್ತರಿಸುತ್ತಾ ಹೋಗಬೇಕು. ನೀನು, ನಿನ್ನಪ್ಪ, ಅವ್ವ, ಪೀಕೆ ಮಗಳು, ಹೆಂಡತಿ.....ಹಿಂಗೇ ಒಂದೊಂದೇ ಕರುಳ ಬಳ್ಳಿಗಳು ಕಿತ್ತುಬರಬೇಕು, ಅದೂ ಅವನ ಕಣ್ಣೆದುರಿಗೇ.

ಕಳೆದುಕೊಳ್ಳುವ ದುಃಖ ಹೇಗಿರುತ್ತೆ ಅಂತ ಅವನಿಗೆ ತಿಳಿಯಬೇಕು. ಎಲ್ಲರನ್ನು ಕಳೆದುಕೊಂಡು ಬೆಂಗಳೂರು ಪೇಟೆಯಲ್ಲಿ ಹುಚ್ಚನಂತೆ ಅಲೆದಾಡಬೇಕು. ಎಲ್ಲಾ ಇದ್ದು ಇಲ್ಲದಂತೆ ನರಳಬೇಕು. ಆಗಲೇ ನನಗೆ ತೃಪ್ತಿ. ನನ್ನ ಪಯಣಕ್ಕೆ ಕೊನೆ"- ಅವನು ಮಾತು ನಿಲ್ಲಿಸಿದ. ಕಣ್ಣು ಮುಚ್ಚಿದ. ಅವನ ಬಲಿಷ್ಠವಾದ ಬಲಗೈ ತುಸು ಮೇಲಕ್ಕೆದ್ದು, ಹಿಂದಕ್ಕೆ ಬಾಗಿ ಬಿರುಸಾಗಿ ಮಹೇಶನ ಕುತ್ತಿಗೆಯನ್ನು ಮುಟ್ಟಿತು.

ಮಹೇಶ ನೋವಿನಿಂದ 'ಅಪ್ಪಾ' ಎಂದು ಚೀರಿದ, ಅವನ ಕಣ್ಣುಗಳಲ್ಲಿ ಬಳ ಬಳನೆ ನೀರು ಸುರಿದವು. ಅವನ ಚೀರಾಟವನ್ನು ಕಂಡ ಕೂಡಲೇ ಶರಣ್ ಚಂಗನೆ ಮೇಲೆದ್ದು ರೆಡ್ಡಿಯನ್ನು ತಡೆಯಲು ಹಿಂದಿನಿಂದ ಅಪ್ಪಿದ. ಅತ್ಯಂತ ಚುರುಕಾಗಿ ಹಿಂದಕ್ಕೆ ತಿರುಗಿ, ಶರಣ್‌ನ ಹಿಡಿತವನ್ನು ಬಿಡಿಸಿಕೊಂಡ ರೆಡ್ಡಿ, ತನ್ನ ಕೆಂಡದಂಥ ಕಣ್ಣುಗಳಿಂದ ಅವನನ್ನು ದುರುದುರನೆ ನೋಡಿ ಎರಡು ಹೆಜ್ಜೆ ಹಿಂದ ಸರಿದು, ತನ್ನ ಮಂಡಿಯನ್ನು ಬಗ್ಗಿಸಿ, ಶರಣ್‌ನ ಎರಡು ತೊಡೆಯ ಮಧ್ಯೆ ಬಿರುಸಾಗಿ ಏಟುಕೊಟ್ಟ. ಶರಣ್‌ನ ಇಡೀ ದೇಹ ಕಂಪಿಸಿತು. ಕಣ್ ಮುಂದೆ ಭಾರಿ ಬೆಳಕೊಂದು ಸಿಡಿದಂತಾಯಿತು. ದೇಹದ ನರನರವೂ ಸೆಟೆದುಕೊಂಡು ಚಲನೆ ಕಳೆದುಕೊಂಡ ನೋವಿನ ಕೊರಡಂತಾದ ಅನಭವ. 'ಅಮ್ಮಾ' ಎಂದು ಕೂಗಿದ ಶರಣ್ ತನ್ನ ಎರಡೂ ಕೈಗಳನ್ನು ತೊಡೆಯ ಮಧ್ಯೆ ಅದುಮಿ ಹಿಡಿದುಕೊಂಡು ಕೆಳಕ್ಕೆ ಕುಸಿದ ಅಣ್ಣನ ನೆರವಿಗೆ ಚಂದ್ರಿಕಾ ನೆಗೆದೆದ್ದು ಅವನ ಭುಜವನ್ನು ಹಿಡಿದುಕೊಂಡಳು. ಅವಳ ಬೆಳ್ಳಿ ಅವಳ ಹಿಂದೆಯೇ ಆತಂಕದಿಂದ ಬಂದು ನಿಂತಿತು.

ಭೂಮಿಗೌಡ ಚಿಂತಿಸಿದ. ಈ ರೆಡ್ಡಿಯನ್ನು ಹೀಗೇ ಬಿಟ್ಟರೆ ಯಾರನ್ನಾದರು ಸಾಯಿಸ್ತಾನೆ. ಅವನ್ನು ಹಿಡಿದು ಕಟ್ಟಿಹಾಕಬೇಕು. ಅವನೊಬ್ಬ ಅರೆಹುಚ್ಚ ! ಮ್ಯಾನಿಯಕ್ ! ಮನಸ್ಸು ವಿಕೃತವಾಗಿದೆ. ವಿಕೃತ ಮನಸ್ಸು ಏನು ಮಾಡಲೂ ಹೇಸದು. ಭೂಮಿಗೌಡ ನಿಧಾನವಾಗಿ ಎದ್ದು ನಿಂತ. ರೆಡ್ಡಿಯ ಮೇಲೆ ಆಕ್ರಮಣ ಮಾಡಲು ಮುಂದಾದ.

ರೆಡ್ಡಿ ಕೂಡಲೇ ಚುರುಕಾದ. ಅವನಿಗೆ ಗೊತ್ತಿತ್ತು. ಕಾಳಲೋಕದ ಅವನ ಅನುಭವ ವ್ಯಕ್ತಿಯ ಆಳ ಅಗಲಗಳನ್ನೂ ಅಳೆಯುವ ಶಕ್ತಿಯನ್ನು ತಂದುಕೊಟ್ಟಿತ್ತು. ಶರಣ್ ಮತ್ತು ಮಹೇಶ್ ಅವನಿಗೇನೂ ಅಲ್ಲ. ಅವರನ್ನು ತರಗೆಲೆಯಂತೆ ಉಫ್ ಎಂದು ಬಾಯ ಗಾಳಿಯಿಂದ ತೂರಬಲ್ಲ. ಆದರೆ ಗೌಡ ಅಷ್ಟು ಸರಳನಲ್ಲ. ಬರೀ ಅವನ ತಲೆ ಮಾತ್ರವಲ್ಲ; ಮೈ ಕೂಡ ಶಕ್ತಿದಾಯಕವಾಗಿದೆಯೆಂದು ಅಂದಾಜಿಸಿದ್ದ. ಅವನೊಡನೆ ದೈಹಿಕವಾಗಿ ಮುಖಾ ಮುಖಿಯಾಗುವುದು ಅವನಿಗೆ ಬೇಡವಾಗಿತ್ತು. ಅವನನ್ನು ಬೇರೆ ವಿಧಾನಗಳಂದ ದಾರಿಗೆ ತರಬೇಕು ಎಂದು ಮಂದಹಾಸವನ್ನು ಬೀರಿ "ಪ್ರೊಫೆಸರ್, ನೀವು ಸಭ್ಯ ವಿದ್ಯಾರ್ಥಿಯಂತೆ ಕುಳಿತುಕೊಳ್ಳಿ. ಇಲ್ಲದಿದ್ದಲ್ಲಿ" - ಚಂದ್ರಿಕಾಳತ್ತ ಬಾಕುವನ್ನು ತೋರಿ, ಈ ನಿಮ್ಮ ಹೆಂಗಸು, ನಿಮ್ಮ ವೀಕ್ ಪಾಯಿಂಟ್- ಇವಳನ್ನು ಮೊದಲು ಎತ್ತುತ್ತೇನೆ" ಎಂದ.

ಭೂಮಿಗೌಡನಿಗೆ ರೆಡ್ಡಿ ಈಗ ಏನು ಬೇಕಾದರೂ ಮಾಡಬಲ್ಲ ಅನ್ನಿಸಿತು. ರಿಸ್ಕ್ ತೆಗೆದುಕೊಳ್ಳಲು ಹೋದರೆ ಚಂದ್ರಿಕಾಳನ್ನು ಘಾಸಿಗೊಳಿಸಬಹುದು. ತಾಳ್ಮೆವಹಿಸಿ ಮುಂದುವರಿಯುವುದು ಸೂಕ್ತ ಎಂದುಕೊಂಡು ಮತ್ತೆ ಸೋಫಾದಲ್ಲಿ ಕುಳಿತನು.

ಮಹೇಶ ಬಲಗೈಯಿಂದ ತನ್ನ ಕುತ್ತಿಗೆಯನ್ನು ಹಿಡಿದುಕೊಂಡು ನರಳುತ್ತಿದ್ದ. ಅವನ ಕಿವಿಯಿಂದ ರಕ್ತ ಹನಿದಿತ್ತು.

ಚಂದ್ರಿಕಾ ಶರಣ್‌ನನ್ನು ಮೇಲಕ್ಕೆಬ್ಬರಿಸಿ ಸೋಫಾದ ಮೇಲೆ ಕೂರಿಸಿದ್ದಳು. ಅವಳು ಭಯದಿಂದ ವಿಹ್ವಲಗೊಂಡಿದ್ದಳು. ಬೆಳ್ಳಿಯನ್ನು ತನ್ನ ಎದೆಗವುಚಿಕೊಂಡಳು. ಅವಳು ಭೂಮಿಗೌಡನನ್ನು ನೋಡಿದಳು. ಅಲ್ಲಿ ಏನೋ ಭರವಸೆಯ ಬೆಳಕಿದೆ ಎನಿಸಿತು ?

ಪರಿಸ್ಥಿತಿ ತನ್ನ ನಿಯಂತ್ರಣದಲ್ಲಿದೆಯೆಂದು ರೆಡ್ಡಿ ಬಗೆದ. ಅವನು ಮಹೇಶನನ್ನು ನೋಡಿ ಅತ್ಯಂತ ಮೆಲ್ಲಗೆ, ಅತ್ಯಂತ ವಿಕಾರವಾಗಿ ನಕ್ಕ. ಅವನ ಕೆನ್ನೆಯ ಮೇಲಿನ ರಕ್ತ, ಕುತ್ತಿಗೆಯ ಮೇಲಿನ ನೀರು, ಕಿವಿಯಲ್ಲಿ ಹನಿಯುತ್ತಿದ್ದ ನೆತ್ತರು- ಅವನಿಗೊಂದು ಬಗೆಯ ತೃಪ್ತಿ ಕೊಟ್ಟಿತ್ತು. ಮಹೇಶನಿಗೆ ಎದೆ ನೋವು ತೀವ್ರಗೊಂಡಿತ್ತು. ಅವನು ಬಿಡುತ್ತಿದ್ದ ಏದುಸಿರು ಎಲ್ಲರಿಗೂ ಕೇಳಿಸುತ್ತಿತ್ತು. ಅವನ ಎಡಎದೆಯ ನಡುಭಾಗದಲ್ಲಿ ಮಿಡಿದಂತೆ ಪ್ರಾರಂಭವಾಗಿ, ಅನಂತರ ಭತ್ತ ಕುಟ್ಟಿದಂತೆ ಕುಟ್ಟಿ ಅದುಮಿ ಹಿಡಿದಿಡಿದು ಬಿಟ್ಟಂತ ನೋವು. ತಾನು ಸಾಯುತ್ತಿದ್ದೇನೆಂಬ ಭಯವಾಯಿತು. ತನ್ನ ಎಡ ಜೇಬಿನಲ್ಲಿದ್ದ ಸಣ್ಣ ಮಾತ್ರೆಯೊಂದನ್ನು ತೆಗೆದು ನಾಲಗೆಯ ಕೆಳಗಿಟ್ಟುಕೊಳ್ಳಬೇಕೆನ್ನಿಸಿತು. ಎಡಗೈಯನ್ನು ಜುಬ್ಬಾದ ಜೇಬಿಗೆ ಕೈಯಾಕಬೇಕು. ಆದರೆ...ಆದರೆ ಕೈ ಅಲ್ಲಾಡಿಸಲು ಆಗುತ್ತಿಲ್ಲವಲ್ಲ ! ಅವನು ಮನಸ್ಸನ್ನು ಕೇಂದ್ರೀಕರಿಸಿದ. ನಿಧಾನವಾಗಿ ಕೈ ಅಲುಗಿಸಿ ತನ್ನ ಎಡ ಜುಬ್ಬಾ ಜೇಬಿಗೆ ಹಾಕಿ ಮಾತ್ರೆಯನ್ನು ತೆಗೆಯಲು ಮುಂದಾದ. ಬೆರಳುಗಳು ತಡಕಾಡತೊಡಗಿದವು.

ಮಹೇಶನನ್ನೇ ನೋಡುತ್ತಿದ್ದ ರೆಡ್ಡಿ, ಅವನ ಪ್ರಯತ್ನವನ್ನೂ ಅರ್ಥಮಾಡಿಕೊಂಡ. 'ಮಗನೇ, ಬದುಕಬೇಕೆಂಬ ಆಸೆಯೇ ನಿನಗೆ ! ಇಲ್ಲ, ಇಂದು ನಿನ್ನ ಕೊನೆಯ ಕ್ಷಣ, ಸೇಡಿನ ನನ್ನ ಮೊದಲ ಹೆಜ್ಜೆ. ಸಾವಿನ ರುಚಿ ತೋರಿಸುತ್ತೇನೆ ನಿನಗೆ' ಎಂದುಕೊಂಡವನೆ, ನಿಂತಲ್ಲೇ ಎಡಗಾಲನ್ನು ನೆಲಕ್ಕೆ ಬಲವಾಗಿ ಊರಿ, ಬಲಗಾಲನ್ನು ಮೇಲಕ್ಕೆತ್ತಿ, ಗಿರಗಿರನೆ ಎರಡು ಸುತ್ತು ಸುತ್ತಿ, ಮೇಲಕ್ಕೆತ್ತಿದ ಕಾಲನ್ನು ಮಹೇಶನ ಎದೆಗೆ ಗುರಿಯಾಗಿಸಿ ಒದ್ದ. ವೇಗ ಶಕ್ತಿಯನ್ನು ವೃದ್ಧಿಸಿತ್ತು. ಕಾಲು ಎದೆಗೆ ಕೊಟ್ಟ ಏಟಿನಿಂದಾಗಿ ಮಹೇಶ ಸೋಫಾದ ಹಿಂದಕ್ಕೆ ಜಗ್ಗಿದ. ಸೋಫಾ ಅಲ್ಲಾಡಿತು. ಮಹೇಶನಿಗೆ ನೋವು ತಾರಕಕ್ಕೇರಿತು. ಬರೀ ನೋವು.....ನೋವು ಅಷ್ಟೆ. ರೆಡ್ಡಿ, ಶರಣ್, ನಾಯಿಮರಿ, ಈ ಪ್ರೊಫೆಸರ್, ಆ ಹೆಂಗಸು- ಎಲ್ಲಾ ಅಸ್ಪಷ್ಟವಾಗತೊಡಗಿದರು. ಕಣ್ಣು ಕತ್ತಲಾಯಿತು. ಬಾಯಿ ಉಪ್ಪುಪ್ಪು. ಏನಿದು ? ಏನಿದು ?.... ಅವನ ಮಿದುಳು ಕೆಲಸ ಮಾಡುವುದನ್ನು ನಿಲ್ಲಿಸಿತು.

ಅವನ ಬಾಯಿಂದ ಬುಳು ಬುಳನೆ ರಕ್ತ ಹೊರ ಹೊಮ್ಮಿತು. ಅವನ ತಲೆ ಬಲಕ್ಕೆ ವಾಲಿತು.

ಚಂದ್ರಿಕಾ ಗರಬಡಿದವಳಂತಾದಳು. ಅವಳ ಎದೆ ಬಡಿತ ಅವಳಿಗೆ ಸ್ಪಷ್ಟವಾಗಿ ಕೇಳಿಸುತ್ತಿತ್ತು. ಶರಣ್ ತನ್ನ ತೊಡೆಯ ಮಧ್ಯೆಯ ನೋವನ್ನು ಕ್ಷಣ ಮರೆತ, ಅವನ ಕಣ್ಣುಗಳು ಭೀತಗೊಂಡವು. ಅವನ ನಾಲಗೆ ಒಣಗಿತು. ಅವರಿಬ್ಬರಿಗೂ ಬಾಯಿಂದ ಮಾತು ಬಾರದಾಯಿತು.

ಭೂಮಿಗೌಡನಿಗೆ ಮಹೇಶ ಸತ್ತಿರುವುದು ಖಾತ್ರಿಯಾಯಿತು. ಅವನು ಧಿಡೀರನೆ ಮೇಲಕ್ಕೆದ್ದು, ರೆಡ್ಡಿಯನ್ನು ಲೆಕ್ಕಿಸದೆ, ಮಹೇಶನ ಬಳಿ ಸಾರಿ ಅವನ ಕೈಯನ್ನಿಡಿದು ನಾಡಿಯನ್ನು ಪರೀಕ್ಷಿಸಿದನು. ನಾಡಿ ನಿಂತಿತ್ತು, ಮಹೇಶನ ದೇಹದಲ್ಲಿ ಇನ್ನೂ ಬಿಸಿಯಿತ್ತು. ಆದರೆ ಅವನ ಪ್ರಾಣ ಪಕ್ಷಿ ಹಾರಿಹೋಗಿತ್ತು.

ಭೂಮಿಗೌಡನ ಕುತ್ತಿಗೆಗೆ ತಣ್ಣನೆಯ ಹರಿತವಾದ ಮೊನೆ ತಾಗಿತು. ಅವನು ಕತ್ತನ್ನು ಹಿಂದಕ್ಕೆ ಮೆಲ್ಲಗೆ ತಿರುಗಿಸಿದ.

## ಅಧ್ಯಾಯ : ಹದಿನೆಂಟು

"ಪ್ರೊಫೆಸರ್, ನಿಮಗೆಷ್ಟು ಸಾರಿ ಹೇಳಬೇಕು ? ಸುಮ್ಮನೆ ಒಂದು ಕಡೆ ಕೂರಿ ಅಂತ. ಸ್ವಲ್ಪ ಅತಿಯೆನಿಸುವ ನಡವಳಿಕೆ ನಿಮ್ಮದು. ಏನೋ ಪರಿಸ್ಥಿತಿ ನಿಮ್ಮನ್ನು ನಮ್ಮ ಜೊತೆ ಕೂಡಿಸಿತು. ರಾಮನಗರದಲ್ಲಿ ಬಸಂತಕುಮಾರ್ ನಿಮ್ಮನ್ನು ಸುಮೊದಲ್ಲಿ ಕರೆದುಕೊಂಡು ಹೋಗಿ ಅಂತ ಹೇಳಿದಾಗಲೇ, ನನಗಿಷ್ಟವಿರಲಿಲ್ಲ. ನಿಮಗೂ ನಮ್ಮ ಜೊತೆ ಬರುವುದು ಇಷ್ಟವಿರಲಿಲ್ಲವೆಂಬುದು ನಿಮ್ಮ ಮುಖಭಾವದಿಂದಲೇ ವ್ಯಕ್ತವಾಗುತ್ತಿತ್ತು. ಬಸಂತಕುಮಾರನ ಒತ್ತಾಯಕ್ಕೆ ನಾನು ಮಣಿದೆ. ಏಕೆ ಗೊತ್ತೆ ? ಅವನು ನನಗೆ ಬೇಕು. ಈ ಚಂದ್ರಿಕಾಳ ಗಂಡ ಚಂದ್ರಶೇಖರನ ಮತ್ತೊಂದು ರೂಪ ಅವನು. ಇರಲಿ, ಈಗಿನ ವಿಷಯಕ್ಕೆ ಬರೋಣ. ಮಹೇಶನನ್ನು ಮುಗಿಸಬೇಕೆಂಬುದು ನನ್ನ ಉದ್ದೇಶವಾಗಿತ್ತು. ಅದು ಈಡೇರಿದೆ. ಅದು ನನ್ನ ವೈಯಕ್ತಿಕ ವಿಚಾರ. ನಿಮಗೂ ಅದಕ್ಕೂ ಸಂಬಂಧವಿಲ್ಲ, ತಿಳಿಯಿತೆ ?"- ಎಂದು ಬಾಕುವನ್ನು ಕುತ್ತಿಗೆಯ ಮೇಲೆ ಮೃದುವಾಗಿ ಸವರಿದ.

ಬಾಕುವಿನ ತಂಪು ಒಮ್ಮೆ ಭೂಮಿಗೌಡನನ್ನು ಕಂಪಿಸಿತು. ಆದರೆ ಅದನ್ನು ತೋರಗೊಡದ ಭೂಮಿಗೌಡ "ನಮಗೂ ಮಹೇಶನ ಕೊಲೆಗೂ ಸಂಬಂಧವಿಲ್ಲವೆಂದು ಹೇಗೆ ಹೇಳ್ತೀರಾ, ರೆಡ್ಡಿ ? ನೀವು ಅವನನ್ನು ಸಾಯಿಸುವುದನ್ನು ನಾವು ಕಣ್ಣಾರೆ ಕಂಡಿದ್ದೇವೆ" ಎಂದು ಪ್ರಶ್ನಿಸಿದ.

"ನೀವು ಸಂಬಂಧವಿಲ್ಲವೆಂದು ತಿಳಿಯಬೇಕು. ಅದರಲ್ಲಿ ನಿಮ್ಮ ಸೇಫ್ ಇದೆ. ಇಲ್ಲದಿದ್ದಲ್ಲಿ ನಿಮ್ಮ ಪ್ರಾಣಕ್ಕೂ ಅಪಾಯವಿದೆ, ಮರೆಯದಿರಿ. ಈಗ ಒಬ್ಬನನ್ನು ಸಾಯಿಸಿದ ನನಗೆ ಮತ್ತಷ್ಟು ಜನರನ್ನು ಸಾಯಿಸಲು ಕಷ್ಟವಾಗದು" ಎಂದ ರೆಡ್ಡಿ ಭೂಮಿಗೌಡನನ್ನು ಸೋಫಾ ಮೇಲೆ ಕೂರುವಂತೆ ಸನ್ನೆಮಾಡಿದನು.

ಭೂಮಿಗೌಡ ಮಹೇಶನ ದೇಹದ ಪಕ್ಕದಲ್ಲಿ ಕುಳಿತ. ತನ್ನ ಎದುರಿಗೆ ಕುಳಿತವರನ್ನು ಕಣ್ಣಲ್ಲೇ ಅಳೆಯುವ ಪ್ರಯತ್ನ ಮಾಡಿದ. ಸಮಯ ಬಂದರೆ ರೆಡ್ಡಿಯನ್ನು ನಿರ್ವೀರ್ಯಗೊಳಿಸಲು ಇವರ ನೆರವು ನನಗೆ ಸಿಗುವುದೆ ಎಂದು ಚಿಂತಿಸಿದ. ಚಂದ್ರಿಕಾ ನಿಜಕ್ಕೂ ನಡುಗುತ್ತಿದ್ದಳು. ಅವಳ ಕಣ್ಣೆದುರೇ ನಡೆದ ಕ್ರೌರ್ಯವನ್ನು ಅವಳು ಜೀರ್ಣಿಸಿಕೊಳ್ಳಲಾರದವಳಾಗಿದ್ದಳು. ಅವಳ ದೇಹಕ್ಕಿಂತ ಅವಳ ಮನಸ್ಸು ಹೆಚ್ಚು ನಿತ್ರಾಣಗೊಂಡಿತ್ತು. ಇನ್ನು ಶರಣ್ ಅವನು ಸಂಪೂರ್ಣ ಕುಸಿದುಹೋಗಿದ್ದ. ಚಿಕ್ಕಂದಿನಿಂದ ಸುಖವಾಗಿ ಬೆಳೆದ ದೇಹ. ನೋವನ್ನು ಅನುಭವಿಸಿ ಬೆಳೆದಿಲ್ಲ. ಹೀಗಾಗಿ ರೆಡ್ಡಿಯ ಒಂದೇ ಒಂದು ಹೊಡೆತ ಅವನನ್ನು ಅಲ್ಲಾಡಿಸಿತು. ಅದು ಅವನ ತೊಡೆಯ ಮಧ್ಯೆ ಬಿದ್ದ ಏಟು. ಸಹಜವಾಗಿ ಯಮಯಾತನೆ ತರುವಂಥದು. ಆ ನೋವು ಅವನ ಮುಖದಲ್ಲಿ ಎದ್ದು ಕಾಣುತ್ತಿತ್ತು. ಅದರಲ್ಲೂ ತಂಗಿಯ ಮುಂದೆ ಆದ ಅವಮಾನ ಅವನನ್ನು ಕುಗ್ಗಿಸಿತ್ತು. ಇಂಥ ಸ್ಥಿತಿಯಲ್ಲಿರುವ ಇವರಿಬ್ಬರಿಂದ ನೆರವು ನಿರೀಕ್ಷೆ ಮಾಡುವುದು ಸ್ವಲ್ಪ ಕಷ್ಟ. ಈ ವಿಕೃತ-

ದ್ವೇಷ ತುಂಬಿದ ರೆಡ್ಡಿಯನ್ನು ಏಮಾರಿಸಿ ನಿವಾರಿಸಬೇಕು. ಅವನು ಹೋದ ದಾರಿಯಲ್ಲೇ ಹೋಗಿ, ಸಮಯ ನೋಡಿ ನಾವು ಇವನಿಂದ ಬಚಾವಾಗಬೇಕು.

ಎರಡು ಸೋಫಾಗಳ ನಡುವಿನ ತುದಿಯಲ್ಲಿ ನಿಂತು ರೆಡ್ಡಿ "ಶರಣ್, ಈಗ ನೀನು ಹೇಳಿದ ಕೆಲಸ ಮಾಡಬೇಕು. ವೆಹಿಕಲ್ ಪಾರ್ಕ್‌ಗೆ ಹೋಗಿ ನನ್ನ ಸುಮೊವನ್ನು ಇಲ್ಲಿಗೆ ತರಬೇಕು" ಎಂದು ತನ್ನ ಪ್ಯಾಂಟಿನ ಜೇಬಿನಿಂದ ಸುಮೊ ಕೀ ತೆಗೆದು ಅವನ ಮೇಲೆ ಎಸೆದ.

ಶರಣ್ ಮಿಸುಕಾಡದೆ ಕುಳಿತಿರುವುದನ್ನು ಕಂಡ ರೆಡ್ಡಿಗೆ ಕೋಪ ಕೆರಳಿತು. ಅವನ ಸರ್‍ರನೆ ಚಂದ್ರಿಕಾಳ ಮಗ್ಗುಲಿಗೆ ಬಂದು, ಅವಳ ಹಿಂದಲೆಯ ಕೂದಲನ್ನು ಬಿಗಿಯಾಗಿ ಹಿಡಿದು ಜಗ್ಗಿದ. ಅವಳು ನೋವಿನಿಂದ ಚೀರಿದಳು. ಭೂಮಿಗೌಡ ದಡಕ್ಕನೆ ಎದ್ದು ನಿಂತ. ಸೂಕ್ಷ್ಮಗ್ರಾಹಿಯಾದ ರೆಡ್ಡಿ ಜೋರಾಗಿ ನಕ್ಕು "ಎಷ್ಟು ಸಾರಿ ಹೇಳೋದು ನಿಮಗೆ ಪ್ರೊಫೆಸರ್ ? ಸುಮ್ಮನೆ ಕೂರಿ ಅಂತ. ನೀವೇನಾದರೂ ನಿಮ್ಮ ಆಟ ತೋರಿಸಲು ಮುಂದಾದರೆ ಮೊದಲು ಚಂದ್ರಿಕಾಳನ್ನು ಮುಗಿಸುತ್ತೇನೆ. ಅದರ ಬಗ್ಗೆ ನಿಮಗೆ ಅನುಮಾನವಿದೆಯೇ ?" ಎಂದು ಕೈಯಿಂದ ಕುಳಿತುಕೊಳ್ಳುವಂತೆ ಸೂಚಿಸಿದ.

ಭೂಮಿಗೌಡ ಮರು ಮಾತಾಡದೆ ಕೂತ

ಶರಣ್‌ಗೆ ಪರಿಸ್ಥಿತಿ ಅರ್ಥವಾಯಿತು. ಮಹೇಶನನ್ನೇ ಕೊಂದವನು ನನ್ನ ತಂಗಿಯನ್ನೇ ಬಿಟ್ಟಾನೆಯೇ ? ಅವನು ಏನು ಬೇಕಾದರೂ ಮಾಡಬಲ್ಲ. ಕಳೆದ ಆರೇಳು ವರ್ಷಗಳಿಂದ ಇವರನ್ನು ನೋಡುತ್ತಿದ್ದೇನೆ. ತಮ್ಮ ಉಳಿವಿಗಾಗಿ ಏನೂ ಮಾಡಲು ಏಸದ ಜನ. ಅವನು ಹೇಳಿದ ಹಾಗೆ ಕೇಳುವುದು ಒಳ್ಳೆಯದು. ಇಲ್ಲದಿದ್ದಲ್ಲಿ ಚಂದ್ರಿಕಾಳ ಪ್ರಾಣಕ್ಕೆ ಅಪಾಯ ಖಂಡಿತ. ಅತ್ಯಂತ ನೋವಿನಿಂದ ಮೇಲೆದ್ದು, ಕಾಲನ್ನು ಅಗಲವಾಗಿಡುತ್ತಾ ಕಾಟೇಜ್‌ನ ಬಾಗಿಲತ್ತ ಹೆಜ್ಜೆ ಹಾಕಿದ.

ಆಗ ರೆಡ್ಡಿ "ನಿಲ್ಲು ಶರಣ್, ನೀನೇನಾದರೂ ಟ್ರಿಕ್ಕಿ ಮಾಡಿದರೆ ನೆನಪಿಟ್ಟುಕೋ, ನಿನ್ನ ತಂಗಿಯನ್ನು ಇಲ್ಲ ಅನ್ನಿಸಿ, ನಿನ್ನ ಬೆನ್ನು ಬಿದ್ದು ಮುಗಿಸುತ್ತೇನೆ"- ತನ್ನ ಗಡಿಯಾರ ನೋಡಿ "ನೋಡು, ಈಗ ಎರಡೂ ಹತ್ತು, ಇನ್ನು ಹದಿನೈದು ನಿಮಿಷದೊಳಗೆ ಸುಮೊ ಕಾಟೇಜ್ ಬಾಗಿಲ ಬಳಿ ನಿಂತಿರಬೇಕು. ಹದಿನೈದು ನಿಮಿಷದೊಳಗೆ ಬರಲಿಲ್ಲ ಅಂದರೆ ಈ ಸಿಸ್ಟರ್ ಇರೋಲ್ಲ, ನೆನಪಿರಲಿ"- ಎಂದ.

ಶರಣ್ 'ಆಗಲಿ' ಎನ್ನುವಂತೆ ತಲೆಯಾಡಿಸಿ, ತನ್ನ ಗಡಿಯಾರ ನೋಡಿಕೊಂಡ. ಕಾಟೇಜ್‌ನ ಬಾಗಿಲನ್ನು ತೆರೆದು ಸರಸರನೆ ತಿಂಗಳ ಬೆಳಕಲ್ಲಿ ಮರೆಯಾದ. ಕಾರ್ ಪಾರ್ಕಿಂಗ್ ಜಾಗಕ್ಕೆ ಹೋಗಲು ಕನಿಷ್ಟ ಐದು ನಿಮಿಷಬೇಕು. ಸುಮೊ ತೆಗೆಯಲು, ಅಲ್ಲಿಂದ ಬರಲು ಐದು ಹತ್ತು ನಿಮಿಷಬೇಕು. ಅವನು ತನ್ನ ದೈಹಿಕ ನೋವಿನಲ್ಲೂ ತನ್ನ ಶಕ್ತಿಮೀರಿ ಹೆಜ್ಜೆ ಹಾಕಿದ. ಹೊರಗಿನ ಚಂದ್ರನ ಬೆಳಕು, ಬೀಸುತ್ತಿದ್ದ ತಂಗಾಳಿ ಅವನಿಗೆ ತುಸು ಚೈತನ್ಯ ತಂದಿತು. ಅವನಿಗೆ ಅರಿವಾಗಿತ್ತು: ಪಾಪಿಗಳ ಜೊತೆ ಹಣದಾಸೆಗೆ ಒಂದಾಗಿ ಕೆಲಸ ಮಾಡಿದರೆ ಎಂದು ದುರ್ಗತಿ ಬರಬಹುದು ಎಂಬುದಕ್ಕೆ ಅವನೇ ಸಾಕ್ಷಿಯಾಗಿದ್ದ. ಇಂದು ನಾನು ಎಂಥಾ ತಪ್ಪು ಮಾಡಿದೆ ? ಚಂದ್ರಿಕಾಳನ್ನು ಅವಳ ಇಷ್ಟಕ್ಕೆ ವಿರುದ್ಧವಾಗಿ ಸುಮೊದಲ್ಲಿ ಬರಲು ಒಪ್ಪಿಸಿ, ಎಂಥ ಸಂಕಟಕ್ಕೆ ಅವಳನ್ನು

ಸಿಲುಕಿಸಿದೆ ? ತಡವಾದರೆ ಅವನು ಚಂದ್ರಿಕಾಳನ್ನು ಮುಗಿಸುತಾನೆ. ಅವನು ಹೇಳಿದ ಹಾಗೆ ಕೇಳಿ, ಒಮ್ಮೆ ಅವನಿಂದ ಬಚಾವಾದರೆ ಸಾಕು.

ಶರಣ್ ಕಾರ್ ಪಾರ್ಕಿಂಗ್ ಜಾಗಕ್ಕೆ ಬಂದ. ನಡುರಾತ್ರಿ. ಅತ್ಯಂತ ನಿರ್ಜನವಾಗಿತ್ತು. ಸುಮೊ ಬಾಗಿಲನ್ನು ತೆರೆದು ಗಾಡಿಯನ್ನು ಸ್ಟಾರ್ಟ್‌ಮಾಡಿದ. ಒಂದು ಕ್ಷಣ, ಒಂದೇ ಒಂದು ಕ್ಷಣ ಅವನ ತಲೆಯಲ್ಲೊಂದು ಆಲೋಚನೆ ಮಿಂಚಿತು. ತಾನು ಸುಮೋದಲ್ಲಿ ಮೈಸೂರಿಗೆ ಹೊರಟು ಹೋದರೆ? ಪೊಲೀಸರಿಗೆ ಸುದ್ದಿ ಮುಟ್ಟಿಸಿದರೆ? ತನ್ನ ಪ್ರಾಣವಂತು ಉಳಿಯುತ್ತದೆ. ಆದರೆ....ಆದರೆ....ಚಂದ್ರಿಕಾಳ ಗತಿ! ರೆಡ್ಡಿ ಅವಳ ಪ್ರಾಣವನ್ನು ತೆಗೆದುಬಿಡುತ್ತಾನೆ. ಛೇ...ತಾನೆಂಥ ಸ್ವಾರ್ಥಿ. ತಾನೇ ಅವಳನ್ನು ತಂದು ಈ ಖೆಡ್ಡಾಕ್ಕೆ ಕೆಡಿವಿದಂತಾಯಿತಲ್ಲ ! ಇಲ್ಲ....ಅವಳ ಪ್ರಾಣ ಮುಖ್ಯ. ಗಾಡಿಯನ್ನು ಮೊದಲು ರಿವರ್ಸ್ ತೆಗೆದು, ಅನಂತರ ನಿಧಾನವಾಗಿ ಅದನ್ನು ಕಾಟೇಜ್‌ಗಳ ಕಡೆ ಡ್ರೈವ್ ಮಾಡಿದ.

ಕಾಟೇಜ್‌ನ ಒಳಗೆ ಟೆನ್ಸನ್ ಹೆಚ್ಚುತ್ತಾ ಬಂತು. ಭೂಮಿಗೌಡ ರೆಡ್ಡಿಯನ್ನೇ ನೋಡುತ್ತಿದ್ದ. ಚಂದ್ರಿಕಾಳ ಹಿಂದಲೆಯ ಕೂದಲು ರೆಡ್ಡಿಯ ಕೈಯಲ್ಲೇ ಇತ್ತು. ಬಲಗೈನ ಬಾಕು ಅವಳ ಕತ್ತಿನ ಗೋಮಾಳೆಯನ್ನು ಸವರುತ್ತಿತ್ತು. ಚಂದ್ರಿಕಾಳ ಮುಖದಿಂದ ಬೆವರು ತೊಟ್ಟಿಕ್ಕುತ್ತಿತ್ತು. ಅವಳ ಎಡಗೈ ಬೆಳ್ಳಿಯನ್ನು ಆಸರೆಗೆಂಬಂತೆ ಹಿಡಿದಿತ್ತು.

ಹದಿನೈದು ನಿಮಿಷ ಎಷ್ಟೋ ಹೊತ್ತಾದಂತೆನ್ನಿಸಿತು. ಇನ್ನೂ ಯಾಕೆ ಶರಣ್ ಬರಲಿಲ್ಲ. ಭೂಮಿಗೌಡ ತನ್ನ ಗಡಿಯಾರ ನೋಡಿಕೊಂಡ. ಹದಿನೈದು ನಿಮಿಷ ಆಗುತ್ತಾ ಬಂದಿತ್ತು. ಅವನು ರೆಡ್ಡಿಯ ಮುಖವನ್ನು ನೋಡಿದ. ರೆಡ್ಡಿ ಶಾಂತವಾಗಿದ್ದ ; ಹಿಂದಿನ ಕೋಪ, ಉದ್ವಿಗ್ನತೆ ಇರಲಿಲ್ಲ. ಇವನು ಶೀತಲ ಸ್ವಭಾವದವನು ಅಂದುಕೊಂಡ.

ರೆಡ್ಡಿ ಭೂಮಿಗೌಡನ ಮುಖವನ್ನು ನೋಡಿ "ಆತಂಕ ಬೇಡ, ಪ್ರೊಫೆಸರ್, ಶರಣ್ ಬಂದೇ ಬರುತ್ತಾನೆ. ಸುಮೊ ತಂದೇ ತರುತ್ತಾನೆ. ಏಕೆಂದರೆ, ಬ್ಲಡ್ ನೋಡಿ, ರಕ್ತಸಂಬಂಧ. ಅದು ಅಷ್ಟು ಸುಲಭವಾಗಿ ಕತ್ತರಿಸಿಹೋಗಲ್ಲ. ಎಂಥಾ ವಿಚಿತ್ರ ನೋಡಿ, ನಮ್ಮಪ್ಪನ ಕೊಲೆಯ ಸೇಡು ತೀರಿಸಿಕೊಳ್ಳಲು ನಾನು ಮಹೇಶನನ್ನು ಮುಗಿಸಿದ್ದು ರಕ್ತಸಂಬಂಧದ ಕಾರಣದಿಂದಲೇ. ಈಗ ಮಹೇಶ ಸತ್ತಿದ್ದೂ ಅವನ ಪೀಕೆಯ ರಕ್ತಸಂಬಂಧದ ಕಾರಣದಿಂದಲೇ, ರಕ್ತಸಂಬಂಧ ಅಷ್ಟು ಸುಲಭವಾಗಿ ಕರಗಿ ಹೋಗಲ್ಲ. ಅದಕ್ಕೆ ನಾನು ಹೇಳಿದ್ದು: ಶರಣ್ ಸುಮೊ ತಂದೇ ತರ್ತಾನೆ ಅಂತ" ಎಂದ.

ಸುಮೊ ಸದ್ದು ಕಾಟೇಜ್‌ನ ಹೊರಗೆ ಕೇಳಿಸಿತು. ರೆಡ್ಡಿ 'ನೋಡಿದಿರಾ ಗಾಡಿ ಬಂತು' ಅನ್ನುವ ರೀತಿ ಕಣ್ಣರಳಿಸಿ, ಹುಬ್ಬು ಕುಣಿಸಿದ.

ಕಾಟೇಜ್‌ನ ಬಾಗಿಲ ಬಳಿ, ಸಿಟ್‌ಔಟ್‌ಗೆ ಹೊಂದಿಕೊಂಡಂತೆ ಸುಮೊ ನಿಲ್ಲಿಸಿ, ಕಾಟೇಜ್‌ನ ಒಳಗೆ ಬಂದ. ಹೊರಗಿನ ತಿರುಗಾಟ, ತಂಗಾಳಿಯ ಪ್ರಭಾವದಿಂದ ಮೊದಲಿಗಿಂತ ಗೆಲುವಾಗಿದ್ದ.

.ರೆಡ್ಡಿ ಅವನನ್ನು ಭೂಮಿಗೌಡನ ಪಕ್ಕ ಕುಳಿತುಕೊಳ್ಳಲು ಹೇಳಿದ. ಶರಣ್ ಆ ಮಾತನ್ನು ಪಾಲಿಸಿದ. ರೆಡ್ಡಿ ಚಂದ್ರಿಕಾಳ ಹಿಂದಲೆ ಕೂದಲನ್ನು ಬಿಟ್ಟು. ಅವಳು ಒಮ್ಮೆ ನಿರಾಳಗೊಂಡು ಉಸಿರುಬಿಟ್ಟಳು. ರೆಡ್ಡಿ ಅವಳ ಪಕ್ಕ ಸರಿದು ಕೂತು "ಸಾರಿ ಸಿಸ್ಟರ್, ತಪ್ಪು ತಿಳೀಬೇಡ" ಎಂದು ತನ್ನ ಎಡಗೈಯಿಂದ ಅವಳ ಕುತ್ತಿಗೆಯನ್ನು ಬಳಸಿ, ಸ್ವಲ್ಪ ಹಿಡಿತವನ್ನು ಬಿಗಿಗೊಳಿಸಿದ. ಅವಳ ಕತ್ತು ನೋವು ತಿಂದಿತು.

ಅವಳು ಮತ್ತೆ 'ಅಮ್ಮಾ' ಅಂದಳು. ಅವಳ ಕಣ್ಣಿನಿಂದ ನೀರು ಪಟ ಪಟನೆ ಸಿಡಿದವು. ತನ್ನ ಯಜಮಾನತಿಯ ನೋವನ್ನು ಕಂಡು, ಅದಕ್ಕೆ ಕಾರಣನಾದ ರೆಡ್ಡಿಯ ಕಡೆ ತಿರುಗಿ ಬೆಳ್ಳಿ 'ಬೌವ್‌ವವೌ' ಎಂದು ತನ್ನ ಪ್ರತಿಭಟನೆಯನ್ನು ದಾಖಲಿಸಿತು. ರೆಡ್ಡಿ ಅದರ ಸದ್ದನ್ನು ನಿರ್ಲಕ್ಷಿಸಿದ. ಬೆಳ್ಳಿ ಮತ್ತೆರಡು ಬಾರಿ ಬೊಗಳಿ, ನಂತರ 'ಕಯ್‌ಯ್ ಕಯ್' ಎಂದು ರಾಗ ಎಳೆಯುತ್ತಾ ಚಂದ್ರಿಕಾಳ ತೊಡೆಯ ಮೇಲೆ ತಲೆ ಇಟ್ಟು ಅವಳ ಮುಖವನ್ನೇ ನೋಡುತ್ತಾ ಕುಳಿತಿತು.

ಶರಣ್ ಮತ್ತು ಭೂಮಿಗೌಡರನ್ನು ಕುರಿತು ರೆಡ್ಡಿ ಈಗ ನೀವೊಂದು ಕೆಲಸ ಮಾಡಬೇಕು. ನಾನು ಇಲ್ಲೇ ಕೂತಿರ್ತೇನೆ. ನೀವು ಈ ದಡಿಯನ ಹೆಣಾನ ಹೊತ್ತುಕೊಂಡು ಸುಮೊದ ಹಿಂಭಾಗದಲ್ಲಿ ಮಲಗಿಸಿರಿ. ಆಮೇಲೆ ಈ ರೂಂನಲ್ಲಿರುವ ನಮ್ಮ ಲಗ್ಗೇಜನ್ನು ಸುಮೊಗೆ ಸಾಗಿಸಿರಿ. ನಿಮ್ಮ ಕೆಲಸದಲ್ಲಿ ಸ್ವಲ್ಪ ಹೆಚ್ಚು ಕಮ್ಮಿ ಆದರೂ....."ಚಂದ್ರಿಕಾಳ ಹಿಡಿತವನ್ನು ಭದ್ರಗೊಳಿಸಿ, ಅವರ ಗಮನವನ್ನು ಅವಳತ್ತ ಸೆಳೆದು "ಈ ದಡಿಯನ ಜೊತೆಗೆ ಈ ಸಿಸ್ಟರ್ ಬಾಡೀನೂ ಸುಮೊಗೆ ಲೋಡ್ ಮಾಡ್ಬೇಕಾಗುತ್ತೆ" ಎಂದ.

ಅವರು ಅವನ ಮಾತಿಗೆ ಮರುಮಾತಾಡಲಿಲ್ಲ. ಮೊದಲು ಶರಣ್ ಎದ್ದು ಹೊರಹೋಗಿ ಸುಮೊದ ಹಿಂದಿನ ಬಾಗಿಲನ್ನು ತೆರೆದ. ಒಮ್ಮೆ ಸುತ್ತಲೂ ನೋಡಿದ. ಮಧ್ಯರಾತ್ರಿ ಯಾವ ಕಾಟೇಜ್‌ನಲ್ಲೂ ಬೆಳಕಿಲ್ಲಾ. ಚಂದ್ರನ ಹೊರತಾಗಿ ಮತ್ಯಾರೂ ಅವನ ಗಮನಕ್ಕೆ ಬರಲಿಲ್ಲ. ಅವನು ಒಳಬಂದು ಭೂಮಿಗೌಡನನ್ನು ನೋಡಿದ. ಭೂಮಿಗೌಡ ಮೇಲಕ್ಕೆದ್ದು ಬಲಕ್ಕೆ ಕತ್ತನ್ನು ವಾಲಿಸಿಕೊಂಡು ಕೂತಿದ್ದ ಶವವನ್ನು ಸೋಫಾದ ಮೇಲೆ ಮಲಗಿಸಿದ. ಆರಡಿ ಸೋಫಾದ ತುಂಬ ಶವ ತುಂಬಿಕೊಂಡಿತು. ಭೂಮಿಗೌಡ ಮಹೇಶನ ಎರಡೂ ತೋಳುಗಳನ್ನು ಪಟ್ಟಾಗಿ ಹಿಡಿದು ಮೇಲಕ್ಕೆತ್ತಿದ. ದೇಹ ಮೇಲಕ್ಕೆದ್ದಿತು. ಶರಣ್ ಎರಡು ಕಾಲುಗಳನ್ನು ಹಿಡಿದು ಎತ್ತಿದ. ಹೆಚ್ಚು ಕಡಿಮೆ ನೂರು ಕೇಜಿಗೂ ಮಿಗಿಲಾದ ಭಾರ ಈಗ ಅವರಿಗೆ ಅದು ದೊಡ್ಡ ಹೊರೆಯಂತೆ ಅನ್ನಿಸಿತು. ನಿಧಾನವಾಗಿ ಶವವನ್ನು ಹೊತ್ತು ಸಾಗಿದರು. ಸುಮೊದ ಹಿಂದಿನ ಸೀಟುಗಳ ಮಧ್ಯೆದ ಭಾಗದ ತಳದಲ್ಲಿ ದೇಹವನ್ನು ಮಲಗಿಸಿದರು. ಸುಮೊದಿಂದ ಕೆಳಗಿಳಿದು ಬಾಗಿಲು ಹಾಕಲು ಶರಣ್ ಯತ್ನಿಸಿದ. ಆದರೆ ಶವದ ಕಾಲುಗಳು ತಡೆದವು. ಭೂಮಿಗೌಡ ಮತ್ತೆ ಒಳನುಗ್ಗಿ ಶವದ ಕಾಲುಗಳನ್ನು ಮಡಿಚಿ, ಒಂದು ಮಗ್ಗುಲಿಗೆ ಅದು ಮಲಗುವಂತೆ ತಿರುಗಿಸಿದ. ಅವನು ಸುಮೊದಿಂದ ಕೆಳಗಿಳಿದ ಮೇಲೆ ಶರಣ್ ಬಾಗಿಲನ್ನು ಹಾಕಿ ಲಾಕ್ ಮಾಡಿದ.

ಇಬ್ಬರೂ ಒಳ ಪ್ರವೇಶಿಸಿದರು. ರೆಡ್ಡಿ ಚಂದ್ರಿಕಾಳನ್ನು ಅದೇ ಸ್ಥಿತಿಯಲ್ಲಿ ಇದೇ ಹಿಡಿತದಲ್ಲಿ ಹಿಡಿದು ಕುಳಿತ್ತಿದ್ದ ಅವನ ಬಲಗೈಯಲ್ಲಿದ್ದ ಬಾಕು ಅವಳ ಎರಡು ಸ್ತನಗಳ ಮಧ್ಯೆ ತನ್ನ ಮೊನಚನ್ನು ತೋರುತ್ತಿತ್ತು. ಭೂಮಿಗೌಡ ರೆಡ್ಡಿಯನ್ನು ಕುರಿತು "ಮುಂದೇನು ?" ಎಂದು ಕೇಳಿದ.

ರೆಡ್ಡಿ ಶರಣನನ್ನು "ಗಾಡಿಗೆ ಲಗ್ಗೇಜ್ ಲೋಡ್ ಮಾಡು" ಎಂದು ಆಜ್ಞಾಪಿಸಿದ. ಶರಣ್ ಆ ಕೆಲಸವನ್ನು ಮಾಡಿ ಮುಗಿಸಿ, ರೆಡ್ಡಿಯ ಮುಂದೆ ನಿಂತ.

ಅವರಿಬ್ಬರನ್ನು ಕುಳಿತಲ್ಲಿಂದಲೇ ನೋಡಿ ರೆಡ್ಡಿ "ಶರಣ್, ಈಗ ಸುಮೊವನ್ನು ನೀನು

ಓಡಿಸಬೇಕು. ಪ್ರೊಫೆಸರ್, ನೀವು ಸುಮೋದ ಮಧ್ಯದ ಸೀಟಿನ ಕಿಟಕಿಯ ಪಕ್ಕ ಕೂರಬೇಕು. ಈ ಸಿಸ್ಟರ್ ನಿಮ್ಮ ಪಕ್ಕ ಕೂರ್ತಾರೆ. ನಿಮ್ಮ ಪಕ್ಕ ಕೂರೋದು ಅವರಿಗೆ ಇಷ್ಟ. "ಅವಳ ಕಡೆ ನೋಡುತ್ತಾ" ಅಲ್ವ ಸಿಸ್ಟರ್ ?" ಎಂದು ಕೇಳಿದ. ಅವಳು ಅವನ ಹಿಡಿತದಲ್ಲಿ ಮಿಸುಕಾಡಿದಳು. ಭೂಮಿಗೌಡ" ನಾವು ಈಗ ಎಲ್ಲಿಗೆ ಹೋಗ್ತಾ ಇದ್ದೇವೆ ?" ರೆಡ್ಡಿಯನ್ನು ಪ್ರಶ್ನಿಸಿದ.

"ಈಗ ಪ್ರಶ್ನಿಸುವ ಹಕ್ಕು ನಿಮಗಿಲ್ಲ. ನಾನು ಹೇಳಿದಂತೆ ಕೇಳಬೇಕು. ಅದರಂತೆ ನಡೆಯಬೇಕು, ಅಷ್ಟೆ" ಎಂದ ರೆಡ್ಡಿ ನಿರ್ಣಾಯಕ ಧ್ವನಿಯಲ್ಲಿ.

ರೆಡ್ಡಿ ಹೇಳಿದಂತೆ ಶರಣ್ ಡ್ರೈವರ್ ಸೀಟಿನಲ್ಲಿ ಕುಳಿತ. ಭೂಮಿಗೌಡ ಸುಮೊದ ಮಧ್ಯದ ಸೀಟಿನ ಕಿಟಕಿಯ ಪಕ್ಕ ಕುಳಿತ. ಚಂದ್ರಿಕಾಳ ಕುತ್ತಿಗೆಯ ಹಿಡಿತವನ್ನು ಸಡಿಲಿಸಿದ ರೆಡ್ಡಿ, ಬಾಕುವನ್ನು ಅವಳ ಸೊಂಟಕ್ಕೆ ಆನಿಸಿ, "ಸಿಸ್ಟರ್ ಈಗ ನೀನು ಕಾಟೇಜ್‌ನ ಎಲ್ಲಾ ದೀಪಗಳನ್ನು ಆರಿಸು. ಅನಂತರ ಕಾಟೇಜ್‌ನ ಬಾಗಿಲು ಹಾಕಿಕೋ" ಎಂದು ಆದೇಶಿಸಿದ.

ಚಂದ್ರಿಕಾ ಕಾಟೇಜ್‌ನ ಎಲ್ಲಾ ಸ್ವಿಚ್‌ಗಳನ್ನು ಆಫ್ ಮಾಡಿದಳು. ಬೆಳ್ಳಿಯನ್ನು ಎತ್ತಿ ಎದೆಗವುಚಿಕೊಂಡಳು. ರೆಡ್ಡಿಯ ಹದ್ದಿನ ಕಣ್ಣು ಸದಾ ಅವಳನ್ನು ಹಿಂಬಾಲಿಸುತ್ತಿತ್ತು. ಕೊನೆಗೆ ಅವಳು ಕಾಟೇಜ್‌ನ ಹೊರಗೆ ಬಂದು, ರೆಡ್ಡಿ ಹೊರ ಬಂದ ನಂತರ ಬಾಗಿಲು ಹಾಕಿ ಭದ್ರಗೊಳಿಸಿದಳು. ಕಾಟೇಜ್ ಕತ್ತಲಲ್ಲಿ ಮುಳುಗಿತು.

ಕಾಟೇಜ್‌ನ ಮೆಟ್ಟಲುಗಳ ಬಳಿ ಸುಮೊ ನಿಂತಿತ್ತು. ಅದರೊಳಗಿನ ಮಂದ ಬೆಳಕಿನಲ್ಲಿ ಶರಣ್ ಮತ್ತು ಭೂಮಿಗೌಡ ಕುಳಿತಿದ್ದರು. ಆ ಸುಮೊದಿಂದ ಸುಮಾರು ನೂರು ಅಡಿ ದೂರದಲ್ಲಿ ಮರಗಳ ನಡುವೆ ಕಾವೇರಿ ಏನೂ ಅರಿಯದಂತೆ ನುಲಿದು ಹರಿಯುತ್ತಿದ್ದಳು.

ಚಂದ್ರಿಕಾಳನ್ನು ಮುಂದೆ ಹೋಗಿ ಕೂರುವಂತೆ ರೆಡ್ಡಿ ಬಾಕುವಿನಿಂದ ತಳ್ಳಿದ. ಅವಳು ನೋವಿನಿಂದ ಮುನ್ನಡೆದು ಭೂಮಿಗೌಡನ ಪಕ್ಕ ಕುಳಿತಳು. ಬೆಳ್ಳಿ ಕೂಡಲೆ ನೆಗೆದು ಭೂಮಿಗೌಡನ ತೊಡೆ ಏರಿ ಅವನ ಮುಂಗೈ ನೆಕ್ಕಿತು. ಚಂದ್ರಿಕಾಳ ಹಿಂದಿನಿಂದ ಬಂದ ರೆಡ್ಡಿ ಅವಳ ಪಕ್ಕ ಕುಳಿತು, ತನ್ನ ಬಲಗೈನ ಬಾಕುವನ್ನು ಅವಳ ಸೊಂಟಕ್ಕೆ ತಾಕುವಂತೆ ಹಿಡಿದ.

"ಶರಣ್, ಈಗ ಗಾಡಿ ಸ್ಟಾರ್ಟ್ ಮಾಡು. ರೆಸಾರ್ಟ್‌ನ ಬಾಗಿಲಲ್ಲಿ ವಾಚ್‌ಮನ್ ಕೇಳಿದರೆ 'ಮೈಸೂರಿಗೆ ಹೋಗಿ ಬರ್ತೇವೆ' ಎಂದು ಹೇಳು. ಅನಂತರ ಗಾಡಿಯನ್ನು ರೈಟ್‌ಗೆ ತೆಗೆದುಕೊ, ತಿಳಿಯಿತೆ ? ಮೈಸೂರಿನ ಕಡೆಗಲ್ಲಾ, ಬೆಂಗಳೂರಿನ ಕಡೆಗೆ ! ಆದರೆ ಬೆಂಗಳೂರಿಗಲ್ಲ. ಮುಂದೆ ಪಕ್ಷಿಧಾಮಕ್ಕೆ ತಿರುಗುತ್ತಲ್ಲ, ಆ ರಸ್ತೆಯಲ್ಲಿ ಗಾಡಿಯನ್ನು ತಿರುಗಿಸಿ, ಮುಂದೆ ಸಾಗು. ಅನಂತರದ ದಾರಿಯನ್ನು ನಾನು ಹೇಳ್ತೇನೆ" ಎಂದ ರೆಡ್ಡಿ.

## ಅಧ್ಯಾಯ : ಹತ್ತೊಂಬತ್ತು

ಸುಮೊ ಮತ್ತೆ ಮೈಸೂರು - ಬೆಂಗಳೂರು ದಾರಿಯಲ್ಲಿ ಸಾಗಿ ಪಕ್ಷಿಧಾಮಕ್ಕೆ ಹೋಗುವ ವೃತ್ತದಲ್ಲಿ ಎಡಕ್ಕೆ ತಿರುಗಿತು. ಹೆದ್ದಾರಿಯ ಸೌಖ್ಯತೆ ತಕ್ಷಣ ಮರೆಯಾಗಿ ಸುಮೊ ಹಳ್ಳತಿಟ್ಟುಗಳ ರಸ್ತೆಯಲ್ಲಿ ಕುಣಿದಾಡತೊಡಗಿತು. ಚಂದ್ರಿಕಾ ಎಡಕ್ಕೊಮ್ಮೆ ಬಲಕ್ಕೊಮ್ಮೆ ವಾಲುತ್ತಿದ್ದಳು. ಬಲಕ್ಕೆ ವಾಲಿದಾಗ ಭೂಮಿಗೌಡನ ಸ್ಪರ್ಶ ಹಿತಕಾರಿಯಾಗಿದ್ದು, ಒಂದು ಬಗೆಯ ಧೈರ್ಯವನ್ನು ತುಂಬುತ್ತಿತ್ತು. ಎಡಕ್ಕೆ ವಾಲಿದಾಗ ರೆಡ್ಡಿಯ ದೇಹ ತಗುಲಿ ಒಂದು ಬಗೆಯ ಮುಜುಗರವೂ ಭಯವೂ ಉಂಟಾಗುತ್ತಿತ್ತು. ಅಲ್ಲದೆ ಅವಳ ಸೊಂಟದ ಬಳಿ ಅವನು ಹಿಡಿದಿದ್ದ ಬಾಕು ಆಗಾಗ ಅವಳಿಗೆ ನೋವು ಕೊಡುತ್ತಿತ್ತು.

ಕತ್ತಲೆಯಲ್ಲಿ ಸುಮೊ ದೀಪ ರಸ್ತೆಯನ್ನು ಸೀಳಿ ಮುನ್ನುಗ್ಗುತ್ತಿತ್ತು, ಆಗಲೇ ಚಂದ್ರ ನೆತ್ತಿಯಿಂದ ಕೆಳಕ್ಕೆ ಜಾರಿದ್ದ. ಶರಣ್‌ಗೆ ಆ ರಸ್ತೆಯ ಪರಿಚಯವಿತ್ತು. ಆ ರಸ್ತೆ ಪಕ್ಷಿಧಾಮ-ಪಾಲಹಳ್ಳಿಯನ್ನು ಹಾಯ್ದು, ಮೈಸೂರಿಗೆ ನೀರು ಪಂಪ್ ಮಾಡುವ ಪಂಪ್‌ಹೌಸ್ ಬಳಿ ಎರಡು ಕವಲಾಗುತ್ತದೆ. ಒಂದು ನೇರವಾಗಿ ಸಾಗಿ ಕೃಷ್ಣರಾಜಸಾಗರ ಅಣೆಕಟ್ಟೆಗೆ ಹೋಗುತ್ತದೆ, ಅದಕ್ಕಿಂತ ಮುನ್ನ ಅದರ ಮತ್ತೊಂದು ಕವಲು ಮೈಸೂರಿನ ಪಶ್ಚಿಮದ ಹೊರವಲಯದಲ್ಲಿ ಹುಣಸೂರು ರಸ್ತೆಯನ್ನು ಸೇರುತ್ತದೆ. ಪಂಪ್‌ಹೌಸ್ ಬಳಿ ಮತ್ತೊಂದು ಕವಲು ದಕ್ಷಿಣಕ್ಕೆ ತಿರುಗಿ ವಿಕ್ರಾಂತ್ ಟೈರ್ಸ್ ಕಾರ್ಖಾನೆಯನ್ನು ಹಾಯ್ದು ಮೈಸೂರು ತಲುಪುತ್ತದೆ.

ರೆಡ್ಡಿಯ ಗಮನ ರಸ್ತೆ ಮೇಲಿತ್ತು. ಆದರೂ ಅವನ ಒಂದು ಕಣ್ಣು ಚಂದ್ರಿಕಾ ಮತ್ತು ಭೂಮಿಗೌಡರ ಮೇಲಿತ್ತು. ಶರಣ್ ಮತ್ತು ಭೂಮಿಗೌಡರ ವೀಕ್‌ಪಾಯಿಂಟ್ ಚಂದ್ರಿಕಾಳೆ ಎಂಬುದು ಅವನಿಗೆ ಅರ್ಥವಾಗಿತ್ತು. ಇವಳನ್ನು ಹಿಡಿತದಲ್ಲಿಟ್ಟುಕೊಂಡರೆ ಅವರಿಬ್ಬರು ಹೇಳಿದ ಹಾಗೆ ಕೇಳುತ್ತಾರೆಂಬುದು ಮನದಟ್ಟಾಗಿತ್ತು. ಅವನ ಮನಸ್ಸು ಮುಂದೆ ಆಗಬೇಕಿರುವ ಕಾರ್ಯದ ಬಗ್ಗೆ ಚಿಂತಿಸುತ್ತಿತ್ತು. ಮಹೇಶನ ಸಾವಿನ ಬಗ್ಗೆ ಅವನಿಗೆ ವ್ಯಥೆಯಿರಲಿಲ್ಲ. ಅವನ ಸೇಡಿನ ಸರಪಳಿಯಲ್ಲಿ ಅವನು ಮೊದಲ ಬಲಿ! ಆದರೆ ಅವನ ಮರಣವನ್ನು ಕಣ್ಣಾರೆ ನೋಡಿ ಸಾಕ್ಷಿಗಳಾಗಿರುವ ಈ ಮೂವರನ್ನು ಜೀವಸಹಿತ ಬಿಟ್ಟರೆ ತನಗೇ ಅಪಾಯ. ಈ ಮೂವರನ್ನೂ ಉಪಾಯವಾಗಿ ಮುಗಿಸಬೇಕು. ಮಹೇಶನ ಸಾವಿನ ಸಾಕ್ಷಿಗಳನ್ನು ಉಳಿಸಬಾರದು. ಸಂಜೆಯ ಒಳಗಾಗಿ ಶರಣ್‌ನನ್ನು ಮೈಸೂರಿಗೆ ಬಿಟ್ಟು, ಈ ರಾತ್ರಿ ಮಹೇಶನಿಂದ ಬರಬೇಕಾದ ಹಣವನ್ನು ಆನ್‌ಲೈನ್ ಮೂಲಕ ವಸೂಲು ಮಾಡಿಕೊಂಡು ಅನಂತರ ಅವನನ್ನು ಮುಗಿಸುವ ಯೋಜನೆ ಅವನದಾಗಿತ್ತು. ಆದರೆ ಆಕಸ್ಮಿಕ ಅತಿಥಿಗಳ ರೀತಿಯಲ್ಲಿ ಈ ಪ್ರಯಾಣದಲ್ಲಿ ಚಂದ್ರಿಕಾ ಮತ್ತು ಭೂಮಿಗೌಡ ಪ್ರವೇಶ ಪಡೆದಿದ್ದರು. ಅದು ಅವರು ಅವರಿಗರಿವಿಲ್ಲದಂತೆ ಸಾವಿನ ದವಡೆಗೆ

ನಡೆದ ಎಂಟ್ರಿ ! ಅದು ದೇವರಾಟ ಇರಬಹುದು. ರೆಡ್ಡಿ ತನ್ನ ಮನದಲ್ಲೇ ನಕ್ಕ. ಅವರ ಸಾವು ತನ್ನ ಕೈಯಲ್ಲಿ ಎಂದು ವಿಧಿಲಿಖಿತ ಎಂದುಕೊಂಡ. ತಾನು ರೆಸಾರ್ಟ್ ಕಟ್ಟಲು ಖರೀದಿಸಬೇಕೆಂದಿರುವ ಜಮೀನಿನ ಬಳಿ ಈಗ ಹೋಗುವುದು, ಅಲ್ಲಿ ಈ ಮೂವರನ್ನು ಮುಗಿಸುವುದು. ಕಾವೇರಿ ನದಿಗೆ ನಾಲ್ಕೂ ಹೆಣಗಳನ್ನು ಎಸೆಯುವುದು.

ರೆಡ್ಡಿ ಗಡಿಯಾರ ನೋಡಿಕೊಂಡ. ಎರಡು ಮುಕ್ಕಾಲು. ನದಿ ತೀರದ ಆ ಜಾಗಕ್ಕೆ ಮೂರೂ ಕಾಲು-ಮೂರೂವರೆಯ ಹೊತ್ತಗೆ ಹೋಗಬಹುದು. ಅಲ್ಲಿ ಇವರನ್ನು ಮುಗಿಸಿ ನದಿಯಲ್ಲಿ ಬಿಸಾಡಿ, ತಾನು ವಾಪಸ್ ಬೆಂಗಳೂರಿಗೆ ಸುಮೊದಲ್ಲಿ ಪಯಣಿಸಿದರೆ, ಈ ವೇಳೆಯಲ್ಲಿ ಎರಡು ಗಂಟೆಗಳ ಪಯಣ. ಅಲ್ಲಿಂದ ಕೋಲಾರ- ಮದನಪಲ್ಲಿ ! ರಾಯಲ ಸೀಮೆಯಲ್ಲಿ ಸ್ವಲ್ಪ ದಿನ ಇದ್ದು ತಣ್ಣಗಾದ ನಂತರ ಬೆಂಗಳೂರಿಗೆ ಬರಬಹುದು. ನದಿಯಲ್ಲಿ ಎಸೆದ ಹೆಣಗಳು ಸಿಕ್ಕರೆ ಸಿಗಬಹುದು, ಇಲ್ಲದಿದ್ದರೆ ಇಲ್ಲ. ನದಿಯ ಈ ಭಾಗದಲ್ಲಿ ಭೀಕರವಾದ ಮೊಸಳೆಗಳಿವೆಯೆಂದು ಅವನು ಕೇಳಿದ್ದ. ರೆಡ್ಡಿ ತನ್ನ ಯೋಜನೆಗೆ ತಾನೇ ಶಹಬ್ಬಾಸ್ ಎಂದುಕೊಂಡ. 'ಸ್ವೀಟ್ ಐಲ್ಯಾಂಡ್' ರೆಸಾರ್ಟ್‌ನಲ್ಲಿ ಕಾಟೇಜ್ ಬುಕ್ ಮಾಡುವಾಗ ಯಾವುದೋ ಬೇನಾಮಿ ಹೆಸರು ಬಳಸಿಕೊಂಡಿದ್ದ.

ಈಗ ತಕ್ಷಣದ ಕೆಲಸದ ಬಗ್ಗೆ ಮನಸ್ಸನ್ನು ಕೇಂದ್ರೀಕರಿಸಬೇಕು. ಮಹೇಶನಿಂದ ಹಣ ವಸೂಲಾಗದ್ದು ಬೇಸರವನ್ನು ತಂದಿದ್ದರೂ ಅವನ ಸಾವು ಆ ಬೇಸರವನ್ನು ನೀಗಿಸಿ ತೃಪ್ತಿ ತಂದುಕೊಟ್ಟಿತು. ಇನ್ನರ್ಧ ಮುಕ್ಕಾಲು ಗಂಟೆಯಲ್ಲಿ ಸಾಯಲಿರುವ ಈ ಮೂವರ ಮುಂದಿನ ಸ್ಥಿತಿಯನ್ನು ನೆನೆಸಿಕೊಂಡು ಅವನು ಖುಷಿಯಿಂದ ಲಘುವಾಗಿ ಸಿಳ್ಳೇ ಹಾಕಿದ.

ಭೂಮಿಗೌಡನ ಎಡತೋಳಿಗೆ ಒರಗಿ ಕುಳಿತ್ತಿದ್ದ ಚಂದ್ರಿಕಾಳಿಗೆ ತಾವು ಎಲ್ಲಿಗೆ ಹೋಗುತ್ತಿದ್ದೇವೆಂಬ ಅರಿವು ಇರಲಿಲ್ಲ. ಆದರೆ ಅವಳಿಗೆ ಭಯ ನಖಶಿಖಾಂತ ಆವರಿಸಿತ್ತು. ಜೀವನದಲ್ಲಿ ಮೊತ್ತ ಮೊದಲ ಬಾರಿಗೆ ಕಣ್ಣೆದುರಿಗೆ ಸಾವೊಂದನ್ನು ನೋಡಿದ್ದಳು. ಅದೂ ಎಂಥ ಸಾವು ? ಸಹಜ ಸಾವಲ್ಲ. ಹಿಂಸೆಯ ಮೂಲಕ ಬಂದ ಸಾವು. ತಾನು, ಭೂಮಿಗೌಡ, ಅಣ್ಣ ಅಸಹಾಯಕರಂತೆ ಕುಳಿತ್ತಿದ್ದೆವು. ಅವಳ ಕಣ್ಮುಂದೆ ಕಿವಿ, ಕೆನ್ನೆ, ಬಾಯಿಗಳಿಂದ ರಕ್ತ ಕಾರುತ್ತ ಪ್ರಾಣ ಬಿಟ್ಟ ಮಹೇಶನ ಚಿತ್ರ ದುಸ್ವಪ್ನದಂತೆ ತೇಲುತ್ತಿತ್ತು. ಕಣ್ಣು ಮುಚ್ಚಿದರೂ ಅಷ್ಟೆ, ಕಣ್ಣು ತೆರೆದರೂ ಅಷ್ಟೆ. ಅವಳು ತನ್ನ ಎಡಭಾಗದಲ್ಲಿ ಕುಳಿತ ರೆಡ್ಡಿಯ ಕ್ರೌರ್ಯವನ್ನು ನೆನೆಸಿಕೊಂಡು ನಡುಗತೊಡಗಿದಳು. ಸಾಂತ್ವನಗೊಳ್ಳಲೆಂದು ತನ್ನ ಬಲಗೈಯಲ್ಲಿ ಭೂಮಿಗೌಡನ ಎಡಗೈಯನ್ನು ಹಿಡಿದು, ಅವನ ಭುಜಕ್ಕೊರಗಿದಳು. ಎಡಗೈಯಲ್ಲಿ ಬೆಳ್ಳಿಯ ತಲೆಯನ್ನು ಸವರಿದಳು. ಭೂಮಿಗೌಡನ ಬಲಗೈ ಅವಳ ತಲೆಯನ್ನು ಮೃದುವಾಗಿ ಸವರಿತು ? ಅವಳಿಗೆ ಏನೋ ಸುಖವೆನ್ನಿಸಿತು. ಗಂಡಿನ ಸ್ಪರ್ಶ ಅವಳಿಗೆ ಹೊಸದಲ್ಲ. ಆದರೆ ಈ ಸ್ಪರ್ಶದಲ್ಲಿ ಏನೋ ಒಂದು ಬಗೆಯ ಆತ್ಮೀಯತೆ, ತನ್ಮಯತೆ, ಕಳಕಳಿ ಇದೆ ಎನ್ನಿಸಿತು. ಅವಳ ಮನಸ್ಸು ಅವಳ ಗಂಡ ಚಂದ್ರಶೇಖರನ ಕಡೆ ಹರಿಯಿತು. ಅವನ ನೆನಪೇ ಅವಳಿಗೆ ಇರಿಸುಮುರಿಸಾಯಿತು. ಮಾತು ಕಥೆ, ಕಾಮ ಕೇಳಿ ಎಲ್ಲವೂ ಅವನ ಬಳಿ ವ್ಯಾವಹಾರಿಕವೇ. ತನ್ನ ದುಃಖ ದುಮ್ಮಾನಗಳ

ಸಮಯದಲ್ಲಿ ಹೀಗೆ- ಭೂಮಿಗೌಡ ತಲೆ ಸವರಿ ಸಾಂತ್ವನಗೊಳಿಸುತ್ತಿರುವ ಹಾಗೆ ಒಂದು ದಿನಕೂಡ ಮಾಡಲಿಲ್ಲ. ತಾನು ಅವನಿಗೊಂದು ಭೋಗದ ವಸ್ತು; ಮನೆಯನ್ನು ನೋಡಿಕೊಳ್ಳಲು ಇರುವ ಕೇರ್‌ಟೇಕರ್; ಅವನ ಸಂತತಿ ಹೆಚ್ಚು ಮಾಡಲು ಬೇಕಾಗಿರುವ ಒಂದು ಯಂತ್ರ !

ರೆಡ್ಡಿ ತನ್ನ ಕಣ್ಮುಂದೆ ಬಿಚ್ಚಿಟ್ಟಿದ್ದ ಹೆತ್ತೇಗೌಡನ ಸಾವಿನ ಪ್ರಸಂಗವನ್ನು ಅವಳು ನೆನೆದಳು. ಅದರ ನೆನಪೇ ಅವಳ ಮೈಯಲ್ಲಿ ಭಯದ ಮುಳ್ಳುಗಳನ್ನು ಮೂಡಿಸಿದವು. ಅವನಿಗೆ ನೀಡಿದ ಹಿಂಸೆಯಲ್ಲಿ ತನ್ನ ಗಂಡನ ಪಾತ್ರ ಕಡಿಮೆಯದಲ್ಲ. ದುಡ್ಡಿಗಾಗಿ ಅವನು ಇನ್ನು ಏನೇನು ಮಾಡಿದ್ದಾನೋ ? ಅವನು ಪಾಪಮಾರ್ಗದಿಂದ ತಂದ ಹಣವನ್ನು ಈ ಐದು ವರ್ಷಗಳಲ್ಲಿ ನಾನು ಬಳಸಿದ್ದೇನೆ. ಆ ಪಾಪದ ಕೂಳನ್ನು ತಿಂದಿದ್ದೇನೆ. ಈ ರೆಡ್ಡಿ ಆಗಲೆ ಹೇಳಿದ್ದು ಸತ್ಯ. ಗಂಡನ ಪಾಪದ ಸಂಪಾದನೆಯಲ್ಲಿ ತನ್ನದೂ ಪಾಲಿದೆ. ತಾನು ಎಂದಾದರೂ ಇಷ್ಟು ಹಣ ಎಲ್ಲಿಂದ ಬಂತು ? ಹೇಗೆ ಸಂಪಾದನೆ ಮಾಡಿದಿರಿ ? ಎಂದು ಎಂದಾದರೂ ಕೇಳಿದ್ದೇನೆಯೇ ? ಇಲ್ಲ. ಆದರೆ ಅದರ ಪಾಲನ್ನು ಉಂಡಿದ್ದೇನೆ. ಚಂದ್ರಿಕಾಳು ಪಶ್ಚಾತ್ತಾಪದಿಂದ ನಲುಗಿದಳು. ಅವಳಿಗರಿವಿಲ್ಲದಂತೆಯೇ ಅವಳ ಕಣ್ಣುಗಳಿಂದ ನೀರು ಹರಿಯಲಾರಂಭಿಸಿತು. ಆ ನೀರು ಭೂಮಿಗೌಡನ ತೋಳನ್ನು ತೊಯ್ಸಿತು. ಬೆಚ್ಚನೆಯ ನೀರನ್ನೂ ಅನುಭವಿಸಿದ ಭೂಮಿಗೌಡನ ಮನಸ್ಸು ಅವನ ಬಲಗೈಗೆ ಸೂಚನೆ ನೀಡಿತು. ಅವಳ ತಲೆಯನ್ನು ನೇವರಿಸುತ್ತಿದ್ದ ಆ ಕೈ ಹಾಗೇ ಕೆಳಕ್ಕಿಳಿದು ಅವಳ ಕಣ್ಣೀರನ್ನು ಒರೆಸಿತು. ಅವಳಿಗೆ ನಿಜವಾದ ಗಂಡಿನ ಸಾಂಗತ್ಯವೆಂಥದು ಎಂಬುದುರ ಅರಿವಾಗತೊಡಗಿತು.

ಚಂದ್ರಿಕಾ ಭೂಮಿಗೌಡನ ಭುಜಕ್ಕೊರಗಿದಂತೆಯೇ ಒಂದು ದೃಢ ನಿರ್ಧಾರಕ್ಕೆ ಬಂದಳು.

ಸುಮೊ ಪಾಲಳ್ಳಿಯನ್ನು ದಾಟಿ ಪಂಪ್‌ಹೌಸ್ ತಲುಪಿತು, ಶರಣ್ ಗಾಡಿಯನ್ನು ನಿಧಾನವಾಗಿಸಿದ. 'ಗಾಡಿಯನ್ನು ಯಾವ ಕಡೆ ತಿರುಗಿಸಲಿ' ಎಂದು ಕೇಳುವ ಇರಾದೆ ಅವನದು. ಅವನ ಮನಸ್ಸನ್ನು ಅರ್ಥಮಾಡಿಕೊಂಡವನಂತೆ ರೆಡ್ಡಿ "ನೇರವಾಗಿ ನಡೆ" ಎಂದ. ಶರಣ್ ಗಾಡಿಯನ್ನು ರಸ್ತೆಯಲ್ಲಿ ನೇರವಾಗಿ ಬೆಳಗೊಳದ ಕಡೆ ಚಲಿಸಿದ. ಪಂಪ್‌ಹೌಸ್‌ನಿಂದ ಬೆಳಗೊಳ ಹತ್ತಿರದ ಹಾದಿ. ಬೆಳಗೊಳದ ಪ್ರವೇಶದಲ್ಲಿಯೇ ಬಲಕ್ಕೆ ಒಂದು ಕಚ್ಚಾ ರಸ್ತೆ ಉತ್ತರಕ್ಕೆ ಕಾವೇರಿ ನದಿ ತೀರದ ಶ್ರೀನಿವಾಸ ಕ್ಷೇತ್ರಕ್ಕೆ ಹೋಗುತ್ತದೆ. ಸುಮೊ ಬೆಳಗೊಳವನ್ನು ಪ್ರವೇಶಿಸುವ ಹಂತದಲ್ಲೇ ರೆಡ್ಡಿ ಶರಣ್‌ನ ಭುಜವನ್ನು ಮುಟ್ಟಿ, ಆ ಕಚ್ಚಾರಸ್ತೆಯನ್ನು ತೋರಿ ಅಲ್ಲಿ ನಡೆ ಎಂದ. ಸುಮೊವನ್ನೂ ನಿಧಾನವಾಗಿ ಬಲಕ್ಕೆ ತಿರುಗಿಸಿ ಕಚ್ಚಾರಸ್ತೆಯಲ್ಲಿ ಚಲಿಸಿದ. ಸುಮೊ ವೇಗ ಕಡಿಮೆಯಾಗಿತ್ತು. ಶರಣ್‌ಗೆ ಈ ರಸ್ತೆ ಅಪರಿಚಿತವಾಗಿತ್ತು. ಎಂದೂ ಅದರಲ್ಲಿ ಪ್ರಯಾಣಿಸಿರಲಿಲ್ಲ. ಕೃಷ್ಣರಾಜಸಾಗರ ರಸ್ತೆಯಲ್ಲಿ- ಬೆಳಗೊಳದ ಮಧ್ಯೆ ಭಾಗದಲ್ಲಿ ಸಾಗಿದರೆ, ಈಗ ಹೋಗುತ್ತಿರುವ ಕಚ್ಚಾರಸ್ತೆಗೆ ಸಮಾನಾಂತರವಾಗಿ ಕಾವೇರಿ ನದಿ ತೀರಕ್ಕೆ ಎರಡು ಮೈಲಿಗಳ ಅಂತರದಲ್ಲಿ ಸುಮಾರಾಗಿರುವ ರಸ್ತೆಯೊಂದು ಹೋಗುತ್ತದೆ. ಆ ರಸ್ತೆ ಮುಟ್ಟುವುದು ಬಲಮುರಿ ಕ್ಷೇತ್ರವನ್ನು. ಅಲ್ಲೊಂದು ಪುಟ್ಟ ಅಣೆಕಟ್ಟೆಯಿದ್ದು, ನದಿಯ ನೀರನ್ನು ಬೇಸಾಯಕ್ಕೆಂದು ಬಲಕ್ಕೆ ಕಾಲುವೆ ಮೂಲಕ

ತಿರುಗಿಸಲಾಗಿದೆ. ಅದನ್ನು ಅಲ್ಲಿಯ ಜನ ವಿರಜಾನಾಲೆ ಎಂದು ಕರೆಯುತ್ತಾರೆ. ಅಲ್ಲಿ ನೀರು ಯಥೇಚ್ಛವಾಗಿದ್ದು, ನದಿಯ ಪಾತ್ರ ವಿಸ್ತಾರವಾಗಿದ್ದು, ಪ್ರವಾಸಿಗರು ಪ್ರತಿನಿತ್ಯ ಬರುತ್ತಾರೆ. ಆ ರಸ್ತೆಯಲ್ಲಿ ಶರಣ್ ನಾಲ್ಕಾರು ಸಾರಿ ಸಂಚರಿಸಿದ್ದ.

ಆದರೆ ಈ ರಸ್ತೆ ಬಹಳ ಜನರಿಗೆ ಗೊತ್ತೇ ಇರಲಿಲ್ಲ. ಈ ರಸ್ತೆ ಮುಟ್ಟುವ ಕಾವೇರಿ ತೀರದ ಶ್ರೀನಿವಾಸ ಕ್ಷೇತ್ರವು ಕೂಡ ಅಪರಿಚತವೇ ! ಅದೊಂದು ಪಾಳು ಬಿದ್ದ ಹಳೆಯ ದೇವಸ್ಥಾನ. ಶರಣ್ ಆ ರಸ್ತೆಯಲ್ಲಿ ನಿಧಾನವಾಗಿ ಗಾಡಿಯನ್ನು ಓಡಿಸುತ್ತಾ, 'ಇವನು ನಮ್ಮನ್ನು ಎಲ್ಲಿಗೆ ಕರೆದುಕೊಂಡು ಹೋಗುತ್ತಿದ್ದಾನೆ' ಎಂದು ಚಿಂತಿಸತೊಡಗಿದ.

ಕಿಟಕಿಯ ಪಕ್ಕ ಕುಳಿತಿದ್ದ ಭೂಮಿಗೌಡನಿಗೆ ಈ ಗಾಡಿ ಎಲ್ಲಿಗೆ, ಯಾವ ದಿಕ್ಕಿಗೆ ಹೋಗುತ್ತಿದೆಯೆಂಬ ಅರಿವಾಯಿತು. ಬೆಳಗೊಳದಿಂದ ಸುಮಾರು ನಾಲ್ಕೈದು ಮೈಲಿ ಹರಿದು ಈ ರಸ್ತೆ ಶ್ರೀನಿವಾಸ ಕ್ಷೇತ್ರವನ್ನು ಮುಟ್ಟುತ್ತದೆ. ಆ ದೇವಸ್ಥಾನದ ಬೆನ್ನಿಗೆ ಹೊಂದಿಕೊಂಡಂತೆ ಪಶ್ಚಿಮದಿಂದ ಪೂರ್ವಾಭಿಮುಖವಾಗಿ ಕಾವೇರಿ ಹರಿಯುತ್ತಾಳೆ. ಅವನು ಕಿಟಕಿಯಿಂದ ಹೊರಗೆ ನೋಡಿದ. ಮಂಡಿ ಉದ್ದ ಬೆಳೆದು ನಿಂತಿದ್ದ ಭತ್ತದ ಗದ್ದೆಗಳಲ್ಲಿ ಬೆಳಕು ಶೋಭಿಸುತ್ತಿತ್ತು. ಅಲ್ಲೊಂದು ಇಲ್ಲೊಂದು ತೆನೆ ಹೊರ ಕಡೆದು, ಹಚ್ಚ ಹಸಿರಾಗಿ ತಿಂಗಳ ಬೆಳಕಲ್ಲಿ ಕಂಗೊಳಿಸುತ್ತಿತ್ತು. ಭತ್ತದ ಗದ್ದೆಗಳಿಗೆ ಒಂದು ವಿಶೇಷವಾದ ಘಾಟು ವಾಸನೆ ಇರುತ್ತದೆ. ಮೂಗಿನ ಆಳದಲ್ಲೆಲ್ಲೋ ಬಹಳ ಕಡಿಮೆಯೆನಿಸುವಷ್ಟು ಮೃದುವಾದ ಉರಿ ಭತ್ತದ ಗದ್ದೆಗಳ ಸಹವಾಸದಲ್ಲಿ ಅವನಿಗುಂಟಾಗುತ್ತಿತ್ತು. ಈ ಪ್ರದೇಶದಲ್ಲಿ ಅವನು ಹಲವು ಹತ್ತು ಸಾರಿ ತಿರುಗಾಡಿದ್ದ. ಶ್ರೀನಿವಾಸ ಕ್ಷೇತ್ರಕ್ಕೆ ಅರ್ಧ ಕಿಲೋಮೀಟರ್ ಇರುವಂತೆ ಸಿಗುವ ಬೆಳಗೊಳದ ಮುದ್ದೇಗೌಡರ ಆರು ಎಕರೆ ಗದ್ದೆಗೆ ಒಂದೆರಡು ಬಾರಿ ಭೇಟಿಕೊಟ್ಟಿದ್ದ. ಸಂಕ್ರಾಂತಿ ವೇಳೆಯಲ್ಲಿ ಫಸಲಿಗೆ ಅವರು ವಿಶೇಷ ಪೂಜೆ ಇಟ್ಟುಕೊಳ್ಳುತ್ತಿದ್ದರು. 'ಗದ್ದೆ ನಮ್ಮ ತಾಯಿ, ಅವಳನ್ನು ವರ್ಷಕ್ಕೊಮ್ಮೆಯಾದರೂ ಪೂಜಿಸದಿದ್ದರೆ ಹೇಗೆ ?' ಎಂದು ಗದ್ದೆ ತಾಯಿಯನ್ನು ಗೌರವದಿಂದ ಕಾಣುತ್ತಿದ್ದರು. ಅವರ ಹಿರಿಯ ಮಗಳು ಕನಕ ಅವನ ಪದವಿ ತರಗತಿಯ ಸಹಪಾಠಿ. ಆ ಸಂಬಂಧದಿಂದ ಅವನ ಮನೆಗೆ ಆಗಾಗ್ಗೆ ಅವನು ಭೇಟಿಕೊಟ್ಟಿದ್ದಾನೆ. ಕನಕಳಿಗೆ ಮದುವೆಯಾಗಿ ಶ್ರೀರಂಗಪಟ್ಟಣದ ಹತ್ತಿರದ ಅರಕೆರೆಯಲ್ಲಿದ್ದಾಳೆ. ಕನಕಳ ಅಣ್ಣ ಪುಟ್ಟಸ್ವಾಮಿ ಈಗಲೂ ಮೈಸೂರಿಗೆ ಬಂದಾಗ ಆಗಾಗ್ಗೆ ಭೂಮಿಗೌಡನನ್ನು ಭೇಟಿಯಾಗುವಂಥ ಸ್ನೇಹವಿಟ್ಟುಕೊಂಡಿದ್ದಾನೆ.

ತನ್ನ ಭುಜವನ್ನು ಒರಗಿರುವ ಚಂದ್ರಿಕಾ ನಿದ್ದೆ ಮಾಡುತ್ತಿಲ್ಲವೆಂದು ಅವನಿಗೆ ಗೊತ್ತಿತ್ತು. ಅವಳು ರಾತ್ರಿ ನಡೆದ ಘಟನೆಗಳಿಂದ ಬಸವಳಿದು ಹೋಗಿದ್ದಾಳೆಂದು ಅವನು ತಿಳಿದಿದ್ದ. ಅವಳು ಅವಳಿಗರಿವಿಲ್ಲದಂತೆಯೇ ತನ್ನಲ್ಲಿ ಆಕರ್ಷಿತಳಾಗಿದ್ದಾಳೆಂದು ಅರ್ಥಮಾಡಿಕೊಂಡಿದ್ದ. ಅವನಿಗೆ ಅವಳ ಮುಗ್ಧತೆ ವಿಶೇಷವಾಗಿ ಆಕರ್ಷಿಸಿತ್ತು. ಅವಳಿಗೆ ಸಾಂತ್ವನದ ಆಸರೆಯ ಅವಶ್ಯಕತೆಯಿದೆ. ಅವಳ ಬದುಕಿನಲ್ಲಿರುವ ಕೊರತೆಯನ್ನು ತನ್ನಿಂದ ತುಂಬಿಕೊಳ್ಳುವ ಆಸೆ ಅವಳಲ್ಲಿ ಮೂಡುತ್ತಿರುವ ಬಗೆಯನ್ನು ಅವನು ಗುರುತಿಸಿದ್ದ. ಒಮ್ಮೊಮ್ಮೆ ಅವನಿಗನ್ನಿಸಿತು.

ಅವಳು ಮದುವೆಯಾಗಿರುವ ಹೆಣ್ಣು ; ಅವಳು ಮುಂದಾದರೂ ತಾನು ಮುಂದಾಗುವುದು ಸರಿಯೇ ? ತಪ್ಪಾಗುವುದಿಲ್ಲವೆ ? ಅವನು ತಲೆ ಕೊಡವಿಕೊಂಡ. ವಾಸಂತಿ ಸತ್ತ ನಂತರ ಅವನು ಯಾವ ಹೆಣ್ಣಿನ ಹತ್ತಿರವೂ ಹೋದವನಲ್ಲ. ತನ್ನ ಆಸಕ್ತಿಯನ್ನೆಲ್ಲಾ ಬರೀ ಅಧ್ಯಯನ-ಸಂಶೋಧನೆಗಳಿಗೆ, ಬೋಧನೆಗೆ ಮೀಸಲಿಟ್ಟಿದ್ದ. ಆದರೆ ಇಂದು, ಕೇವಲ ಕೆಲವು ಗಂಟೆಗಳ ಹಿಂದೆ ಪರಿಚಿತವಾದ ಈ ಹೆಣ್ಣಿನ ಜೊತೆ ತನ್ನ ಸಂಬಂಧ ಕ್ಷಣ ಕ್ಷಣಕ್ಕೆ ಗಾಢವಾಗುತ್ತಾ ಬಂದಿದೆ. ಏನಿದರ ಅರ್ಥ ? ತಾನು ಇವಳನ್ನು ಪ್ರೀತಿಸುತ್ತಿದ್ದೇನೆಯೇ ? ಇಷ್ಟಪಡುತ್ತಿದ್ದೇನೆಯೇ ? ಅದೂ ಮದುವೆಯಾಗಿರುವ ಹೆಣ್ಣನ್ನು ?

ಚಂದ್ರಿಕಾಳ ಎಡಗೈ ಅವನ ತೋಳನ್ನು ಮತ್ತಷ್ಟು ಬಿಗಿಯಿತು. ಅವಳು ತನ್ನ ತಲೆಯನ್ನು ಸ್ವಲ್ಪ ಮೇಲಕ್ಕೆತ್ತಿ, ತನ್ನ ಮೃದುವಾದ ಕೆನ್ನೆಯಿಂದ ಅವನ ತೋಳನ್ನು ನೇವರಿಸಿದಳು. ಭೂಮಿಗೌಡನ ಮೈ ಒಮ್ಮೆ ಜುಮ್ಮೆಂದಿತು.

ಭೂಮಿಗೌಡ ಕಿಟಕಿಯಿಂದ ಹೊರಗೆ ನೋಡಿದ. ವಿಸ್ತಾರವಾದ ಬಯಲು, ಬರೀ ಗದ್ದೆ; ಆಶ್ಚರ್ಯವಾಯಿತು. ಯಾರೂ ಕಬ್ಬನ್ನು ಹಾಕಿದ ಹಾಗೆ ಕಾಣಲಿಲ್ಲ. ಅಲ್ಲಲ್ಲಿ ಒಂದೊಂದು ಬಸರೀಮರ. ನಾಲೆಗಳು ಹರಿವ ಜಾಗದಲ್ಲಿ ಹೊಂಗೆ ಮರಗಳು. ತಿಂಗಳ ಬೆಳಕಲ್ಲಿ ಅವು ಮೇಲ್ಭಾಗದಲ್ಲಿ ಹಸಿರಾಗಿ ಕಂಡರೂ ಒಳ ಭಾಗದಲ್ಲಿ ಗಾಢ ಕತ್ತಲೆಯಾಗಿ ತೋರುತ್ತಿದ್ದವು. ಭೂಮಿಯ ಮೇಲ್ಮೈ ನಿಧಾನಕ್ಕೆ ಇಳಿಯುತ್ತಾ ಬರುತ್ತಿರುವುದನ್ನು ಗಮನಿಸಿದ. ನದಿ ಇನ್ನೊಂದು ಕಿಲೋ ಮೀಟರ್‌ನಲ್ಲಿ ಸಿಗುತ್ತದೆ. ಸುಮೊ ರಸ್ತೆಯಲ್ಲಿ ಉಳ್ಳಾಡುತ್ತಾ ಸಾಗಿತ್ತು.

ಆಗ ರೆಡ್ಡಿ ಶರಣ್‌ನನ್ನು "ಸ್ವಲ್ಪ ನಿಧಾನಿಸು" ಎಂದ. ಶರಣ್ ಸುಮೊವನ್ನು ನಿಧಾನವಾಗಿ ಮುನ್ನಡೆಸಿದ. ಗಾಡಿ ಹತ್ತು-ಹದಿನೈದು ಕಿಲೋ ಮೀಟರ್ ವೇಗದಲ್ಲಿ ಚಲಿಸುತ್ತಿತ್ತು. ರೆಡ್ಡಿಯ ಗಮನ ಹೊರಗಿತ್ತು. ಅವನು ಏನನ್ನೋ ಅರಸುತ್ತಿದ್ದಾನೆಂದು ಭೂಮಿಗೌಡನಿಗೆ ತೋರಿತು. ಸುಮೊ ಇನ್ನೂ ಫರ್ಲಾಂಗು ಸಾಗಿರಬೇಕು. ಆಗ ತಕ್ಷಣ ರೆಡ್ಡಿ "ಗಾಡಿಯನ್ನು ನಿಲ್ಲಿಸು" ಎಂದ. ಅವನು ನೋಡುತ್ತಿದ್ದ ಕಡೆ ಭೂಮಿಗೌಡ ದೃಷ್ಟಿ ಹರಿಸಿದ.

ರಸ್ತೆಯ ಎಡಕ್ಕೆ ಸುಮಾರು ಅರ್ಧ ಎಕರೆಯಷ್ಟು ವಿಸ್ತಾರವಾದ ಒಂದು ಅರೆಯಿತ್ತು. ಆ ಕಡೆ ಶರಣ್‌ನ ಗಮನ ಸೆಳೆದ ರೆಡ್ಡಿ "ಆ ಅರೆಯ ಆ ಅಂಚಿಗೆ ಗಾಡಿಯನ್ನು ತೆಗೆದು ಕೊಂಡು ಹೋಗಿ ನಿಲ್ಲಿಸು" ಎಂದು ಸೂಚಿಸಿದ.

## ಅಧ್ಯಾಯ : ಇಪ್ಪತ್ತು

ಆ ಅರೆ ಭೂಮಿಯಿಂದ ಮೇಲೆದ್ದು, ಅತ್ಯಂತ ಸಮತಟ್ಟಾಗಿ ಅರ್ಧ ಅಡಿಯಷ್ಟು ಮಾತ್ರ ಎತ್ತರದಲ್ಲಿತ್ತು. ಅದು ಸಮತಟ್ಟಾದ ಗದ್ದೆ ಬಯಲಿನಲ್ಲಿ ಒಲೆಯ ಮೇಲಿನ ಕಾವಲಿಯಲ್ಲಿ ಬೆಂದು ಉಬ್ಬಿರುವ ರಾಗಿ ರೊಟ್ಟಿಯ ರೀತಿ ಕಾಣುತ್ತಿತ್ತು. ಸಂಕ್ರಾಂತಿ ಮತ್ತಿತರ ಸಂದರ್ಭಗಳಲ್ಲಿ ಸುತ್ತಮುತ್ತಲ ಗದ್ದೆಯ ರೈತರು ಪೂಜೆ ಮಾಡಿ, ಈ ಅರೆಯ ಮೇಲೆ ಅಡುಗೆ ಮಾಡಿ ಊಟ ಮಾಡುತ್ತಿದ್ದರು. ಕೆಲ ಸಂದರ್ಭದಲ್ಲಿ ಭತ್ತದ ಒಕ್ಕಣೆಯೂ ಆಗುತ್ತಿತ್ತು.

ಭೂಮಿಗೌಡ ಸುಮೊದಲ್ಲಿ ಕುಳಿತು ಅರೆಯನ್ನೇ ದಿಟ್ಟಿಸುತ್ತಿದ್ದ. ಈ ಅರೆಯ ಮೇಲೆ ಕೂತು ಒಂದೆರಡು ಬಾರಿ ಊಟ ಮಾಡಿದ್ದ. ಈ ಅರೆಯ ದಕ್ಷಿಣಭಾಗವನ್ನು ಬಳಸಿಕೊಂಡು ಉತ್ತರಕ್ಕೆ ಪಶ್ಚಿಮದ ಮೂಲಕ ಹರಿದ ಗದ್ದೆ ಬಯಲು ಅವನಿಗೆ ಪರಿಚಿತವೇ ! ಮುದ್ದೇಗೌಡರ ಗದ್ದೆ ! ತನಗೆ ಪರಿಚಿತವಾದ ಕ್ಷೇತ್ರ. ಈ ಗದ್ದೆ ಉತ್ತರಕ್ಕೆ ಶ್ರೀನಿವಾಸ ಕ್ಷೇತ್ರವನ್ನು ಮುಟ್ಟಿ ನಿಲ್ಲುತ್ತದೆ. ಅದರ ಕೊನೆಯಲ್ಲಿ ನಿಂತು ನೋಡಿದರೆ ಕಾವೇರಿ ಹರಿಯುವುದು ಕಾಣುತ್ತದೆ. ಭೂಮಿಗೌಡ ರೆಡ್ಡಿಯನ್ನು ಒಮ್ಮೆ ನೋಡಿ, ತನ್ನೊಳಗೆ ಲೆಕ್ಕಾಚಾರ ಹಾಕತೊಡಗಿದ.

ರೆಡ್ಡಿಯ ತಲೆಯಲ್ಲಿ ಬೇರೆಯ ಬಗೆ ಲೆಕ್ಕಾಚಾರ ನಡೆಯುತ್ತಿತ್ತು. ಕಾವೇರಿ ನದಿ ತೀರದಲ್ಲಿ ರೆಸಾರ್ಟ್‌ಗೆ ಜಾಗ ನೋಡಲು ಬಂದಾಗ ಅವನಿಗೆ ಈ ದಾರಿ, ಈ ಅರೆ ಪರಿಚಿತವಾಗಿದ್ದವು. ಸಾಮಾನ್ಯವಾಗಿ ಹೆಚ್ಚು ಜನ ತಿರುಗಾಡದ ಈ ಪ್ರದೇಶವನ್ನು ಈ ಮೂವರನ್ನು ಮುಗಿಸಲು ಏಕೆ ಆಯ್ದುಕೊಂಡನೋ ಅವನಿಗೆ ತಿಳಿಯದು. ಅವನ ಒಳ ಪ್ರಜ್ಞೆ ಹೇಳಿತು. ಅದರಂತೆ ಅವನು ನಡೆದುಕೊಂಡ.

ತಾನು ಸುಮೊದಿಂದ ಇಳಿದು, ಹತ್ತು-ಹದಿನೈದು ಅಡಿದೂರ ನಡೆದು, ತನ್ನ ಜೇಬಿನಲ್ಲಿರುವ ರಿಮೋಟ್ ಕಂಟ್ರೋಲ್ ಗುಂಡಿಯನ್ನು ಅದುಮುವುದು. ಸುಮೊದ ಮುಂದಿನ ಸೀಟಿನ ಅಡಿಯಲ್ಲಿ ಸೆಲ್ಲೊಟೇಪ್‌ನಿಂದ ಅಂಟಿಸಿರುವ ಅರ್ಧ ಇಂಚು-ಎರಡು ಇಂಚು ಗ್ರಾತದ ಗಾಜಿನ ಟ್ಯೂಬ್‌ನ ಮುಚ್ಚಾಳ ತೆರೆದು ಕೊಳ್ಳುತ್ತದೆ. ಅದರೊಳಗಿರುವ ರುಚಿಯಿಲ್ಲದ, ವಾಸನೆ ಇಲ್ಲದ, ಬಣ್ಣವಿಲ್ಲದ ನೈಟ್ರೋಜನ್ ಅನಿಲ ಹೊರ ಬರುತ್ತದೆ. ಜಗತ್ತಿನ ಅತ್ಯಂತ ಕರುಣೆಯಿಲ್ಲವ ವಿಷಾನಿಲ ! ನೋವಿಲ್ಲ, ನರಳಾಟವಿಲ್ಲ. ಏನಾಗುತ್ತಿದೆ ಎಂಬುದರೊಳಗೆ ರಕ್ತನಾಳಗಳು ಸ್ತಬ್ಧವಾಗುತ್ತವೆ. ಹೃದಯ ಬಡಿತ ನಿಲ್ಲುತ್ತದೆ. ನೋಡಿದವರಿಗೆ, ಪರೀಕ್ಷಿಸಿದವರಿಗೆ ಸಿವಿಯರ್ ಹಾರ್ಟ್ ಅಟ್ಯಾಕ್ ಎಂದು ತೋರುತ್ತದೆ.

ಇವರು ಹಾರ್ಟ್ ಅಟ್ಯಾಕ್‌ನಿಂದ ಸತ್ತರೆಂದರೆ ತನ್ನ ಮೇಲಿನ ಅನುಮಾನದ ತೆರೆ ಸರಳಗೊಳ್ಳುತ್ತದೆ. ಆದರೆ ......ಆದರೆ......... ಸುಮೊದ ಹಿಂದಿನ ಸೀಟುಗಳ ನಡುವೆ

ಬಿದ್ದಿರುವ ಮಹೇಶನ ಹೆಣ ಬೇರೆ ಕತೆಯನ್ನು ಹೇಳುತ್ತದೆ. ಅದರ ಮೈಮೇಲಿರುವ ರಕ್ತ, ಚಾಕುವಿನ ಗುರುತುಗಳು ಮಾತನಾಡಲು ಸುರುಮಾಡುತ್ತವೆ. ಅವು ಪೊಲೀಸರನ್ನು ತನ್ನತ್ತ ಕರೆತರುತ್ತವೆ. ಜೊತೆಗೆ ಮಹೇಶನ ಹೆಣದ ಜೊತೆಗೆ ಹಾರ್ಟ್ ಅಟ್ಯಾಕ್ ಆಗಿ ಸತ್ತಿರುವ ಈ ಮೂವರೂ ಒಂದೇ ರೀತಿ ಸತ್ತಿರುವುದು ಎಂಥವರಿಗೂ ಅನುಮಾನ ತರುತ್ತದೆ. ಇದು ಹಾರ್ಟ್ ಅಟ್ಯಾಕ್ ಅಲ್ಲ, ಪೂರ್ವಯೋಜಿತ ಕೊಲೆ ಎಂಬ ತೀರ್ಮಾನಕ್ಕೆ ಬರುವುದು ಎಂಥವರಿಗೂ ಸುಲಭ.

ಆದ್ದರಿಂದ ನೈಟ್ರೋಜನ್ ಅನಿಲದ ಮೂಲಕ ಶರಣ್‌ನನ್ನು ಇಲ್ಲವಾಗಿಸಬೇಕು, ಭೂಮಿಗೌಡನನ್ನು ಈ ಅರೆಯ ಮೇಲೆ ಇರಿದು ಸಾಯಿಸಬೇಕು. ಅನಂತರ ಉಳಿಯುವ ಈ ಸಿಸ್ಟರ್ ಯಾವ ಲೆಕ್ಕ ? ಚಿಟಕಿ ಹೊಡೆಯುವಷ್ಟು ಸುಲಭ !

ಅನಂತರ ನಾಲ್ಕು ಹೆಣಗಳನ್ನು ಹಾಕಿಕೊಂಡು ಕಾವೇರಿಯ ವಿವಿಧ ಭಾಗಗಳಲ್ಲಿ ಎಸೆಯುವುದು. ಬಲಮುರಿಯಲ್ಲಿ ಶರಣ್‌ನನ್ನು; ಇಲ್ಲೇ ಸ್ವಲ್ಪ ಕೆಳಭಾಗದಲ್ಲಿ ಭೂಮಿಗೌಡನನ್ನು ; ಪಶ್ಚಿಮವಾಹಿನಿಯಲ್ಲಿ ಚಂದ್ರಿಕಾಳನ್ನು; ಕೊನೆಯಲ್ಲಿ ಶ್ರೀರಂಗಪಟ್ಟದ ಬಲಭಾಗದ ನದಿಯಲ್ಲಿ ಮಹೇಶನನ್ನು- ಎಸೆದರೆ ಎಲ್ಲಾ ಸರಿ ಹೋಗುತ್ತದೆ.

ರೆಡ್ಡಿ ತನ್ನ ಯೋಜನೆಯ ಬಗ್ಗೆ ಹೆಮ್ಮೆಪಟ್ಟುಕೊಂಡ; ತೃಪ್ತಿ ಪಟ್ಟುಕೊಂಡ. ತಾನು ಮಂಡ್ಯದಲ್ಲಿಳಿದು ತನಗೆ ಗೊತ್ತಿರುವ ಕೆಮಿಕಲ್ ಲ್ಯಾಬ್‌ಗೆ ಹೋಗಿ ನೈಟ್ರೋಜನ್ ಅನಿಲ ತಂದದ್ದು ಯಾರಿಗೂ ಗೊತ್ತಿಲ್ಲ. ಅಲ್ಲಿಯೂ ತನ್ನ ಹೆಸರು ಊರು ಎಲ್ಲಾ ಬೋಗಸ್! ಜನರು ಸುಲಭವಾಗಿ ನಂಬುತ್ತಾರೆ. ಅವರಿಗೆ ದುಡ್ಡುಬೇಕು ಅಷ್ಟೆ. ಅದೊಂದಿದ್ದರೆ ಕಣ್ಣುಮುಚ್ಚಿ ವ್ಯವಹರಿಸುತ್ತಾರೆ.

ಇನ್ನು ತಡವಾಗುತ್ತದೆ. ಚಟಪಟನೆ ಕೆಲಸ ಮುಗಿಸಬೇಕು. ಅಂದುಕೊಂಡ ರೆಡ್ಡಿ "ಸುಮೊದ ಎಲ್ಲ ಕಿಟಕಿಗಳನ್ನು ಹಾಕಿ ಲಾಕ್ ಮಾಡು" ಎಂದು ಶರಣ್‌ಗೆ ಅಜ್ಞಾಪಿಸಿದ. ಅವನು ಒಮ್ಮೆ ಪ್ರಶ್ನಾರ್ಥಕವಾಗಿ ರೆಡ್ಡಿಯನ್ನು ನೋಡಿ, ತನ್ನ ಮುಂದಿನ ಕೆಲವು ಬಟನ್‌ಗಳನು ಒತ್ತಿದ. ಸುಮೊದ ಗಾಜುಗಳು ಮೇಲಕ್ಕೆದ್ದು ಮುಚ್ಚಿಕೊಂಡವು. "ಗಾಡಿಯನ್ನು ಆಫ್ ಮಾಡು, ನನಗೆ ಕೀಯನ್ನು ಕೊಡು" ಎಂದ ರೆಡ್ಡಿ. ಅವನು ಹೇಳಿದಂತೆ ಮಾಡಿದ ಶರಣ್.

ಚಂದ್ರಿಕಾಳ ರೆಟ್ಟೆ ಹಿಡಿದು ರೆಡ್ಡಿ "ಕೆಳಗೆ ಇಳೀಬೆಕು, ಸಿಸ್ಟರ್. ಒದರಾಡಿದರೆ ಬಾಕು ಮಾತನಾಡುತ್ತದೆ. ಹ್ಹಾ....ಪ್ರೊಫೆಸರ್ ನೀವು ಅಷ್ಟೆ. ಕೆಳಗಿಳಿಯಬೇಕು. ಏನಾದರೂ ನಿಮ್ಮ ಬುದ್ಧಿ ತೋರಿಸಲು ಹೊರಟರೆ ಈ ನಿಮ್ಮ ರಕಮ್ಮಿನ ಪ್ರಾಣ ಪಕ್ಷಿ ಹಾರಿಹೋಗುತ್ತದೆ. ಹುಷಾರ್" ಎಂದ.

ಅವಳ ರಟ್ಟೆ ಹಿಡಿದು ಬಾಕುವನ್ನು ಅವಳ ಸೊಂಟಕ್ಕೆ ಆನಿಸಿ ಅವಳನ್ನು ಸುಮೊದಿಂದ ಕೆಳಕ್ಕೆ ಇಳಿಸಿದ. ಬೂಮಿಗೌಡ ಅವಳ ಹಿಂದೆಯೇ ವಿಧೇಯನಾಗಿ ಬಂದ. ರೆಡ್ಡಿ ಸುಮೊದ ಬಾಗಿಲನ್ನು ಹಾಕಿದ. ಕಾರಿನ ರಿಮೋಟ್ ಕಂಟ್ರೋಲರ್ ಮೂಲಕ ಎಲ್ಲಾ ಬಾಗಿಲುಗಳನ್ನು ಲಾಕ್ ಮಾಡಿದ.

ಚಂದ್ರಿಕಾ ಅವನ ಕ್ರಿಯೆಯಿಂದ ಗಲಿಬಿಲಿಗೊಂಡಳು. "ಅಣ್ಣನನ್ನು ಏಕೆ ಗಾಡಿಯಲ್ಲಿ ಕೂಡಿ ಹಾಕಿದೆ ?" ಎಂದು ಪ್ರಶ್ನಿಸಿದಳು.

ರೆಡ್ಡಿ ಉತ್ತರ ಕೊಡಲಿಲ್ಲ. ಬರೀ ನಕ್ಕ. ಅವರಿಬ್ಬರನ್ನು "ನಡೆಯಿರಿ" ಎಂದ. ಸುಮೊದಿಂದ ಹದಿನೈದು ಅಡಿ ಉತ್ತರಕ್ಕೆನಡೆದರು. ನಿಲ್ಲುವಂತೆ ಅವರಿಗೆ ಸೂಚಿಸಿದ. ಅವರು ನಿಂತರು.

ಚಂದ್ರಿಕಾಳ ಮುಖವನ್ನು ತೀಕ್ಷ್ಣವಾಗಿ ನೋಡಿ, ರೆಡ್ಡಿ "ಸಿಸ್ಟರ್, ನಿಮ್ಮಣ್ಣನನ್ನು ಏಕೆ ಕೂಡಿ ಹಾಕಿದೆ, ಎಂದು ಕೇಳಿದೆಯಲ್ಲ ? ಈಗ ನೋಡು, ಕಾರಣ ತಿಳಿಯುತ್ತದೆ" ಎಂದು ತನ್ನ ಎಡಗೈಯಲ್ಲಿದ್ದ ರಿಮೋಟ್‌ನ ಬಟನ್ ಒಂದನ್ನು ಒತ್ತಿದ.

ಚಂದ್ರಿಕಾ ಹೆದರಿದಳು. ಬಹುಶಃ ಸುಮೊ ಸ್ಫೋಟಿಸಬಹುದು ಎಂದು ಅವಳು ನಿರೀಕ್ಷಿಸಿ ಆತಂಕಗೊಂಡಳು. ಅಂಥಾದ್ದೇನು ಆಗಲಿಲ್ಲ. ಆ ಬೆಳದಿಂಗಳ ರಾತ್ರಿಯಲ್ಲಿ ಕಡುನೀಲಿ ಬಣ್ಣದ ಸುಮೊ ಸ್ವಲ್ಪ ಅತಿ ಎನಿಸುವ ಕಪ್ಪಾದಂತೆ ಕಂಡಿತು. ಅದು ನೆಮ್ಮದಿಯಿಂದ ಪ್ರಶಾಂತವಾಗಿ ನಿಂತಿತ್ತು.

ಚಂದ್ರಿಕಾ ರೆಡ್ಡಿಯನ್ನು ನೋಡಿ 'ಏನೂ ಆಗಲಿಲ್ಲವಲ್ಲ' ಎನ್ನುವಂತೆ ಸಮಾಧಾನದ ನಿಟ್ಟುಸಿರು ಬಿಟ್ಟಳು.

ರೆಡ್ಡಿ ಅತ್ಯಂತ ಶೀತಲವಾದ ಧ್ವನಿಯಲ್ಲಿ "ಸಿಸ್ಟರ್, ನಿಮ್ಮಣ್ಣ ಶರಣ್ ಇಷ್ಟೊತ್ತಿಗಾಗಲೇ ಹಾರ್ಟ್ ಅಟ್ಯಾಕ್ ಆಗಿ ಸತ್ತಿರುತ್ತಾನೆ. ನಾನು ಈ ರಿಮೋಟ್‌ನಿಂದ ವಿಷದ ಟ್ಯೂಬ್ ಅನ್ನು ಓಪನ್ ಮಾಡಿದ್ದು, ತಿಳಿಯಿತೆ ?" ಎಂದ.

ಚಂದ್ರಿಕಾ ಬೆರಗುಗಣ್ಣಿನಿಂದ ಅವನನ್ನೇ ನೋಡಿದಳು. ಅವಳ ನಾಲಗೆ ಒಣಗಿತು. ತಲೆ ಸುತ್ತಿದಂತಾಗಿ ಭೂಮಿಗೌಡನನ್ನು ತಬ್ಬಿ ಕುಸಿದಳು.

ಸುಮೊ ಒಳಗೆ ಸೀಟಿನಲ್ಲಿ ಕುಳಿತ್ತಿದ್ದ ಶರಣ್ ತನ್ನನ್ನು ಒಳಗೆ ಕೂರಿಸಿ, ರೆಡ್ಡಿ ತನ್ನ ತಂಗಿ ಮತ್ತು ಭೂಮಿಗೌಡನನ್ನು ಹೊರಕ್ಕ ಏಕೆ ಕರೆದುಕೊಂಡು ಹೋದ ? ಎಂದು ಚಿಂತಿಸಿದ. ಅವನು ತಂಗಿಯ ಬಗ್ಗೆ ಆತಂಕಗೊಂಡ. ರೆಡ್ಡಿ ಅವಳ ಪ್ರಾಣ ತೆಗೆಯಲು ಹಿಂಜರಿಯಲಾರ. ಭೂಮಿಗೌಡ ಅವಳ ಜೊತೆಯಿಲ್ಲಿ ಇರುವುದರಿಂದ ಅವನಿಗೆ ಸ್ವಲ್ಪ ನೆಮ್ಮದಿಯೆನಿಸಿತು. ತನ್ನ ತಂಗಿ ಭೂಮಿಗೌಡನ ಜೊತೆ ವರ್ತಿಸುತ್ತಿರುವ ರೀತಿ ಸ್ವಲ್ಪ ವಿಚಿತ್ರವೆನಿಸಿತು. ಪರಪುಷರೊಡನೆ ಎಂದೂ ಸಲುಗೆಯಿಂದ ಮಾತನಾಡದ ಅವಳು ಇಂದು ಭೂಮಿಗೌಡನೊಡನೆ ಬೆರೆಯುತ್ತಿರುವ ರೀತಿ ವಿಚಿತ್ರವೆನಿಸಿತು. ತಾನೆ ನಿಂತು, ತಾನೆ ನೋಡಿದ ವರನೊಂದಿಗೆ ಅವಳ ಮದುವೆಯಾಗಿತ್ತು. ಆದರೆ ಅವಳು ಅವಳ ಗಂಡನ ಜೊತೆ ಸುಖವಾಗಿರಲಿಲ್ಲವೆಂದುಬು ಅವನಿಗೆ ಅರ್ಥವಾಗಿತ್ತು. ಅವಳ ಬಳಿ ಎಲ್ಲವೂ ಇದ್ದು, ಏನೂ ಇಲ್ಲದವಳಂತೆ ಬದುಕುತ್ತಿದ್ದಳು. ಸದಾ ಏಕಾಂಗಿ, ಮೌನಿ. ಹತ್ತು ಮಾತನಾಡಿದರೆ ಅವಳದೊಂದೇ ಮಾತು. ಆದರೆ ಇಂದು ಅವಳ ಗೆಲುವನ್ನು ಕಂಡು ಅವನಿಗೆ ಸಂತೋಷವಾಗಿತ್ತು. ಆದರೆ ಆ ಸಂತೋಷ ಬಹಳ ಹೊತ್ತು ಇರಲಿಲ್ಲ. ನಾನು ಇಂದು ಅವಳನ್ನು ಜೊತೆಯಲ್ಲಿ ಕರೆತರಬಾರದಿತ್ತು. ಆರೂವರೆ-ಏಳು ಗಂಟೆಯ ಹೊತ್ತಿಗೆಲ್ಲ,

ಅವಳು ಮನೆಯಲ್ಲಿ ತನ್ನ ಮಗನ ಜೊತೆ ಇರುತ್ತಾಳೆಂದು ಅಂದು ಕೊಂಡಿದ್ದು ಏನಾಯ್ತು ? ಇಂದು ತನಗೆ ಸಾಕಷ್ಟು ಅವಮಾನವಾಯಿತು. 'ಹೌದು, ರೆಡ್ಡಿ ಹೇಳಿದ್ದು ಸತ್ಯ. ನಾನು ಎಂಜಲಿಗೆ ಆಸೆಪಟ್ಟೆ. ಹಣಕ್ಕೆ ದಾಸನಾದೆ. ಸರ್ಕಾರಿ ಹುದ್ದೆಗೆ ದ್ರೋಹ ಬಗೆದೆ.' ಆದರೆ......ತನ್ನ ತಂಗಿಯ ಮುಂದೆ ತಾನು ಕುಸಿದು ಹೋದೆ ಎಂದನ್ನಿಸಿತು. ಅವಳು ತನ್ನನ್ನು ಇನ್ನೆಂದೂ ಮೊದಲಿನಂತೆ ಕಾಣಳು ಎಂಬ ಕಲ್ಪನೇ ಅವನನ್ನು ಭೂಮಿಗಿಳಿಯುವಂತೆ ಮಾಡಿತ್ತು.

ಹಿಂತಿರುಗಿ ನೋಡಿದ. ಹಿಂದಿನ ಸೀಟುಗಳ ನಡುವೆ ಮಹೇಶನ ಹೆಣ ಕೊಕ್ಕರಿಸಿ ಮಲಗಿದೆ. ಸರಿಯಾಗಿ ಕಾಣುತ್ತಿಲ್ಲ. ಮಹೇಶನ ಬಗ್ಗೆ ಅವನಿಗೆ ಅನುಕಂಪ ಬಂತು. ಅವನಿಗೆ ಇಂಥ ಸಾವು ಬರಬಾರದಿತ್ತು. ಅದೂ ಅವನು ನಂಬಿದ್ದ ಸ್ನೇಹಿತನಿಂದ. ತನಗೂ ಮಹೇಶನಿಗೂ ಸುಮಾರು ಒಂಬತ್ತು ವರ್ಷಗಳ ಸಂಬಂಧ. ಅವನು ತನ್ನನ್ನು ಉದ್ದಕ್ಕೂ ಗೌರವದಿಂದ ನಡೆಸಿಕೊಂಡ. ಅವನ ಅಂತ್ಯವನ್ನು ನೆನೆದು ಶರಣ್ ನಡುಗಿದ.

ಇದ್ದಕ್ಕಿದಂತೆ ಆತ ಕುಳಿತ ಸೀಟಿನ ಕೆಳಗೆ ಏನೋ ಅತ್ಯಂತ ಮೆಲ್ಲಗೆ ಟುಸ್ ಎಂದ ಶಬ್ದ ಕೇಳಿಸಿತು. ಅವನು ಒಮ್ಮೆ ಬಗ್ಗಿ ನೋಡಿದ. ಏನೂ ಕಾಣಲಿಲ್ಲ. ಭ್ರಮೆಯಿರಬೇಕು ಎಂದು ತಲೆಯೆತ್ತುವ ಮೊದಲೇ ಕಣ್ಣಿಗೆ ಕತ್ತಲೆ ಕವಿದಂತಾಯಿತು. ತಲೆ ಎತ್ತಲಾಗಲಿಲ್ಲ. ಹಾಗೆಯೇ ಎಡಕ್ಕೆ ಕುಸಿದ. ತಲೆಯಲ್ಲಿ ಗುಯ್ ಎಂಬ ಮೊರೆತ. ಎದೆ ಭಾರವಾದಂತೆನಿಸಿತು. ತನಗೆ ಏನೋ ಆಗುತ್ತಿದೆ......ಹಾರ್ಟ್ ಅಟ್ಯಾಕ್ ಆಗುತ್ತಿದೆಯೇ .....ಅವನ ಪ್ರಜ್ಞೆ ಶೂನ್ಯವಾಯಿತು.

ವಿಷದ ಪ್ರಭಾವ ಅತ್ಯಂತ ಕ್ಷಣಿಕವಾದುದು. ಕಿಟಕಿಗಳನ್ನು ತೆರೆದರೆ ಶುದ್ಧಗಾಳಿ ನುಗ್ಗಿ ನಿಮಿಷ ಮಾತ್ರದಲ್ಲಿ ವಿಷಾನಿಲವನ್ನು ದುರ್ಬಲಗೊಳಿಸುತ್ತದೆ. ರೆಡ್ಡಿ ಗಡಿಯಾರ ನೋಡಿಕೊಂಡ. ಟ್ಯೂಬ್ ಓಪನ್ ಆಗಿ ನಾಲ್ಕೈದು ನಿಮಿಷವಾಗಿದೆ. ಶರಣ್ ಸಾಯಲು ಎರಡರಿಂದ ಮೂರು ನಿಮಿಷ ಸಾಕು. ಈಗ ಸುಮೊದ ಕಿಟಕಿಗಳನ್ನು ಓಪನ್ ಮಾಡಬೇಕು ಅಂದು ಕೊಂಡವನೆ ಕಾರಿನ ರಿಮೋಟ್ ಕೀಯಿಂದ ಕಿಟಕಿಗಳನ್ನು ತೆರೆಯಲು ಪ್ರಯತ್ನಿಸಿದ. ಬೆರಳಿನ ಮೊದಲ ಒತ್ತಿಗೆ ಸುಮೊದ ಕಿಟಕಿಗಳು ತೆರೆಯಲಿಲ್ಲ. ಒಂದು ಕ್ಷಣ ತನ್ನ ಗಮನವನ್ನು ರಿಮೋಟ್ ಮೇಲೆ ಕೇಂದ್ರೀಕರಿಸಿ, ದೃಷ್ಟಿಯನ್ನು ಸುಮೊದ ಮೇಲೆ ನೆಟ್ಟ. ನಿಧಾನವಾಗಿ ಸುಮೊದ ಕಿಟಕಿಗಳು ತೆರೆದು ಕೊಂಡವು. ಅವನಿಗೆ ತೃಪ್ತಿಯಾಯಿತು.

ತನ್ನ ಹಿಂದೆ ಎರಡು ಹೆಜ್ಜೆಯ ಅಂತರದಲ್ಲಿ ನಿಂತಿದ್ದ ಚಂದ್ರಿಕಾ ಮತ್ತು ಭೂಮಿಗೌಡರತ್ತ ತಿರುಗಿದ. ಎದೆ ಧಸಕ್ಕೆಂದಿತು. ಅವರು ಮಾಯವಾಗಿದ್ದರು.

## ಅಧ್ಯಾಯ : ಇಪ್ಪತ್ತೊಂದು

ರೆಡ್ಡಿಯ ಎದೆ ಧಸಕ್ಕೆಂದಿತು. ಅವನು ಕ್ಷಣ ವಿಚಲಿತನಾದ. ಅವನಲ್ಲಿದ್ದ ಆತ್ಮ ವಿಶ್ವಾಸಕ್ಕೆ ಅಘಾತವಾದಂತೆನ್ನಿಸಿತು. ತನ್ನ ಯೋಜನೆಗೆ ಮೊದಲ ತಡೆ ಬಂದಿದೆ. ಇದುವರೆಗೆ ತಾನು ಅಂದು ಕೊಂಡಂತೆ ಆಗಿದೆ. ಮುಂದೆಯೂ ಆಗಬೇಕು. ತನ್ನ ಈ ಯೋಜನೆಯಲ್ಲಿ ಆಕಸ್ಮಿಕವಾಗಿ ಬಂದು ಸೇರಿದ ಈ ಇಬ್ಬರು ಎಲ್ಲಿಮಾಯವಾದರು ? ತಾನು ಕ್ಷಣ ಎಚ್ಚರ ತಪ್ಪಿದೆ. ಭೂಮಿಗೌಡ ಅದರ ಸದುಪಯೋಗ ಪಡೆದಿದ್ದಾನೆ. ಆದರೆ ಅವನು ಈ ರೆಡ್ಡಿಯಿಂದ ಕಣ್ಮರೆಯಾಗಲು ಸಾಧ್ಯವಿಲ್ಲ. ತನ್ನ ಹಿಂದೆ ಎರಡು ಮೂರು ಹೆಜ್ಜೆಗಳ ಅಂತರದಲ್ಲಿ ನಿಂತಿದ್ದ ಅವರಿಂದ ನಾನು ಒಂದೆರಡು ಕ್ಷಣ ಮಾತ್ರ ಬೇರೆ ಕಡೆ ಗಮನಹರಿಸಿದ್ದೆ. ಈ ಒಂದೆರಡು ಕ್ಷಣಗಳಲ್ಲಿ ಅವರೆಲ್ಲಿಗೆ ಹೋಗಲು ತಾನೆ ಸಾಧ್ಯ.

ಅವನ ದೃಷ್ಟಿ ವಿಶಾಲವಾದ ಗದ್ದೆ ಬಯಲನ್ನು ಅಳೆಯಿತು. ಒಮ್ಮೆ ಅವನು ಎಲ್ಲ ದಿಕ್ಕುಗಳನ್ನು ಅವಲೋಕಿಸಿದ. ತಿಂಗಳ ಬೆಳಕಿನಲ್ಲಿ ದೃಷ್ಟಿ ಹಾಯುವವರೆಗೂ ಸೂಕ್ಷ್ಮವಾಗಿ ಗಮನಿಸಿದ. ಆದರೆ ಅವರಿಬ್ಬರು ಅವನ ದೃಷ್ಟಿಗೆ ಬೀಳಲಿಲ್ಲ. ಇದು ಆಶ್ಚರ್ಯ......ಆಶ್ಚರ್ಯ. ಭೂಮಿಯಲ್ಲಿ ಐಕ್ಯರಾದರೆ ? ಅಥವಾ ಮಂಡಿಯುದ್ದ ಬೆಳೆದ ಭತ್ತದ ಪೈರಿನ ನಡುವೆ ಅವಿತು ಕೊಂಡಿದ್ದಾರೆಯೇ ? ಈ ಆಲೋಚನೆ ಬಂದ ತಕ್ಷಣ ಮತ್ತೊಮ್ಮೆ ತನ್ನ ಸುತ್ತಲ ಬಯಲನ್ನು ಅಳೆದ. ಅವರು ಅವಿತಿರಬಹುದಾದ ಜಾಗದಲ್ಲಿ ಆಗಬಹುದಾದ ಅಲ್ಲಾಡುವಿಕೆಯನ್ನು ದೃಷ್ಟಿಸಿ ಹುಡುಕಿದ.

ಅವರು ಮಾಯವಾಗಿದ್ದಲ್ಲಿ, ಯಾವ ದಿಕ್ಕಿಗೆ ಮಾಯವಾಗಿರಬಹುದು ? ಅವನು ತನ್ನ ತಲೆಯಲ್ಲಿ ಮತ್ತೆ ಲೆಕ್ಕಾಚಾರದಲ್ಲಿ ತೊಡಗಿದ. ಈ ಅರೆ ರಸ್ತೆಯ ಪಶ್ಚಿಮಕ್ಕಿದೆ. ಸುಮೊ ಹೆಚ್ಚು ಕಡಿಮೆ ಅರೆಯ ಪಶ್ಚಿಮಕ್ಕೆ ನಿಂತಿದೆ. ತಾನು ಇವರಿಬ್ಬರನ್ನು ಸುಮೊದಿಂದ ಇಳಿಸಿ ಈಶಾನ್ಯ ದಿಕ್ಕಿಗೆ ಕರೆತಂದಿದ್ದೇನೆ. ಅಂದ ಮೇಲೆ ಇವರು ಪಶ್ಚಿಮಕ್ಕೆ ಮಾಯವಾಗಲು ಯತ್ನಿಸಿದ್ದರೆ ತನ್ನ ಕಣ್ಣಿಗೆ ಬಿದ್ದೇ ಬೀಳುತ್ತಿದ್ದರು. ಇನ್ನು ಉಳಿದದ್ದು ತನ್ನ ಬೆನ್ನ ಹಿಂದಿನ ದಿಕ್ಕು. ಉತ್ತರ? ಈಶಾನ್ಯ ? ಪೂರ್ವ! ಸಾಧ್ಯತೆಗಳಿವೆ. ಅವುಗಳಲ್ಲಿ ಹೆಚ್ಚು ಸಾಧ್ಯತೆ ಯಿರುವ ದಿಕ್ಕು ಯಾವುದು ? ಅವನು ಚಿಂತಿಸಿದ. ಪೂರ್ವ ದಿಕ್ಕು ಸಾಧ್ಯವಿಲ್ಲ. ಏಕೆಂದರೆ, ಅಲ್ಲಿ ರಸ್ತೆಯಿದೆ. ಆ ರಸ್ತೆಯ ಎರಡೂ ದಿಕ್ಕೂಗಳು ಬಹಳ ದೂರದವರೆಗೂ ಕಾಣುತ್ತಿವೆ. ಇನ್ನು ದಕ್ಷಿಣ ? ಏಕೋ ಅವನ ಮನಸ್ಸು ಆ ದಿಕ್ಕನ್ನು ತಳ್ಳಿ ಹಾಕಿತ್ತು. ಒಳಮನಸ್ಸು ಆ ದಿಕ್ಕಿನ ಸಾಧ್ಯತೆಗಳನ್ನು ಬಿಟ್ಟು, ಉತ್ತರ ಮತ್ತು ಈಶಾನ್ಯ ದಿಕ್ಕನ್ನು ಪರೀಕ್ಷಿಸು ಎಂದು ಹೇಳಿತು. ಅಂತರಾತ್ಮದ ಮಾತಿಗೆ ಕಿವಿಗೊಡಬೇಕು. ಅದು ಸರಿ ದಾರಿಯನ್ನು ಗುರುತಿಸುತ್ತದೆ.

ಅವನು ಏನೋ ನಿರ್ಧಾರಕ್ಕೆ ಬಂದವನಂತೆ ಸುಮೊ ಬಳಿಗೆ ಬಂದ. ತನ್ನ ಕೀ ಬಳಸಿ

ಮುಂದಿನ ಬಾಗಿಲನ್ನು ತೆರೆದ. ಮುಂದಿನ ಸೀಟಿನ ಮುಂಭಾಗಕ್ಕೆ ಬಾಗಿ ಕುಸಿದು ಶರಣ್ ಸತ್ತಿದ್ದ. ಒಮ್ಮೆ ಶರಣ್‌ನ ಶವವನ್ನು ನೋಡಿ, ಹಿಂದಕ್ಕೆ ಸರಿದು ಬಾಗಿಲು ಮುಚ್ಚಿದ. ಹಿಂದಕ್ಕೆ ಬಂದು ಹಿಂದಿನ ಬಾಗಿಲು ತೆರೆದು ಮಹೇಶನ ಶವವನ್ನು ನೋಡಿದ. ಭೂಮಿಗೌಡ ಮತ್ತು ಚಂದ್ರಿಕಾರ ನಾಪತ್ತೆಯ ಹತಾಶೆಯಲ್ಲೂ ಈ ಶವವನ್ನು ನೋಡಿದಾಗ ಒಂದು ಬಗೆಯ ತೃಪ್ತಿ ಅವನಲ್ಲುಂಟಾಯಿತು.

ತಕ್ಷಣ ತನ್ನ ಜಡ್ಜ್‌ಮೆಂಟಿನಲ್ಲಿ ಆಗಿರುವ ಪ್ರಧಾನ ತಪ್ಪಿನ ಅರಿವಾಯಿತು. ಭೂಮಿಗೌಡ ಮತ್ತು ಚಂದ್ರಿಕಾಳನ್ನು ಸುಮೊದಿಂದ ಇಳಿಸಿದ್ದೇ ಆ ತಪ್ಪು. ಶರಣ್‌ನ ಜೊತೆಯಲ್ಲಿ ಅವರಿಬ್ಬರನ್ನು ಸುಮೊದಲ್ಲಿ ಕೂಡಿಹಾಕಿ ವಿಷಾನಿಲದ ಮೂಲಕ ಸಾಯಿಸಬಹುದಿತ್ತು. ಅತಿಯಾದ ಬುದ್ಧಿ ಬಳಸಿ ಮೋಸ ಹೋದೆ ಎಂದುಕೊಂಡ. ಹಾಗೆಂದು ಕೊಂಡ ಕೂಡಲೇ ಅವನಲ್ಲಿ ಕೋಪ ಕುದಿಯತೊಡಗಿತು. ಆ ಕೋಪ ಏಕ ಕಾಲದಲ್ಲಿ ತನ್ನ ಮೇಲೆಯೂ ತಪ್ಪಿಸಿಕೊಂಡ ಇಬ್ಬರ ಮೇಲೆಯೂ ಅಧಿಕವಾಯಿತು.

ಅದೇ ಕೋಪದಿಂದ ಅವನು ಸುಮೊದ ಹಿಂದಿನ ಬಾಗಿಲನ್ನು ಡಭಾರನೆ ಹಾಕಿದ. ಆ ರಭಸಕ್ಕೆ ಮಹೇಶನ ಶವ ಅಲುಗಾಡಿತು.

ಅವನು ಬಾಕುವನ್ನು ಬಲಗೈಯಲ್ಲಿ ಹಿಡಿದು ಗದ್ದೆಯನ್ನು ಈಶಾನ್ಯದಿಕ್ಕಿನಿಂದ ಪೂರ್ವ ದಿಕ್ಕಿಗೆ ಶೋಧಿಸತೊಡಗಿದ. ಅವರು ಹೆಚ್ಚುದೂರ ಹೋಗಿರಲು ಸಾಧ್ಯವಿಲ್ಲ. ಈ ಗದ್ದೆಯಲ್ಲಿ ಅವಿತುಕೊಂಡಿದ್ದರೆ ಹೆಚ್ಚು ಹೊತ್ತು ಮಲಗಲು ಸಾಧ್ಯವಿಲ್ಲ. ಹೆಜ್ಜೆ ಇಟ್ಟರೆ ಕೆಸರು. ಭತ್ತದ ಬುಡದಲ್ಲಿ-ಗದ್ದೆಯಲ್ಲಿ ಎರಡು ಇಂಚು ನೀರು ನಿಂತುತ್ತು. ಅದೂ ಅಲ್ಲದೆ ಭೂಮಿಗೌಡ ದೊಡ್ಡ ಆಳು. ಅವನು ಅವಿತು ಮಲಗಿದರೆ ಅಷ್ಟಗಲ ಹಸುರು ಭತ್ತದ ಪೈರಿನ ನಡುವೆ ಕುಳಿ ಬಿದ್ದೇ ಬೀಳುತ್ತದೆ. ಚಂದ್ರಿಕಾಳು ತೀರಾ ತೆಳ್ಳಗೆಯ ಹೆಂಗಸಲ್ಲ. ಅಂದ ಮೇಲೆ ಅವರು ಅವಿತಗುರುತು ಸಿಕ್ಕೇ ಸಿಗುತ್ತದೆ. ಅವನು ಗದ್ದೆಯ ತೆವರಿಯ ಮೇಲೆ ತನ್ನ ದೃಷ್ಟಿಯನ್ನು ಎರಡೂ ದಿಕ್ಕಿಗೂ ಹರಿಯಬಿಡುತ್ತಾ ಶೋಧಿಸತೊಡಗಿದ.

ಅವನು ಸುಮಾರು ಹತ್ತು ನಿಮಿಷಕ್ಕೂ ಮೇಲೆ ಶೋಧಕಾರ್ಯ ನಡೆಸಿದ. ಅರೆಯ ಹತ್ತಿರದಿಂದ ಸುಮಾರು ಒಂದು ಫರ್ಲಾಂಗು ವ್ಯಾಪ್ತಿಯ ಗದ್ದೆಯನ್ನು ತಡಕಾಡಿದ. ಕ್ಷಣಕ್ಷಣಕ್ಕೆ ಅವನಲ್ಲಿ ಮೊದಲಿದ್ದ ಭರವಸೆ ಕ್ಷೀಣಿಸುತ್ತಾ ಬಂತು. ಅವನ ಕೋಪ ಅಧಿಕವಾಗ ತೊಡಗಿತು.

ಆ ಸಮಯದಲ್ಲಿ ಪೊಮೇರಿಯನ್ ನಾಯಿ 'ಕುಯ್ ಕುಯ್' ಎಂದು ಕುಯ್ ಗುಡುವುದು ಕೇಳಿಸಿತು. ಆ ಧ್ವನಿ ಪೂರ್ವ-ಈಶಾನ್ಯ ದಿಕ್ಕುಗಳ ನಡುವಿನಿಂದ ಬಂದ ಹಾಗಾಯ್ತು. ಅವನಲ್ಲಿ ಕ್ಷೀಣಿಸುತ್ತಿದ್ದ ಭರವಸೆ ಮತ್ತೆ ಚಿಗುರೊಡೆಯಿತು.

## ಅಧ್ಯಾಯ : ಇಪ್ಪತ್ತೆರಡು

ಅವರಿಬ್ಬರೂ ಸುರಂಗವೊಂದರಲ್ಲಿ ಹೆಜ್ಜೆ ಹಾಕುತ್ತಿದ್ದರು. ನೀರು ಅವರ ಮೊಣಕಾಲಿನವರೆಗೂ ತಾಗುತ್ತಿತ್ತು. ಬೇಸಿಗೆಯಲ್ಲೂ ಅದು ಕೊರೆಯುವಷ್ಟು ತಣ್ಣಗಿತ್ತು. ಸುರಂಗದ ತಳದಲ್ಲಿ ಕೆಸರು ತುಂಬಿದ್ದರಿಂದ ಅವರು ಕಾಲಿಟ್ಟ ಜಾಗದಲ್ಲಿ ಕೆಸರು ರಾಡಿಯಾಗುತ್ತಿತ್ತು. ಸುರಂಗಕ್ಕೆ ಬೆಳಕು ಯಾವ ದಿಕ್ಕಿನಿಂದಲೂ ಬರುತ್ತಿರಲಿಲ್ಲವಾದ್ದರಿಂದ ಕತ್ತಲೆಯ ಕೂಪವೇ ಅದಾಗಿತ್ತು. ನೀರು ಪೂರ್ವಕ್ಕೆ ಹರಿಯುತ್ತಿತ್ತು. ಸುರಂಗದ ಮೇಲ್ಭಾಗದಲ್ಲಿ ಒಂದರ ಪಕ್ಕ ಒಂದರಂತೆ ಜೋಡಿಸಿದ್ದ ಕಲ್ಲು ಚಪ್ಪಡಿಗಳ ಸಂದಿನಿಂದ ನೀರು ತೊಟ್ಟಿಕ್ಕುತ್ತಿತ್ತು. ಅವರಾಗಲೇ ಸಂಪೂರ್ಣವಾಗಿ ತೊಯ್ದಿದ್ದರು.

ಚಂದ್ರಿಕಾಳನ್ನು ಭಯ ಆವರಿಸಿತ್ತಾದರೂ ಭೂಮಿಗೌಡ ಜೊತೆಯಲ್ಲಿ ಇದ್ದುದರಿಂದ ಅವಳೆದೆಯಲ್ಲಿ ಭರವಸೆಯ ಕಿರಣವೊಂದು ಈಜಾಡುತ್ತಿತ್ತು. ಆ ಭರವಸೆ ಅವಳ ಎದೆಯಲ್ಲಿ ಭದ್ರವಾಗಿದ್ದುದರಿಂದಲೇ ಭೂಮಿಗೌಡ ಈ ಸುರಂಗದೊಳಕ್ಕೆ ತನ್ನನ್ನು ಇಳಿಬಿಟ್ಟಾಗ ಕತ್ತಲೆಯ ಕೂಪಕ್ಕೆ ಕಾಲಿಟ್ಟಿದ್ದಳು. ರೆಡ್ಡಿ ತನ್ನಣ್ಣನನ್ನು ಕೊಂದಿರುವ ವಿಷಯವನ್ನು ತಿಳಿಸಿದಾಗ ತನಗೆ ತಲೆ ತಿರುಗು ಬಂದಿತು. ಕಣ್ಣು ಕತ್ತಲು ಕವಿಯಿತು. ತಾನು ಭೂಮಿಗೌಡನನ್ನು ಹಿಡಿದು ಕುಸಿದೆ.

ಮುಂದೆ ಏನಾಗುತ್ತಿದೆಯೆಂದು ಆಲೋಚಿಸುವಷ್ಟರಲ್ಲಿಯೇ ಭೂಮಿಗೌಡ ತನ್ನನ್ನು ತನ್ನ ಬಲ ತೋಳಿನಿಂದ ಅನಾಮತ್ತಾಗಿ ಬಳಸಿ ಮಿಂಚಿನಂತೆ ಎತ್ತಿ ಅರೆಯ ಉತ್ತರ ದಿಕ್ಕಿನತ್ತ ಓಡಿದ. ಆ ಕ್ಷಣದಲ್ಲಿ ಏನಾಗುತ್ತಿದೆ ? ಭೂಮಿಗೌಡ ಎಲ್ಲಿಗೆ ಕರೆದುಕೊಂಡು ಹೋಗುತ್ತಿದ್ದಾನೆ ಎಂದು ಚಿಂತಿಸಲಿಲ್ಲ. ರೆಡ್ಡಿಯಿಂದ ದೂರ ಹೋಗುವುದು ಅವಳಿಗೆ ಮುಖ್ಯವಾಗಿತ್ತು. ಅವನ ಬಳಿಯಿದ್ದು, ಅವನಿಂದ ಸಾಯುವ ಬದಲು ಭೂಮಿಗೌಡನ ಜೊತೆ-ಸಾವು ಬಂದಲ್ಲಿ-ಸಾಯುವುದು ಅವಳಿಗೆ ಆನಂದದಾಯಕವಾಗಿತ್ತು.

ಆ ಆತಂಕದ ಸಮಯದಲ್ಲೂ- ಅವನು ತನ್ನನ್ನು ತೋಳಿನಲ್ಲಿ ಅನಾಮತ್ತಾಗಿ ಬಳಸಿ ಮಗುವಿನಂತೆ ಎತ್ತಿಕೊಂಡಾಗ ಎಷ್ಟೋ ಹಗುರವಾದಂತೆನಿಸಿತು. ತೇಲಿದಂತೆ, ಹಾರಿದಂತೆ ಆಗಿ ಕೆಲವೇ ಕೆಲವು ಕ್ಷಣ ಮೈಮರೆವಂತಾಯಿತು. ಅದೆಂತಹ ವಿಚಿತ್ರ ! ಗಂಡು ಹೆಣ್ಣಿನ ಸಂಬಂಧ! ಅಣ್ಣ ಅಲ್ಲಿ ಸತ್ತುಬಿದ್ದಿದ್ದಾನೆ; ತನ್ನ ಪ್ರಾಣ ಆತಂಕದ ಸ್ಥಿತಿಯಲ್ಲಿದೆ. ಆದರೆ ಈ ಭೂಮಿಗೌಡನ ಸ್ಪರ್ಶ ತನ್ನನ್ನು ವರ್ತಮಾನದ ಭಯಾನಕತೆಯನ್ನು ಮರೆಯುವಂತೆ ಮಾಡಿತಲ್ಲ ! ಈ ಗಂಡು ಹೆಣ್ಣಿನ ಸಂಬಂಧದ ಅಂತರಾಳವನ್ನು ಬಲ್ಲವರಾರು ? ಆ ಕೊರೆಯುವ ನೀರಿನಲ್ಲೂ ಅವಳು ಅವನ ಸ್ಪರ್ಶದಿಂದಲೇ ಪುಳಕಗೊಂಡಿದ್ದಳು, ಅವನು ಅರೆಯ ಮೇಲೆ ತನ್ನನ್ನು ಅನಾಮತ್ತಾಗಿ ಎತ್ತಿಕೊಂಡಾಗ, ತನಗರಿವಿಲ್ಲದಂತೆ ತನ್ನ ತೋಳುಗಳು ಅವನನ್ನು ಬಳಸಿದವಲ್ಲ ! ಪ್ರತಿ ಸಾವಿನಲ್ಲೂ ಜೀವ ಮೊಳಕೆಯೊಡೆಯುತ್ತದೆ ಎಂದು ಹೇಳುತ್ತಾರಲ್ಲ. ಅದು ನಿಜವಿರಬಹುದು.

ಆತನಿಗಾಗಿ ತನ್ನ ಜೀವ ತುಡಿಯುತ್ತದೆ; ಅವನು ತನ್ನವನಾಗಬೇಕು. ತನ್ನ ಮೈಮನಗಳ ಮೌನ ಮುರಿಯಬೇಕು. ಇಂದೇ ಸಾವು ಬಂದರೂ ಸರಿ, ಅದರ ಬಗ್ಗೆ ತನಗೆ ತೃಪ್ತಿಯಿದೆ.

ಚಂದ್ರಿಕಾ ಕತ್ತಲೆಯಲ್ಲಿ ಅವನತ್ತ ಮತ್ತಷ್ಟು ಒತ್ತಿ ನಿಧಾನವಾಗಿ ಹೆಜ್ಜೆಹಾಕತೊಡಗಿದಳು. ಭೂಮಿಗೌಡನ ಒಂದು ಕೈ ಅವಳ ಸೊಂಟವನ್ನು ಬಳಸಿ ಭದ್ರವಾಗಿ ಹಿಡಿದುಕೊಂಡಿತ್ತು. ಅವಳು ಅವನ ದೇಹಕ್ಕೆ ಅಂಟಿಕೊಂಡ ಬಳ್ಳಿಯಾಗಿದ್ದಳು.

ಸುರಂಗದ ಕತ್ತಲ ದಾರಿಯಲ್ಲಿ ಭೂಮಿಗೌಡನಿಗೆ ತಾನು ಎತ್ತ ಹೋಗುತ್ತಿದ್ದೇನೆ ಎಂಬ ಸ್ಪಷ್ಟ ಜ್ಞಾನವಿತ್ತು. ಈ ಸುರಂಗ ಈಗಿರುವ ರೀತಿಯ ಸ್ವರೂಪದಲ್ಲಿ ಅರ್ಧ ಕಿಲೋಮೀಟರ್ ಸಾಗಿ ಶ್ರೀನಿವಾಸಸ್ವಾಮಿ ದೇವಸ್ಥಾನದ ಹಿಂಬದಿ ಪ್ರಕಾರವನ್ನು ಮುಟ್ಟಿ, ಅನಂತರ ಅದು ಮತ್ತೆ ಒಂದು ಫರ್ಲಾಂಗು ಕೊಳವೆಯಾಕಾರದಲ್ಲಿ ಸಾಗಿ ಕಾವೇರಿ ನದಿಯನ್ನು ಮುಟ್ಟುತ್ತದೆ. ಈ ಸುರಂಗ ವೃತ್ತಾಕಾರವಾಗಿರಲಿಲ್ಲ. ಅದು ಚಚ್ಚೌಕಾರವಾಗಿತ್ತು. ಸುಮಾರು ನಾಲ್ಕು ಅಡಿ ಅಗಲ, ಐದು ಅಡಿ ಎತ್ತರ. ಅವನು ಹೆಚ್ಚು ಕಡಿಮೆ ಬಗ್ಗಿಯೇ ನಡೆಯಬೇಕಾಗಿತ್ತು. ಅವನಿಗಿಂತ ಎತ್ತರದಲ್ಲಿ ಕುಳ್ಳಾಗಿದ್ದ ಚಂದ್ರಿಕಾಳೆ ಬಗ್ಗಿ ನಡೆಯಬೇಕು. ಅವಸರದಲ್ಲಿ ಕಾಲಿಟ್ಟರೆ ಮುಂದೆ ಏನು ಕಾದಿರುವುದೋ ಗೊತ್ತಿಲ್ಲ. ಸುಮಾರು ವರ್ಷಗಳಿಂದ ಇಲ್ಲಿ ನೀರು ಹರಿಯುತ್ತಲೇ ಇದೆ. ಸುರಂಗದ ಮೂರು ಕಡೆ ಕಲ್ಲು ಚಪ್ಪಡಿಗಳಿಂದಲೇ ಒಳಗೋಡೆಯನ್ನು ಕಟ್ಟಲಾಗಿದೆ. ಸುರಂಗ ಭೂಮಿಯಿಂದ ಹೆಚ್ಚು ಕಡಿಮೆ ಐದು ಅಡಿ ಆಳದಲ್ಲಿತ್ತು. ಸುರಂಗದ ಮೇಲೆ ರೈತರು ಸಹಜವೆಂಬಂತೆ ಬೆಳೆಯನ್ನು ಬೆಳೆಯುತ್ತಲೇ ಬಂದಿದ್ದಾರೆ. ಇಲ್ಲಿನ ಸುತ್ತಮುತ್ತಲಿನ ಕೆಲವು ಹಳೆಯ ತಲೆಗಳಿಗೆ ಬಿಟ್ಟರೆ, ಇಲ್ಲಿ ಸುರಂಗವಿರುವ ಸಂಗತಿ ಅನೇಕರಿಗೆ ಗೊತ್ತಿಲ್ಲ.

ಅರೆಯಿಂದ ಅರ್ಧ ಕಿಲೋಮೀಟರ್ ಸಾಗಿದ ಸುರಂಗ ತನ್ನ ಚಚ್ಚೌಕಾರವನ್ನು ಕಳೆದುಕೊಂಡು ಮುಂದೆ ಕಿರಿದಾಗಿ ಮುಂದೆ ಹರಿಯುತ್ತದೆ. ಚಚ್ಚೌಕಾರ ಕೊನೆಗೊಳ್ಳುವ ಹಂತದಲ್ಲಿ-ನೇರವಾಗಿ ಒಂದು ಕಲ್ಲುಚಪ್ಪಡಿಯಿದೆ. ಅದರ ತಳಭಾಗದಲ್ಲಿ ಶ್ರೀನಿವಾಸಸ್ವಾಮಿಯ ಪಾದಗಳ ಜೋಡಿ ಚಿತ್ರವನ್ನು ಕೊರೆಯಲಾಗಿದೆ. ಸುರಂಗ ಆ ಜಾಗದಲ್ಲಿ ಹೆಚ್ಚು ನೀರನ್ನು ಶೇಖರಿಸಿಕೊಂಡಿರುತ್ತದೆ. ನಾಲ್ಕು ಅಡಿಗಳ ಅಗಲದಲ್ಲಿ ಹರಿಯುತ್ತಿದ್ದ ನೀರು ಇದ್ದಕ್ಕಿದಂತೆ ಎರಡು ಅಡಿ ಅಗಲದ ವೃತ್ತಕಾರದ ತೂತಿಗೆ ನುಗ್ಗುವಾಗ ತನ್ನ ಪಾತ್ರವನ್ನು ಹಿಂದಕ್ಕೆ ಹಿಗ್ಗಲಿಸಿ ಕೊಳ್ಳುತ್ತದೆ. ಭೂಮಿಗೌಡನಿಗೆ ನೆನಪಿದೆ. ಅಲ್ಲಿ ನೀರು ಸೊಂಟದವರೆಗೆ ಬರುತ್ತದೆ. ಚೌಕಾಕಾರ ಕೊನೆಗೊಳ್ಳುವ ಜಾಗದಲ್ಲಿ ನಿಂತು, ಕೈ ಬೆರಳುಗಳ ಸಹಾಯದಿಂದ ಶ್ರೀನಿವಾಸಸ್ವಾಮಿಯ ಪಾದಗಳ ಉಬ್ಬು ಚಿತ್ರವನ್ನು ಗುರುತಿಸಿಬೇಕು. ಅನಂತರ ಕಾಲುಗಳನ್ನು ಭದ್ರವಾಗಿ ನೆಲಕ್ಕೆ ಊರಿ ಆ ಚಪ್ಪಡಿಯನ್ನು ಮೇಲಕ್ಕೆತ್ತಬೇಕು. ಮೇಲೆ ಕೆಳಗೆ-ಎರಡೂ ಕಡೆ ಕಲ್ಲುಮುಳ್ಳು ಹುಯ್ದಿರುವ ಆ ನಯವಾದ ಕಲ್ಲು ನಿಧಾನವಾಗಿ ಮೇಲೇಳುತ್ತದೆ. ಶ್ರೀನಿವಾಸಸ್ವಾಮಿ ದೇವಸ್ಥಾನದ ಹಿಂಬದಿ

ಪ್ರಕಾರದಲ್ಲಿರುವ ಕಾವೇರಿ ತಾಯಿ ಗುಡಿಯ ವಿಗ್ರಹದ ಹಿಂಭಾಗ ದೃಷ್ಟಿಗೆ ಗೋಚರವಾಗುತ್ತದೆ.

ಅರೆಯಿಂದ ಹಿಡಿದು ಕಾವೇರಿ ನದಿ ತೀರದವರೆಗೂ ಮುದ್ದೇಗೌಡರ ಗದ್ದೆಯಿತ್ತು. ಆ ಗದ್ದೆಯ ಒಂದು ಮಗ್ಗುಲಿಗೆ ರಸ್ತೆಯೂ, ಆ ರಸ್ತೆಗೆ ಹೊಂದಿಕೊಂಡಂತೆ ಶ್ರೀನಿವಾಸ ಕ್ಷೇತ್ರವೂ ಇದ್ದವು. ಒಮ್ಮೆ ಸಂಕ್ರಾಂತಿಯ ಭೂಮಿ ಪೂಜೆಯ ಸಂದರ್ಭದಲ್ಲಿ ಮುದ್ದೇಗೌಡರು ಅರೆಯ ಮೇಲೆ ಕುಳಿತು ಈ ಸುರಂಗದ ಸಂಗತಿಯನ್ನು ಭೂಮಿಗೌಡನಿಗೆ ಹೇಳಿದ್ದರು. "ಯಾವ ಕಾಲದ್ದೋ ಸರಿಯಾಗಿ ಗೊತ್ತಿಲ್ಲ. ಟಿಪ್ಪೂ ಸುಲ್ತಾನ್ ಕಾಲದ್ದು ಅಂತ ಕೆಲವರು ಹೇಳ್ತಾರೆ; ಅಲ್ಲ, ಅದು ಚಿಕ್ಕದೇವರಾಜ ಒಡೆಯರಕಾಲದ್ದು ಅಂತ ಕೆಲವರು ಹೇಳ್ತಾರೆ. ಈ ಸುರಂಗ ಈ ಅರೆಯಿಂದ ಪ್ರಾರಂಭವಾಗಿ ಕೇವಲ ಅರ್ಧ ಕಿಲೋಮೀಟರ್ ಸಾಗಿ, ದೇವಸ್ಥಾನದಲ್ಲಿ ಯಾಕೆ ಏಳ್ತದೆ ಅಂತ ನನಗೆ ತಿಳೀವಲ್ದು. ನೀವು ಸಂಶೋಧನೆ ಗಿಂಶೋಧನೆ ಅಂತ ಮಾಡೋರು ಅದನ್ನು ಕಂಡು ಹಿಡಿಬೇಕು. ಯಾರೇ ಕಟ್ಟಿರಲಿ ಸುಮ್ಮಸುಮ್ಮನೆ ಯಾಕೆ ಕಟ್ತಾರೆ ? ಏನೋ ಉದ್ದೇಶ ಇರ್ಬೇಕು ಅಲ್ವಾ ?" ಎಂದು ಭೂಮಿಗೌಡನನ್ನು ಪ್ರಶ್ನಿಸಿದ್ದರು.

ಭೂಮಿಗೌಡನಿಗೆ ಕುತೂಹಲವಾಯಿತು. ಅದಾದ ಮಾರನೆಯ ದಿನವೆ ಎರಡು ಶಕ್ತಿಯುತವಾದ ಬ್ಯಾಟರಿಗಳನ್ನು ಹಿಡಿದು, ಮುದ್ದೇಗೌಡರ ಮಗ ಪುಟ್ಟಸ್ವಾಮಿಯ ಜೊತೆ ಸುರಂಗಕ್ಕೆ ಇಳಿದೇ ಇಟ್ಟ! ಟಾರ್ಚ್‌ಗಳು ಇದ್ದುದರಿಂದ-ಜೊತೆಗೆ ಅದು ಹಗಲು ಹೊತ್ತು ಆದ್ದರಿಂದ-ಸುರಂಗದಲ್ಲಿ ಹಗಲಿಗೂ ರಾತ್ರಿಗೂ ಅಂತ ವ್ಯತ್ಯಾಸ ಇರಲಿಲ್ಲ ಎನ್ನುವುದು ಬೇರೆ ಮಾತು- ಸುರಂಗದಲ್ಲಿ ಸಾಗುವುದು ಅಂತ ಕಷ್ಟವಾಗಲಿಲ್ಲ. ಅರ್ಧ ಕಿಲೋ ಮೀಟರ್ ಉದ್ದದ ಆ ಸುರಂಗವನ್ನು ಅವರು ಹತ್ತು-ಹದಿನೈದು ನಿಮಿಷದಲ್ಲಿ ಕ್ರಮಿಸಿದ್ದರು.

ಆದರೆ ಈಗ ಪರಿಸ್ಥಿತಿ ಭಿನ್ನವಾಗಿತ್ತು. ಅವನ ಜೊತೆಯಲ್ಲಿ ಹೆಜ್ಜೆ ಹಾಕುತ್ತಿದ್ದವಳು ಕಾಡು ಮೇಡು ತುಳಿಯದ, ನೆರಳಿನಲ್ಲೇ ಬಾಳಿ ಬೆಳೆದ ಹೆಣ್ಣು. ಅವಳ ಮನಸ್ಸು ಎಷ್ಟೇ ಸದೃಢವಾದುದಾದರೂ ಅವಳ ದೇಹ ದೈಹಿಕ ಶ್ರಮವನ್ನು ಸಹಿಸಲು ನಿರಾಕರಿಸುತ್ತಿತ್ತು ಎಂಬುದು ಅವಳು ಬಿಡುವ ಉಸಿರಿನಿಂದಲೇ ಗೊತ್ತಾಗುತ್ತಿತ್ತು. ಏನೇ ಆದರೂ ನಗರದ ಹೆಣ್ಣುಮಗಳು. ಅವಳು ತನ್ನ ಜೀವನದಲ್ಲಿ ಎಂದೂ ಊಹಿಸದ ಘಟನಾವಳಿಗಳು ಇಂದು ಅವಳ ಕಣ್ಮುಂದೆ ನಡೆದಿವೆ. ಅವಳೊಡನೆ ರಕ್ತ ಹಂಚಿಕೊಂಡು ಹುಟ್ಟಿದ್ದ ಅವಳ ಅಣ್ಣ ಸತ್ತಿದ್ದಾನೆ. ಅವಳ ಪ್ರಾಣಕ್ಕೆ ಅಪಾಯವಿದೆಯೆಂಬುದನ್ನು ಅರಿತಿದ್ದಾಳೆ. ಈ ಎಲ್ಲಾ ಶಾಕ್‌ಗಳಿಂದ ಅವಳು ತತ್ತರಿಸಿದ್ದಾಳೆ. ಅವಳಿಗೆ ಭರವಸೆಯ ಆಸರೆಯೊಂದು ಬೇಕು. ಆ ಆಸರೆಯನ್ನು ಅವಳು ತನ್ನಲ್ಲಿ ಗುರುತಿಸಿದ್ದಾಳೆ. ಸುರಂಗಕ್ಕೆ ಅನಾಮತ್ತಾಗಿ ಅವಳನ್ನು ಎತ್ತಿ ಇಳಿಬಿಟ್ಟಾಗ ಏಕೆ ? ಎತ್ತ ? ಎಂಬ ಪ್ರಶ್ನೆಗಳೇ ಅವಳ ಕಣ್ಣಲ್ಲಿ ಮೂಡಲಿಲ್ಲ. ಸುಮ್ಮನೆ ತನ್ನನ್ನು ನನ್ನ ವಶಕ್ಕೆ ಒಪ್ಪಿಸಿಕೊಂಡಳು. ಅವಳು ತುಂಬಾ ಆಪ್ಯಾಯವಾದಳು. ಆ ಕತ್ತಲೆಯಲ್ಲಿ ಏಕೋ ಅವಳನ್ನು ಒಮ್ಮೆ ಮುದ್ದಿಸಬೇಕು ಅಂತ ಅನಿಸಿತು. ತನ್ನನ್ನು ಒತ್ತಿ ಆತುಕೊಂಡಿದ್ದ ಅವಳನ್ನು ತನ್ನ

ಬಲತೋಳಿನಿಂದ ಒಮ್ಮೆ ಬಿಗಿಯಾಗಿ ಅಪ್ಪಿದ. ಅವನ ಅಪ್ಪುಗೆಗೆ ಪ್ರತಿಯಾಗಿ ಅವಳು ಮತ್ತಷ್ಟು ಅವನ ದೇಹವನ್ನು ಒತ್ತಿ ಆತುಕೊಂಡಳು.

ಅವಳು ತಲೆ ಬಗ್ಗಿಸಿದಂತೆಯೇ ಅವನ ಕಿವಿಯ ಬಳಿ "ಬೆಳ್ಳಿ" ಎಂದಳು.ಇದು ಈ ಹತ್ತು ನಿಮಿಷದಲ್ಲಿ ಮೂರು ಬಾರಿ ಅವಳ ಬಾಯಿಂದ ಬಂದ ಪದ. ಅರೆಯ ಬಳಿ ರೆಡ್ಡಿಯಿಂದ ಬಚಾವಾಗಲು ಅವಳನ್ನು ಅನಾಮತ್ತಾಗಿ ಎತ್ತಿಕೊಂಡಾಗ ಬೆಳ್ಳಿ ಅವಳ ಕಾಲ ಬುಡದಲ್ಲಿಯೇ ಇತ್ತು. ಅವಳು ತನ್ನಣ್ಣನ ಸಾವಿನ ಸುದ್ದಿಯನ್ನು ಕೇಳಿ ಕುಸಿಯುವ ಸಂದರ್ಭದಲ್ಲಿ ತನ್ನ ತೆಕ್ಕೆಯಲ್ಲಿದ್ದ ಬೆಳ್ಳಿಯನ್ನು ಅವಳು ಕೆಳಗೆ ಬಿಟ್ಟಿದ್ದಳು ಅಥವಾ ಅದು ಅವಳ ಕೈಯಿಂದ ಜಾರಿತ್ತು. ತಾನು ಅವಳನ್ನೆತ್ತಿಕೊಂಡು ಅತ್ಯಂತ ವೇಗದಲ್ಲಿ ಕ್ರಮಿಸಿ, ಅರೆಯ ಉತ್ತರ ದಿಕ್ಕಿನಲ್ಲಿ ನಿಂತಿದ್ದ ಒಂಟಿ ಬಸುರಿಮರದ ಬುಡದಲ್ಲಿದ್ದ ಸುರಂಗದ ಬಾಯಿಗೆ ಬಂದಿದ್ದ. ಬಸುರಿ ಮರದ ಮರೆಯಲ್ಲಿ ನಿಂತು ರೆಡ್ಡಿಯನ್ನು ಗಮನಿಸಿದ. ಅವನು ತಾವಿಲ್ಲದಿರುವುದನ್ನು ಕಂಡು ಗಾಬರಿಯಿಂದ ಸುತ್ತಮುತ್ತನೋಡುತ್ತಿರುವುದು ಅವನ ಗಮನಕ್ಕೆ ಬಂತು. ಒಮ್ಮೆ ಅವನ ದೃಷ್ಟಿ ತಮ್ಮತ್ತಲೇ ನೆಟ್ಟಿರುವುದನ್ನು ಕಂಡು ಬಸುರಿಮರದ ಮರೆಯಲ್ಲಿ ಮತ್ತಷ್ಟು ಅವಿತುಕೊಂಡಿದ್ದ. ಅವನು ಸುಮೊ ಬಳಿ ಹೋದುದನ್ನು ಗಮನಿಸಿ, ಸುರಂಗದ ಬಾಯಿಯನ್ನು ಮುಚ್ಚಿದ್ದ ಕಲ್ಲು ಚಪ್ಪಡಿಯನ್ನು ಹುಡುಕಿದ. ಅದರ ನಿಖರವಾದ ಜಾಗ ಗೊತ್ತಿತ್ತು. ಆದರೆ ಅದರ ಮೇಲೆ ಮಣ್ಣು-ಹುಲ್ಲು ಬೆಳೆದುಕೊಂಡಿತ್ತು. ತನ್ನ ಒರಟಾದ ಕೈಗಳಿಂದ ಚಪ್ಪಡಿಯ ಅಂಚನ್ನು ಗುರುತಿಸಿ, ಮೇಲಕ್ಕೆತ್ತಿದ್ದ. ಕೆಳಗೆ ಕತ್ತಲೆ ತುಂಬಿದ್ದ ಬಾವಿಯಂತೆ ಕಂಡ ಆ ಸುರಂಗದೊಳಕ್ಕೆ ಚಂದ್ರಿಕಾಳನ್ನು ಎರಡೂ ಕಂಕುಳಿಗೆ ಕೈಹಾಕಿ ಹಿಡಿದು ಇಳಿಯಬಿಟ್ಟ. ಅವಳ ಪಾದಗಳಿಗೆ ತಣ್ಣನೆಯ ಕೆಸರು ಸೋಕಿದ ತಕ್ಷಣ ಅವಳು ಹ್ಹಾ......ಎಂದಳು. ಬಹುಶಃ ಅಲ್ಲಿಯವರೆಗೆ ತಾನು ಏನು ಮಾಡುತ್ತಿರುವನೆಂಬ ಅರಿವು ಅವಳಿಗಿದ್ದಂತೆ ತೋರಲಿಲ್ಲ. ಅವಳು ಅವಳಣ್ಣನ ಸಾವಿನ ಶಾಕ್‌ನಿಂದ ಹೊರಬಂದವಳೆ, ಏನನ್ನೊ-ಕಳೆದು ಕೊಂಡವಳಂತೆ "ಬೆಳ್ಳಿ ? ಬೆಳ್ಳಿ ಎಲ್ಲಿ ?" ಎಂದು ಕೇಳಿದ್ದಳು.

ಆಗ ಅವನು ಅವಳ ಪಕ್ಕಕ್ಕೆ ಇಳಿದು ನಿಂತು, ಸುರಂಗದ ಚಪ್ಪಡಿಯನ್ನು ನಿಧಾನವಾಗಿ ಎಳೆದು ಅದರ ಬಾಯಿ ಮುಚ್ಚಿದ. ಚಂದ್ರನ ಬೆಳಕು ಕೂಡಲೇ ಮಾಯವಾಯಿತು. ಸಂಪೂರ್ಣ ಕತ್ತಲು ಕವಿಯಿತು. ಅವಳು ಭೀತಿಯಿಂದ ಅವನನ್ನು ಆಲಂಗಿಸಿಕೊಂಡಳು. ಭೂಮಿಗೌಡ ಅವಳ ಎರಡು ಭುಜಗಳನ್ನು ಹಿಡಿದು ಅಲ್ಲಾಡಿಸಿ "ಚಂದ್ರಿಕಾ, ಮೊದಲು ನನ್ನ ಮಾತು ಕೇಳಿ. ತಕ್ಷಣದಲ್ಲಿ ರೆಡ್ಡಿಯಿಂದ ಪಾರಾಗಲು ಇದೊಂದೇ ದಾರಿ. ನನ್ನೊಡನೆ ಒಂದರ್ಧ ಗಂಟೆ ಸಹಕರಿಸಿ, ನಾನಿದ್ದೇನೆ, ನಿಮಗೆ ಭಯಬೇಡ. ನಿಮ್ಮನ್ನು ಜೋಪಾನ ಮಾಡಿ ಕರೆದುಕೊಂಡು ಹೋಗುವುದು ನನ್ನ ಜವಾಬ್ದಾರಿ, ಸಹಕರಿಸ್ತೀರಾ.?" ಎಂದು ಮೃದುವಾಗಿ ಪಿಸುಗುಟ್ಟಿದ. ಅವಳು ಆಗಲಿ ಎಂದು ತಲೆಯಾಡಿಸಿ, ಮತ್ತೆ "ಬೆಳ್ಳಿ ?" ಎಂದು ಕೇಳಿದಳು.

"ನಿಮ್ಮ ಬೆಳ್ಳಿ ಅಲ್ಲೆಲ್ಲೋ ಮೇಲಿದೆ. ಅದಕ್ಕೆ ಏನೂ ಆಗೋಲ್ಲ. ಅನಂತರ ನಮಗೆ ಸಿಗುತ್ತೆ" ಎಂದು ಭೂಮಿಗೌಡ ಸಮಾಧಾನ ಹೇಳಿದ್ದ.

ಸೂರ್ಯನ ಬೆಳಕಲ್ಲಿ ಅರ್ಧಮೈಲಿ ಸಾಗಲು ಐದಾರು ನಿಮಿಷಗಳು ಸಾಕು. ಈ ಸುರಂಗದಲ್ಲೂ ಸರಿಯಾದ ಬೆಳಕಿನ ಸಹಾಯದಿಂದ ಹತ್ತು-ಹದಿನೈದು ನಿಮಿಷದಲ್ಲಿ ಸಾಗಬಹುದು. ಅದೂ ಈಗ, ಈ ಚಂದ್ರಿಕಾಳ ಜೊತೆ ಅರ್ಧಗಂಟೆ ಆಗಬಹುದು. ಹೆಜ್ಜೆಯನ್ನು ಅವಳು ಕಿತ್ತು ಕಿತ್ತು ಇಡುತ್ತಿದ್ದಳು. ಒಂದು ಕಡೆ ಅವಳು ಅವನ ರಟ್ಟೆಯನ್ನು ಹಿಡಿದು ನಿಲ್ಲಿಸಿ ಅವನ ಕಿವಿಯಲ್ಲಿ "ಭೂಮಿ" ಎಂದಳು. ಅವನು 'ಹಾ ಹಾ' ಎಂದ. "ನನ್ನ ಚಪ್ಪಲಿ" ಎಂದಳು. "ಯಾಕೆ ಏನಾಯಿತು ?" ಎಂದ. "ಎರಡು ಹೆಜ್ಜೆಯ ಹಿಂದೆ ಅದು ಸಡಿಲವಾಯಿತು. ಕಿತ್ತುಹೋಗಿರಬೇಕು. ಈಗ ಹೆಜ್ಜೆ ಎತ್ತಿಟ್ಟಾಗ ಬರೀಗಾಲೇ ಬಂದಿದೆ. ಸ್ವಲ್ಪ ಇರಿ. ಹುಡುಕಿ ಮತ್ತೆ ಸಿಕ್ಕಿಸಿಕೊಳ್ಳುತ್ತೇನೆ" ಎಂದು ಸ್ವಲ್ಪ ಬಗ್ಗಿ, ಎರಡು ಹೆಜ್ಜೆ ಹಿಂದಕ್ಕೆ ತನ್ನ ಕೈಗಳನ್ನು ನೀಡಿ ನೀರಿನಲ್ಲಿ ಚಪ್ಪಲಿ ಹುಡುಕಲು ಮುಂದಾದಳು.

ಅವನು ಅವಳನ್ನು ತಡೆದು, ಮೇಲಕ್ಕೆತ್ತಿ, "ಎಂಥಾ ಕೆಲಸ ಮಾಡುತ್ತಿದ್ದೀರಿ ? ನೀವೇ ಹೇಳುತ್ತಿದ್ದಿರಿ, ಬಹುಶಃ ಆ ಚಪ್ಪಲಿ ಕಿತ್ತು ಹೋಗಿರಬೇಕು ಅಂತ. ಅದನ್ನು ಏಕೆ ಹುಡುಕಬೇಕು ? ಹುಡುಕಿ ಮತ್ತೆ ಹಾಕಿಕೊಂಡರೂ ಮತ್ತೆರಡು ಹೆಜ್ಜೆ ಇಡುವಷ್ಟರಲ್ಲಿ ಜಾರಿಹೋಗುತ್ತೆ. ನೋಡಿ, ಈ ಕಾಲಿನ ಚಪ್ಪಲಿಯನ್ನು ಇಲ್ಲೇ ಬಿಟ್ಟುಬಿಡಿ" ಎಂದ.

ಅವಳು ಮರು ಮಾತನಾಡಲಿಲ್ಲ. ಭೂಮಿಗೌಡನನ್ನು ಬಲಗೈಯಿಂದ ಬಲವಾಗಿ ಹಿಡಿದು, ಸ್ವಲ್ಪ ಬಗ್ಗಿ, ಎಡಗಾಲನ್ನು ಮೇಲಕ್ಕೆತ್ತಿ ಚಪ್ಪಲಿಯ ಪಟ್ಟಿಯನ್ನು ಬಿಚ್ಚಿ, ಅದನ್ನು ಕಾಲಿನಿಂದ ತೆಗೆದುಬಿಟ್ಟಳು. ಈಗ ಅವಳ ಎರಡೂ ಕಾಲಲ್ಲೂ ಚಪ್ಪಲಿಗಳಿರಲಿಲ್ಲ. ಆದರೆ ಬರಿಗಾಲಲ್ಲಿ ನಡೆದು ಅಭ್ಯಾಸವಿಲ್ಲದ ಅವಳಿಗೆ ನಡೆಯುವುದೇ ಕಷ್ಟವಾಯಿತು. ಅವಳ ಪಾದಗಳು ನೀರಿನಲ್ಲಿ ನೆನೆದು ಮತ್ತಷ್ಟು ಮೃದುವಾದವು. ಹೆಜ್ಜೆ ಇಟ್ಟಾಗ ಅದರ ಕೆಳಗೆ ಸಣ್ಣ ಸಣ್ಣ ನುರುಜು ಕಲ್ಲುಗಳು ಒತ್ತುತ್ತಿದ್ದವು; ನೀರಿನ ಜೊತೆಯಲ್ಲಿ ಕೊಚ್ಚಿ ಬರುತ್ತಿದ್ದ ಸಣ್ಣ ಸಣ್ಣ ಕಡ್ಡಿಗಳು ಅವಳ ಪಾದಗಳನ್ನು ಗೀರುತ್ತಿದ್ದವು. ಅವಳ ನಡೆ ಮತ್ತಷ್ಟು ಮಂದಗತಿಯನ್ನು ಪಡೆಯಿತು.

ಭೂಮಿಗೌಡ ಅವಳ ಪರಿಸ್ಥಿತಿಯನ್ನು ಅರ್ಥಮಾಡಿಕೊಂಡ. ಸುರಂಗವಲ್ಲದೆ ಬೇರೆಡೆಯಾಗಿದ್ದರೆ, ಅವಳನ್ನು ಎತ್ತಿಕೊಂಡೇ ನಡೆಯುತ್ತಿದ್ದ. ಆದರೆ ಕತ್ತಲೆಯ ಸುರಂಗದಲ್ಲಿ ಇಕ್ಕಟ್ಟಾದ, ಕೆಸರು ತುಂಬಿದ ನೀರಿನ ಹಾದಿಯಲ್ಲಿ, ಅದೂ ಬಗ್ಗಿ ನಡೆಯುತ್ತಿರುವಾಗ ಅವಳನ್ನು ಹೊರುವುದು ಹೇಗೆ ? ಎಂದು ಚಿಂತಿಸಿದ. ಅವನು ಅವಳ ಸೊಂಟವನ್ನು ಬಲವಾಗಿ ಹಿಡಿದು, ತನ್ನತ್ತ ಆನಿಸಿಕೊಂಡು, ಅವಳ ತೂಕವನ್ನು ತನ್ನ ದೇಹದ ಮೇಲೆ ಸ್ವಲ್ಪ ತೆಗೆದುಕೊಂಡು ನಿಧಾನವಾಗಿ ನಡೆಯತೊಡಗಿದ.

ಇದ್ದಕ್ಕಿದ್ದಂತೆ ಅವಳು ಕಿಟಾರೆಂದು ಕಿರುಚಿದಳು. ಸುರಂಗದಲ್ಲಿ ಅವಳ ಧ್ವನಿ ಮತ್ತೆ ಮತ್ತೆ ಅನುರಣಿಸಿತು. ಅವಳು ಗಾಬರಿಯಿಂದ ತನ್ನ ಚೂಡಿದಾರ್‌ನ ಪೈಜಾಮುವನ್ನು ಒದರಿಕೊಳ್ಳತೊಡಗಿದಳು. ಅದನ್ನು ಒದರಿಕೊಳ್ಳುವ ಆತುರದಲ್ಲಿ ಆಯತಪ್ಪಿ ಕೆಳಗೆ ಬಿದ್ದಳು. ಕೂಡಲೇ ಭೂಮಿಗೌಡ ಅವಳನ್ನು ಹಿಡಿದು ನಿಲ್ಲಿಸಿ, "ಏನು, ಏನಾಯಿತು ?" ಎಂದು ಗಾಬರಿಯಿಂದ ಕೇಳಿದ. ಅವಳು ಕಾಲನ್ನು ಒದರುತ್ತಾ "ಏನೋ ತನ್ನ ತೊಡೆಯತ್ತ ನುಗ್ಗಿದೆ" ಎಂದಳು.

"ಯಾವ ಕಾಲು ?" ಎಂದು ಕೇಳಿದ

"ಎಡಕಾಲು" ಎಂದಳು.

ಭೂಮಿಗೌಡನಿಗೆ ಇದರ ನಿರೀಕ್ಷೆಯಿತ್ತು, ಸುರಂಗ ಹೇಳಿ ಕೇಳಿ ಪಾತಾಳಲೋಕ. ಅಧೋಲೋಕದ ಜೀವಿಗಳು ವಾಸಿಸುವ ಸ್ಥಳ. ನೀರಾದ್ದರಿಂದ ಇಲಿ, ಹೆಗ್ಗಣಗಳಿಗೆ ಕೊರತೆಯಿಲ್ಲ. ಕೆಲವೊಮ್ಮೆ ನದಿಯಿಂದ ಮೀನುಗಳು ಮೇಲ್ಮುಖವಾಗಿ ಈಜಿ ಬರಬಹುದು, ಕೆಲವೊಮ್ಮೆ ಇಲಿಗಳ ಆಸೆಗೆ ಸುರಂಗದಲ್ಲಿ ಹಾವುಗಳು ಬರಬಹುದು. ನೀರು ಹಾವುಗಳಿಗೆ ಕೊರತೆಯಿಲ್ಲ. ಅವಳ ಭುಜವನ್ನು ಹಿಡಿದೆತ್ತಿ ಮತ್ತೆ ನಿಲ್ಲಿಸಿ "ನೀವು ಸುಮ್ಮನೆ ನಿಲ್ಲಬೇಕು. ಅಲ್ಲಾಡಬೇಡಿ" ಎಂದ. ಅವಳು ಕೊರೆಯಲ್ಲಿ ನಡುಗುತ್ತಾ ನಿಂತಳು.

ಭೂಮಿಗೌಡ ಅವಳ ಎಡಸೊಂಟದಿಂದ ಕೆಳಕ್ಕೆ ತನ್ನ ಎರಡು ಕೈಗಳಿಂದ ಕೆಳಮುಖವಾಗಿ ಸವರುತ್ತಾ ಬಂದ. ಅವನ ಅಂಗೈಗಳು ಅವಳು ಧರಿಸಿದ ಒಳ ಉಡುಪನ್ನು ಸ್ಪರ್ಶಿಸಿದವು. ಇನ್ನೂ ಕೆಳಕ್ಕೆ ಒಂದಿಂಚು ಕೆಳಗೆ ಸವರಿದಾಗ ಅವನ ಕೈಗೆ ಏನೋ ಮೃದುವಾಗಿ ತಗುಲಿತು, ಸುಮಾರು ಒಂದೂವರೆ ಇಂಚು ದಪ್ಪ-ಎರಡು ಇಂಚು ಉದ್ದ. ಭೂಮಿಗೌಡ ಎಡಗೈಯನ್ನು ಅದರ ಮೇಲೆ ಒತ್ತಿ ಹಿಡಿದು, ನೆಲದಲ್ಲಿ ತಾನು ಕುಕ್ಕರಗಾಲಲ್ಲಿ ಕೂತು, ತನ್ನ ಬಲಗೈಯನ್ನು ಅವಳ ಚೂಡಿದಾರ್‌ನ ಒಳಕ್ಕೆ ನಿಧಾನವಾಗಿ ತೂರಿಸಲು ಯತ್ನಿಸಿದ. ನೀರಿನಿಂದ ಒದ್ದೆಯಾಗಿದ್ದ ಬಟ್ಟೆ ಅವಳ ಕಾಲು, ತೊಡೆಗಳಿಗೆ ಅಂಟಿಕೊಂಡಿತ್ತು. ಚೂಡಿದಾರ್ ಮೊಣಕಾಲಿನ ಬಳಿ ಬಿಗಿಯಾಗಿದ್ದರಿಂದ ಕೈ ತೂರುಲು ಕಷ್ಟವಾಗುತ್ತಿತ್ತು. ಅವನು ಹಿಂದೆ ಮುಂದೆ ನೋಡದೆ ತನ್ನೆರಡು ಬೆರಳನ್ನು ಮೊದಲು ತೂರಿಸಿ, ಪರ್‍ರನೆ ಮೂರ್‍ನಾಕು ಇಂಚು ಹರಿದ. ನಂತರ ಕೈಯನ್ನು ನಿಧಾನವಾಗಿ ಅವಳ ಒಳ ತೊಡೆಯ ಬಳಿ ತನ್ನ ಎಡಗೈಯಿಂದ ಅದುಮಿ ಹಿಡಿದಿದ್ದ ಜಾಗಕ್ಕೆ ತಂದನು. ಮೊದಲು ಅವನ ಕೈಗೆ ಸಣ್ಣದಾದಂಥ ವಸ್ತುವೊಂದು ಸ್ಪರ್ಶಿಸಿತು. ನಿಧಾನವಾಗಿ ಎಡಗೈನ ಬಿಗಿಯನ್ನು ಸಡಿಲಿಸಿ, ಬಲಗೈಯಿಂದ ಭದ್ರವಾಗಿ ಹಿಡಿದನು. ಮತ್ತೆ ನಿಧಾನವಾಗಿ ಹಿಡಿತವನ್ನು ಸಡಿಲಿಸದೆ ಅದನ್ನು ಹೊರಕ್ಕೆ ತೆಗೆದನು.

ಅದೊಂದು ನೀರು ಸುಂಡವಾಗಿತ್ತು. ನೀರಿನಲ್ಲಿ ಹರಿದಾಡುತ್ತಾ ಬರುತ್ತಿರುವಾಗ ಅಡ್ಡ ಸಿಕ್ಕಿದ ಅವಳ ಕಾಲನ್ನು ಮರದ ಕಾಂಡವೆಂದು ತಿಳಿದು ಮೇಲಕ್ಕೆ ಹತ್ತಿಬಿಟ್ಟಿತ್ತು. ಆ ಸುಂಡವನ್ನು ತನ್ನ ಹಿಡಿಯಲ್ಲಿ ಭದ್ರವಾಗಿ ಹಿಡಿದು ಎಡಗೈಯಲ್ಲಿ ಅವಳನ್ನು ಬಳಸಿ, "ಹೆದರಬೇಡಿ, ಇದು ಒಂದು ಸಣ್ಣ ಇಲಿ, ಅಷ್ಟೆ"ಎಂದು ಸಾಂತ್ವನ ಹೇಳಿದನು.

ಚಂದ್ರಿಕಾ ನಡುಗತೊಡಗಿದಳು. ಹೆದರಿಕೆಯ ಕಾರಣದಿಂದಲೂ ಹೌದು, ಚಳಿಯ ಕಾರಣದಿಂದಲೂ ಹೌದು. ಈ ಸುಂಡದ ಪ್ರಕರಣ ಅವಳ ಮೈಯಲ್ಲಿ ಒಂದು ಬಗೆಯ ರೋಮಾಂಚನವನ್ನುಂಟುಮಾಡಿತ್ತು. ಆ ಸುಂಡ ಅವಳ ಕಾಲಿನ ಕೆಳಭಾಗದಿಂದ ಮುಲು ಮುಲು ಎಂದು ಮೇಲೇರಿದಾಗ ಆಗ ಅವಳ ಪ್ರಾಣವೇ ಹಾರಿತ್ತು. ಆದರೆ ಭೂಮಿಗೌಡ ಅವಳ ನಡುವಿನ ಕೆಳಗೆ ಕೈಯಾಡಿಸುತ್ತ ಬಂದಾಗ ಮಾತ್ರ ಕ್ಷಣದಲ್ಲಿ ಪುಳಕಿತಳಾದಳು. ಅವಳ ಒಳ ಉಡುಪು-ತೊಡೆಯನ್ನು ಸ್ಪರ್ಶಿಸಿದಾಗಲಂತೂ ಅವಳು ನಾಚಿ ಕೆಂಪಾದಳು. ಆದರೆ ಕತ್ತಲಲ್ಲಿ ಅವಳ

ಮುಖವಾಗಲೀ ಅವಳ ಪುಳಕವಾಗಲೀ ಭೂಮಿಗೌಡನಿಗೆ ಗೋಚರವಾಗುತ್ತಿರಲಿಲ್ಲ. ಆ ಒಂದು ಕ್ಷಣದಲ್ಲಿ ಅವಳು ತೊಡೆಯ ಮೇಲೆ ಭೂಮಿಗೌಡನ ಅಂಗೈ ಕೆಳಗೆ ಇದ್ದ ಪ್ರಾಣಿಯನ್ನು ಮರೆತಳು! ಅವನು ಇರುವಾಗ ಹೆದರಿಕೆ ಯಾಕೆ ? ಅವನ ದೇಹದ ಅವಲಂಭನವೇ ಅವಳಿಗೆ ಭಯ-ದುಗುಡವನ್ನು ದೂರ ಮಾಡುತ್ತಿತ್ತು.

ಅವರು ಪರಸ್ಪರ ಅಂಟಿಕೊಂಡು ಹೆಜ್ಜೆಹಾಕತೊಡಗಿದರು. ಮಂಡಿಯವರೆಗೆ ಬರುತ್ತಿದ್ದ ನೀರು ಕ್ರಮೇಣ ಏರುತ್ತಿರುವುದು ಭೂಮಿಗೌಡನ ಗಮನಕ್ಕೆ ಬಂದಿತು. ಅಂದರೆ ಸುರಂಗದ ಕೊನೆಗೆ ನಾವು ಹತ್ತಿರವಾಗುತ್ತಿದ್ದೇವೆ. ಹೆಜ್ಜೆ ಇಡುವುದು ಮತ್ತಷ್ಟು ನಿಧಾನವಾಗುತ್ತದೆ. ಅವಳನ್ನು ಕುರಿತು "ಚಂದ್ರಿಕಾ, ನಾವು ಮುಂದೆ ನಡೆದಂತೆ ಮತ್ತಷ್ಟು ನೀರು ಮೇಲೆರುತ್ತದೆ. ನೀವು ಹೆದಬೇಡಿ, ನೀರು ಮೇಲಿರಿದಂತೆಲ್ಲ ನಾವು ಸುರಂಗದ ಕೊನೆಗೆ ಹತ್ತಿರವಾಗುತ್ತೇವೆ. ನೀರು ನಮ್ಮ ಎದೆಯ ಮಟ್ಟವನ್ನು ಮುಟ್ಟಿದಾಗ ಸುರಂಗದ ಈ ಚೌಕಾಕಾರ ಕೊನೆಗೊಳ್ಳುತ್ತದೆ. ಅಲ್ಲಿಂದ ನಾವು ಬೇರೆ ಮಾರ್ಗದಿಂದ ಹೊರ ಹೋಗಬೇಕು. ನೀವು ಯಾವುದಕ್ಕೂ ಗಾಬರಿಯಾಗುವುದು ಬೇಡ" ಎಂದು ಹೇಳಿದನು.

ನೀರು ಏರಿದಂತೆಲ್ಲಾ ಕೊರೆ ಜಾಸ್ತಿಯಾಯಿತು. ನೀರಿನಲ್ಲಿ ಕೆಸರಿನ ಅಂಶವೆಲ್ಲಾ ಕಡಿಮೆಯಾಗಿತ್ತು. ತಿಳಿಯಾದ ನೀರು ಅವಳ ಚೂಡಿದಾರ್‌ಗೆ ಮೆತ್ತಿದ್ದ ಕೆಸರನ್ನೆಲ್ಲ ತೊಳೆದು ಮುನ್ನುಗ್ಗುತ್ತಿತ್ತು. ಅವಳು ಭೂಮಿಗೌಡನ ಮೈಸ್ಪರ್ಶದಲ್ಲಿದ್ದರೂ ಕೊರೆಯ ಕಾರಣ ನಡುಗುತ್ತಿದ್ದಳು. ಹೆಜ್ಜೆಯಿಡಲು ಕಷ್ಟಪಡುತ್ತಿದ್ದಳು.

ಅವಳ ಸ್ಥಿತಿಯನ್ನು ಅರ್ಥಮಾಡಿಕೊಂಡ ಭೂಮಿಗೌಡ 'ಈ ಸ್ಥಿತಿಯಲ್ಲಿ ಇವಳು ಕೆಳಗೆ ಬಿದ್ದರೆ ಕಷ್ಟ. ನೀರಿನಲ್ಲಿ ಉಸಿರುಕಟ್ಟುವ ಸಾಧ್ಯತೆಯಿದೆ. ಜೊತೆಗೆ ನೀರಿನ ಮಟ್ಟ ಏರಿದಂತೆಲ್ಲಾ ಗಾಳಿ ಕಡಿಮೆಯಾಗುತ್ತಾ ಹೋಗುತ್ತದೆ'ಎಂದು ತನ್ನಲ್ಲಿ ಯೋಚಿಸಿದ. ಅವಳನ್ನು ಬೆನ್ನ ಮೇಲೆ ಕೂಸುಮರಿಯ ರೀತಿ ಒಂದಷ್ಟು ಮಾರು ಹೊರುವುದು ಸೂಕ್ತವೆಂಬ ತೀರ್ಮಾನಕ್ಕೆ ಬಂದ. ಆ ತೀರ್ಮಾನದ ಹಿಂದೆ ಮತ್ತೊಂದು ಕಾರಣವೂ ಇತ್ತು: ಅವಳು ಕೊರೆಯನ್ನು ತಡೆಯುವ ಶಕ್ತಿಯನ್ನು ಕ್ರಮೇಣ ಕಳೆದುಕೊಳ್ಳತೊಡಗಿದ್ದಳು. ಅವಳನ್ನು ತನ್ನ ಬೆನ್ನ ಮೇಲೆ ಕೂಸುಮರಿಯಂತೆ ಹೊತ್ತರೆ, ಅವಳ ದೇಹದ ಉಷ್ಣಾಂಶ ಹೆಚ್ಚುತ್ತದೆ. ಅದರಿಂದ ಅವಳ ಲವಲವಿಕೆ ಹೆಚ್ಚಿ ಗೆಲುವಾಗುತ್ತಾಳೆ- ಎಂದು ಆಲೋಚಿಸಿ ಅವಳನ್ನು ಕುರಿತು "ಚಂದ್ರಿಕಾ, ನಿಮಗೆ ಆಯಾಸವಾಗುತ್ತಿದೆಯೇ ? ಇನ್ನು ಕೆಲವೇ ಕೆಲವು ಅಡಿಗಳು ಮಾತ್ರ. ನಾವು ಸುರಂಗದ ಕೊನೆಗೆಬರುತ್ತಿದ್ದೇವೆ. ಇನ್ನೊಂದೈದು ಆರು ನಿಮಿಷಗಳಲ್ಲಿ ನಾವು ಹೊರಗಿನ ವಾತಾವರಣಕ್ಕೆ ಪ್ರವೇಶಿಸುತ್ತೇವೆ. ಈಗ ನೀವು ನನ್ನ ಬೆನ್ನಮೇಲೆ ಕೂಸುಮರಿಯಾಗಬೇಕು, ತಿಳಿಯಿತೆ ?" ಎಂದು ಹೇಳಿ, ಅವಳ ಪ್ರತಿಕ್ರಿಯೆಯನ್ನು ನಿರೀಕ್ಷಿಸದೆ, ಅವಳರೆಡು ಕೈಗಳನ್ನು ಅಗಲಿಸಿ, ಅವಳ ಮುಂದೆ ಬಂದು, ಅವಳ ಎದೆಗೆ ತನ್ನ ಬೆನ್ನು ಕೊಟ್ಟು, ಅವಳ ಎರಡು ಕೈಗಳನ್ನು ತನ್ನ ಕುತ್ತಿಗೆಯ ಸುತ್ತ ಬಿಗಿಯಾಗಿಸಿಕೊಂಡನು. ಅನಂತರ ತುಸು ಬಗ್ಗಿ ಅವಳನ್ನು ತನ್ನ ಬೆನ್ನ ಮೇಲೆ

ಹೊತ್ತುಗೊಂಡು ನಿಧಾನವಾಗಿ ಹೆಜ್ಜೆಯಿಡತೊಡಗಿದನು.

ಚಂದ್ರಿಕಾಳ ಮೈ ಕ್ರಮೇಣ ತುಸು ತುಸು ಬಿಸಿಯಾಗತೊಡಗಿತು. ಅಂಥ ಸ್ಥಿತಿಯಲ್ಲೂ ಅವಳಿಗೆ ನಾಚಿಕೆಯಾಯಿತು. ಇದೇನು ? ಎಳೆಯ ಮಗುವಿನಂತೆ ಇವನ ಬೆನ್ನ ಮೇಲೆ ತಾನು ಕೂಸುಮರಿಯಾಗಿದ್ದೇನೆ ! ಹೌದು, ಈತನ ಬಳಿ ತಾನು ಮಗುವೇ ! ತಾಯಿಯನ್ನು ಬಿಟ್ಟಿರದ ಮಗುವಿನಂತೆ-ತಾನು ಈತನನ್ನು ಬಿಟ್ಟಿರದ ಹೆಣ್ಣಾಗುತ್ತಿದ್ದೇನೆ. ಇವನಲ್ಲಿ ಅಂಥಾ ರಕ್ಷಣೆಯ ಭರವಸೆಯಿದೆ. ಇವನಲ್ಲಿ ಅಂಥಾ ನಂಬಿಕೆಯಿದೆ. ತನ್ನ ಹೆಣ್ಣನ್ನು ಕಾಪಾಡುವ ಗಂಡಿನ ಸಾಹಸವಿದೆ; ಬುದ್ಧಿವಂತಿಕೆಯಿದೆ. ಅವಳು ಅವನ ಬೆನ್ನ ಮೇಲೆ ತನ್ನ ಇಡೀ ಭಾರ ಬಿಟ್ಟಿದ್ದರೂ, ಅವನು ಏನೂ ಅಯಾಸವಾಗದಂತೆ ನಡೆಯುತ್ತಿದ್ದನು. ಅವಳ ಕೈಗಳು ಅವನ ಕುತ್ತಿಗೆಯನ್ನು ಬಳಸಿದ್ದವು. ಅವನ ಒಂದು ಕೈ ಹಿಂದಿನಿಂದ ತನ್ನ ನಿತಂಬಗಳನ್ನು ಬಂಧಿಸಿತ್ತು. ಅವಳ ಬೆಳೆದ ಸ್ತನಗಳು ಅವನು ಹೆಜ್ಜೆ ಇಟ್ಟಾಗಲೆಲ್ಲಾ ಅವನ ಬೆನ್ನ ಮೇಲೆ ನಿಧಾನಗತಿಯಲ್ಲಿ ಅಲುಗಾಡಿ, ಅವಳನ್ನು ಮುಲುಗುಡಿಸುತ್ತಿದ್ದವು.

ಸುಮಾರು ಐದಾರು ನಿಮಿಷ ಇದೇ ಭಂಗಿಯಲ್ಲಿ ಅವರು ಸಾಗಿದರು. ನೀರು ಮತ್ತಷ್ಟು ಏರಿತು. ಭೂಮಿಗೌಡ ತನ್ನ ಬಲಗೈನಿಂದ ಸುರಂಗದ ಗೋಡೆಗಳನ್ನು ಮುಟ್ಟಿ ನೋಡಿದ. ಅವನ ಎದುರಿಗೆ ಸುರಂಗದ ಚೌಕಾಕಾರ ಅಂತ್ಯಗೊಂಡಿರುವುದು ಅರಿವಾಯಿತು. ಅವನ ಕಾಲ ಬಳಿ ನೀರು ರಭಸದಿಂದ ವೃತ್ತಾಕಾರದ ತೂತಿಗೆ ಮುನ್ನುಗ್ಗುತ್ತಿರುವ ಸೆಳವು ಅವನನ್ನು ಅಲ್ಲಾಡಿಸುತ್ತಿತ್ತು, ಆಗ ಅವನು ತನ್ನ ಕುತ್ತಿಗೆಯ ಬಳಿ ಬಿಸಿ ಉಸಿರನ್ನೂ ಬಿಡುತ್ತಿದ್ದ ಚಂದ್ರಿಕಾಳಿಗೆ "ಚಂದ್ರಿಕಾ, ಈಗ ನೀವು ಇಳಿದು ಗಟ್ಟಿಯಾಗಿ ನಿಲ್ಲಬೇಕು. ನೀವು ಹೆಜ್ಜೆಗಳನ್ನು ಭದ್ರವಾಗಿ ಊರಬೇಕು. ಇಲ್ಲದಿದ್ದರೆ ನೀರಿನ ಸೆಳೆತ ನಿಮ್ಮನ್ನು ಬೀಳಿಸಿಬಿಡುತ್ತದೆ. ಬೇಕಾದರೆ ನಿಮ್ಮ ಸಪೋರ್ಟಿಗೆ ಸುರಂಗದ ಗೋಡೆಯನ್ನು ಹಿಡಿದುಕೊಳ್ಳಿ. ಒಂದೆರಡು ನಿಮಿಷ ಅಷ್ಟೆ. ನಾನು ಇಲ್ಲಿಂದ ಹೊರ ಹೋಗುವ ಮಾರ್ಗವನ್ನು ತೆರೆಯುತ್ತೇನೆ" ಎಂದು ಅವಳನ್ನು ನಿಧಾನವಾಗಿ ಕೆಳಗಿಳಿಸಿದ.

ಚಂದ್ರಿಕಾ ಕೆಳಗಿಳಿದ ತಕ್ಷಣ ಮುಗ್ಗರಿಸುವಂತಾದಳು. ನೀರಿನ ಸೆಳೆತದ ಶಕ್ತಿ ಹಾಗಿತ್ತು. ಭೂಮಿಗೌಡ ಅವಳನ್ನು ಹಿಡಿದು ಸರಿಯಾಗಿ ನಿಲ್ಲಿಸಿ, ಅವಳ ಕೈಗಳನ್ನು ಸುರಂಗದ ಗೋಡೆಗೆ ಸ್ಪರ್ಶಿಸುವಂತೆ ಮಾಡಿ, "ಈಗ ಈ ಗೋಡೆಯನ್ನು ಹಿಡಿದು ನಿಲ್ಲಿರಿ" ಎಂದನು, ಅವಳಿಗೆ ಗೋಡೆಯ ಆಸರೆಯಲ್ಲಿ ಮತ್ತು ಆ ಕತ್ತಲೆಯಲ್ಲಿ ಏಕಾಂಗಿಯಾದೆ ಎಂದೆನ್ನಿಸಿತು. ಸುರಂಗಕ್ಕಿಳಿದ ಹೆಚ್ಚು ಕಡಿಮೆ ಅರ್ಧಗಂಟೆಯ ಕಾಲ ಅವಳು ಭೂಮಿಗೌಡನನ್ನು ಅಂಟಿಕೊಂಡೇ .ಇದ್ದಳು. ಅವನ ಸ್ಪರ್ಶದಲ್ಲಿ ಬದುಕುಳಿಯುವ ಮಾಂತ್ರಿಕತೆಯ ಮೋಡಿಯಿತ್ತು. ಅದನ್ನು ಅವಳ ಮೈಮನಗಳು ಅನುಭವಿಸಿದ್ದವು.

ಅವಳು ತನಗೆ ತಾನೆ ಸಮಾಧಾನ ಮಾಡಿಕೊಂಡಳು. ಅವನು ಇಲ್ಲೇ, ತನ್ನ

ಜೊತೆಯಲ್ಲೇ ಇದ್ದಾನೆ. ಕತ್ತಲೆಯಲ್ಲಿ ಮುಟ್ಟಿದರೆ ಸಿಗುತ್ತಾನೆ. ಅವನು ತನಗಾಗಿ, ಕೇವಲ ತನಗಾಗಿ ಎಣಗುತ್ತಿದ್ದಾನೆ- ಎಂದು ಆಲೋಚಿಸಿದಾಗ ಮನಸ್ಸು ತುಸು ಹಗುರವಾಯಿತು.

ಭೂಮಿಗೌಡ ತಲೆಯನ್ನು ಬಗ್ಗಿಸಿಯೇ ತನ್ನೆರಡು ಕೈಗಳನ್ನು ಮೇಲಕೆತ್ತಿ ತನ್ನ ಬೆರಳುಗಳಿಂದ ಸುರಂಗದ ಮೇಲು ಚಪ್ಪಡಿಯ ಶ್ರೀನಿವಾಸ ಸ್ವಾಮಿಯ ಉಬ್ಬಪಾದ ಕೆತ್ತನೆಯನ್ನು ಹುಡುಕುತ್ತಾ ಬಂದ. ಮೊದಲ ಚಪ್ಪಡಿ ನಯವಾಗಿತ್ತು; ಎರಡನೆಯ ಚಪ್ಪಡಿ....ಮತ್ತೆ ನಯವಾಗಿದೆ. ಮೂರನೆಯದು....ಇಲ್ಲ. ನಾಲ್ಕನೆಯದು....ತನ್ನಲ್ಲೇ ಅಂದುಕೊಂಡ.....ಹತಾಶನಾಗಬೇಡ. ತಾಳ್ಮೆ....ಇಲ್ಲೇ ಇದೆ. ಒಂದು ಹೆಜ್ಜೆ ಮುಂದೆ ಅಥವಾ ಒಂದು ಹೆಜ್ಜೆ ಹಿಂದೆ, ಅಷ್ಟೆ. ಅವನು ಒಂದು ಹೆಜ್ಜೆ ಮುಂದೆ ಇಟ್ಟು ತನ್ನ ಬೆರಳುಗಳಿಂದ ಚಪ್ಪಡಿಯನ್ನು ಸ್ಪರ್ಶಿಸುತ್ತಾ ಬಂದ. ಅಹಾ...... ಸಿಕ್ಕಿತು ! ಮೊದಲು ಶ್ರೀನಿವಾಸಸ್ವಾಮಿಯ ಪಾದದ ಹೆಬ್ಬೆರಳು ಅವನ ಸ್ಪರ್ಶಕ್ಕೆ ಸಿಕ್ಕಿತು. ಅವನು ನಿಧಾನವಾಗಿ ಶ್ರೀನಿವಾಸಸ್ವಾಮಿಯ ಇಡೀ ಪಾದವನ್ನು ಸ್ಪರ್ಶಿಸಿದ. ಅವನಿಗೆ ಸಂತೋಷವಾಯಿತು. ಮತ್ತಷ್ಟು ಗೆಲುವು, ಕಸುವು ಅವನಲ್ಲಿ ಮೂಡಿತು. ಆ ಎರಡು ಪಾದಗಳನ್ನು ತನ್ನೆರಡು ಅಂಗೈಗಳಲ್ಲಿ ಸಂಪೂರ್ಣ ಒತ್ತಿ ಹಿಡಿದು, ತನ್ನ ಕಾಲುಗಳನ್ನು ತಳದಲ್ಲಿ ಮತ್ತಷ್ಟು ದೃಢಗೊಳಿಸಿ, ತನ್ನೆಲ್ಲಾ ಬಲವನ್ನು ಕ್ರೋಢೀಕರಿಸಿ ಚಪ್ಪಡಿಯನ್ನು ಮೇಲಕ್ಕೆತ್ತಿದನು.

ಚಪ್ಪಡಿ ಮೊದಲು ಕೊರಕ್ ಎಂದಿತು. ಅನಂತರ ಅವನು ತಳ್ಳಿದಂತೆಲ್ಲಾ ಮುಂದುಗಡೆಯಿಂದ ನಿಧಾನಕ್ಕೆ ತೆರೆದುಕೊಂಡಿತು. ಅದು ತೆರೆದುಕೊಂಡ ಸಂಧಿನಿಂದ ತನ್ನ ತಲೆಯನ್ನು ತೂರಿಸಿ, ಆ ಚಪ್ಪಡಿಯನ್ನು ಒಂದು ಮಗ್ಗುಲಿಗೆ ತಳ್ಳಿದನು. ಹೊರಗಿನಿಂದ ಗಾಳಿ ಧಸಕ್ಕೆಂದು ಒಳಗೆ ನುಗ್ಗಿತು. ಹೊಸ ಗಾಳಿ ಅವನಲ್ಲಿ ಹೊಸ ಚೈತನ್ಯ ಮೂಡಿಸಿತು. ಮಂದವಾದ ಬೆಳಕು ಸುರಂಗವನ್ನು ಪ್ರವೇಶಿಸಿತು.

ಅವನು ನಿಂತಲ್ಲಿಯೇ ನಿಂತು, ಚಂದ್ರಿಕಾಳನ್ನು ಮೆಲ್ಲಗೆ ಕಿಂಡಿಯ ಮೂಲಕ ಹೊರ ಬರಲು ಅನುವಾಗುವಂತೆ ಎತ್ತಿ ಹೊರಕ್ಕೆ ಬಿಟ್ಟನು. ಅವಳ ಹಿಂದೆಯೇ ಅವನು ಸುರಂಗದಿಂದ ಹೊರಕ್ಕೆ ಚಿಮ್ಮಿದನು. ಚಂದ್ರಿಕಾಳು ಕಾವೇರಿ ವಿಗ್ರಹದ ಹಿಂಬದಿಯನ್ನು ಒರಗಿ ಕೂತಿದ್ದಳು. ಅವಳನ್ನು ನೋಡಿ, ತೃಪ್ತಿಯಿಂದ ನಕ್ಕು, ಸುರಂಗದ ಬಾಯಿಯನ್ನು ಕಲ್ಲುಚಪ್ಪಡಿಯಿಂದ ಮತ್ತೆ ಮುಚ್ಚಿದನು.

## ಅಧ್ಯಾಯ : ಇಪ್ಪತ್ತೊಮ್ಬತ್ತು

ಅವಳನ್ನು ಮೃದುವಾಗಿ ಹಿಡಿದು ಮೇಲಕ್ಕೆಬ್ಬಿಸಿ, ಗರ್ಭಗುಡಿಯಿಂದ ಹೊರಗೆ ಕರೆದುಕೊಂಡುಬಂದ. ಶ್ರೀನಿವಾಸ ದೇವರ ಮುಖ್ಯ ಗರ್ಭಗುಡಿ ಪ್ರಾಕಾರದ ಮಧ್ಯೆ ಇತ್ತು. ಅದರ ಹಿಂಭಾಗದಲ್ಲಿ ಕಾವೇರಿ ತಾಯಿಯ ಪುಟ್ಟಗರ್ಭಗುಡಿಯನ್ನು ನಿರ್ಮಿಸಲಾಗಿತ್ತು. ಅವನ ದೃಷ್ಟಿಗೆ ಶ್ರೀನಿವಾಸ ದೇವರ ಗರ್ಭಗುಡಿಯ ಹಿಂಬದಿಯ ಜಗುಲಿ ಕಣ್ಣಿಗೆ ಬಿತ್ತು. ತಿಂಗಳ ಬೆಳಕು ಎಲ್ಲೆಲ್ಲೂ ನಿರ್ಮಲವಾಗಿ ಚೆಲ್ಲುತ್ತಿತ್ತು. ಚಂದ್ರ ಆಗಲೇ ಪಶ್ಚಿಮಕ್ಕೆ ಎರಡು ಮಾರು ವಾಲಿದ್ದ.

ಚಂದ್ರಿಕಾಳನ್ನು ಮೆಲ್ಲಗೆ ನಡೆಸಿಕೊಂಡು ಶ್ರೀನಿವಾಸದೇವರ ಗರ್ಭಗುಡಿಯ ಹಿಂಬದಿಯ ಜಗುಲಿಯ ಮೇಲೆ ಕೂರಿಸಿದ. ಸುರಂಗದ ವಾತಾವರಣದಲ್ಲಿದ್ದ ಕೊರೆ ಇಲ್ಲಿರಲಿಲ್ಲ. ಕಡು ಬೇಸಿಗೆ ಕಾಲವಾದ್ದರಿಂದ ಗಾಳಿಯಲ್ಲಿ ತೇವಾಂಶವಿರಲಿಲ್ಲ. ಆದರೂ ರಾತ್ರಿಯ ತಂಪು ಮತ್ತು ಪ್ರಶಾಂತತೆ ಇತ್ತು. ಕಾವೇರಿ ಪಕ್ಕದಲ್ಲೇ ಹರಿಯುತ್ತಿದ್ದುದರಿಂದ ಇತರೆಡೆಗಿಂತ ತುಸು ಅಧಿಕವಾಗಿಯೇ ತಂಪು ಆವರಿಸಿತ್ತು. ಅತ್ಯಂತ ಮಂದಗತಿಯಲ್ಲಿ ಗಾಳಿ ಬೀಸುತ್ತಿತ್ತು.

ಚಂದ್ರಿಕಾಳನ್ನು ನೋಡಿದ. ತಿಂಗಳ ಬೆಳಕಲ್ಲಿ ಅವಳು ನಿತ್ರಾಣಗೊಂಡವಳಂತೆ ಕಂಡಳು. ಅವಳ ಮುಖ ಬಾಡಿತ್ತು. ಆದರೂ ಅದರಲ್ಲಿ ಒಂದು ಹೊಸ ಬಗೆಯ ಚೈತನ್ಯ-ಆತ್ಮವಿಶ್ವಾಸವನ್ನು ಅವನು ಗುರುತಿಸಿದ. ಅವಳು ತನ್ನ ಕೂದಲನ್ನು ಹಿಂದಕ್ಕೆಳೆದು ಹಾಕಿದ್ದ ಕ್ಲಿಪ್ಪನ್ನು ಬಿಚ್ಚಿದಳು. ಅವಳ ಕೂದಲು ಸಂಪೂರ್ಣ ಒದ್ದೆಯಾಗಿ ಉಂಡುಂಡೆಯಾಗಿ ಅವಳ ಭುಜದ ಮೇಲೆ, ಬೆನ್ನಿನ ಮೇಲೆ ಕೂತಿತ್ತು ಈಗಲೂ ಅವಳ ಕೂದಲಿಂದ ನಿಧಾನವಾಗಿ ನೀರು ತೊಟ್ಟಿಕ್ಕುತ್ತಿತ್ತು.

ಅವಳ ಎದುರು ನಿಂತಿದ್ದ ಭೂಮಿಗೌಡ ಅವಳ ಕುತ್ತಿಗೆಯನ್ನು ಬಳಸಿ ಹಿಂದಕ್ಕೆ ಅಂಟಿಕೊಂಡಿದ್ದ ಅವಳ ವೇಲನ್ನು ನಿಧಾನವಾಗಿ ಎಳೆದನು. ಅವಳು ಪ್ರಶ್ನಾರ್ಥಕವಾಗಿ ಅವನನ್ನು ದಿಟ್ಟಿಸಿದಳು. ಅವನು ಉತ್ತರ ಕೊಡದೆ, ವೇಲನ್ನು ತೆಗೆದುಕೊಂಡು ಎರಡು ಮಡಿಕೆ ಮಾಡಿ, ಚೆನ್ನಾಗಿ ಹಿಂಡಿದ. ಅದರಿಂದ ನೀರು ತೊಟ ತೊಟನೆ ತೊಟ್ಟಿಕ್ಕಿತ್ತು. ಅನಂತರ ಅದರ ತುದಿ ಹಿಡಿದು ಗಾಳಿಯಲ್ಲಿ ಒಂದೆರಡು ಬಾರಿ ಜಾಡಿಸಿದ. ಅನಂತರ ಅದರಿಂದ ಅವಳ ತಲೆಯನ್ನು ಉಜ್ಜಿ ನೀರನ್ನು ತೆಗೆಯಲಾರಂಭಿಸಿದ.

ಚಂದ್ರಿಕಾಳಿಗೆ ಮಾತನಾಡಲು ಶಬ್ದಗಳೇ ಬಾರದೆ ಹೋದವು. ಇದು ಎಂಥ ನಡೆ ! ತನ್ನನ್ನು ಮಗುವಿನಂತೆ ಭಾವಿಸಿ ಆರೈಕೆ ಮಾಡುತ್ತಿದ್ದಾನೆ ! ಅವನ ಉಪಚಾರವನ್ನು ಅವಳು ಬೇಡವೆನ್ನಲಿಲ್ಲ. ಅವನಿಗೆ ಅವಳನ್ನು ಸಂಪೂರ್ಣವಾಗಿ ನೀಡಿದಳು. ಅವನು ತಲೆಯನ್ನು ಒರೆಸಿಯಾದ ಮೇಲೆ, ಅವಳ ಮುಖ, ಕುತ್ತಿಗೆ, ಕೈಗಳನ್ನು ಒರೆಸಿದ. ವೇಲನ್ನು ಮತ್ತೆ ಮತ್ತೆ

ಹಿಂಡಿ ಜಾಡಿಸಿದ. ಅವಳ ಪಕ್ಕದಲ್ಲಿ ಕುಳಿತು, ಅವಳ ಪಾದಗಳನ್ನು ತನ್ನ ತೊಡೆಯ ಮೇಲಿಟ್ಟುಕೊಂಡು ಪರೀಕ್ಷಿಸಿದ. ತಿಂಗಳ ಬೆಳಕಲ್ಲಿ ಅವು ತುಸು ನೀಲಿ ಮಿಶ್ರಿತ ವರ್ಣಕ್ಕೆ ತಿರುಗಿರುವುದು ಕಂಡುಬಂದಿತು. ಅಲ್ಲಲ್ಲಿ ಅವಳ ಪಾದದ ಮೃದುವಾದ ಹೊರಚರ್ಮ ಕಿತ್ತು ಬಂದಿತು. ವೇಲಿನಿಂದ ಮೃದುವಾಗಿ ಒತ್ತಿ ತೇವಾಂಶವನ್ನು ಆರಿಸಿದನು. ಅನಂತರ ತನ್ನ ಅಂಗೈನಿಂದ ಅವಳ ಪಾದವನ್ನು ಮೃದುವಾಗಿ ಉಜ್ಜಿದನು. ಅವಳಲ್ಲಿ ನವಚೈತನ್ಯ ಮೂಡಲಾರಂಭಿಸಿತು. ಅವನ ಕ್ರಿಯೆಗಳನ್ನು ಅವಳ ಕಣ್ಣು ನೋಡುತ್ತಿತ್ತು; ಅದರ ಆತ್ಮೀಯತೆಯ ಸುಖವನ್ನು ಅವಳ ಮನಸ್ಸು ಅನುಭವಿಸುತ್ತಿತ್ತು. ಹೀಗೆ..... ಹೀಗೆಯೇ ಶಾಶ್ವತವಾಗಿ ಇವನೊಡನೆ ಇದ್ದುಬಿಡಬೇಕೆಂದು ಮನಸ್ಸು ಹೇಳತೊಡಗಿತು.

ಅವನು ಅವಳ ಪಾದಗಳನ್ನು ಮೃದುವಾಗಿ ಉಜ್ಜುತ್ತಾ " ನಾನು ಒಮ್ಮೆ ದೇವಸ್ಥಾನದ ಸುತ್ತ ನೋಡಿ ಬರುತ್ತೇನೆ. ಅಷ್ಟರಲ್ಲಿ ನೀವು ನಿಮ್ಮ ಬಟ್ಟೆಯನ್ನು ತೆಗೆದು, ಒಮ್ಮೆ ನೀರನ್ನು ಹಿಂಡಿ ಮತ್ತೆ ಹಾಕಿಕೊಳ್ಳಿ" ಎಂದು ಪಿಸುಗುಟ್ಟಿದನು. ಅವಳು ಅವನ ಕೈಹಿಡಿದಳು. ಮುಂದೆ ಬಾಗಿ ಅವನ ಕಿವಿಯ ಬಳಿ "ನನಗೆ ಒಬ್ಬಳೇ ಇರಲು ಹೆದರಿಕೆ" ಎಂದಳು ಮೆಲ್ಲಗೆ.

"ಎರಡೇ ಎರಡು ನಿಮಿಷ, ಹೆದರಿಕೆ ಯಾಕೆ ? ಬಂದುಬಿಡುತ್ತೇನೆ. ನಾನು ಹೇಳಿದ ಹಾಗೆ ಮಾಡಿ" ಎಂದವನೆ, ಅವಳ ಮರುಮಾತಿಗೆ ಕಾಯದೆ ಗುಡಿಯ ಬಲ ಭಾಗದಿಂದ ಮರೆಯಾದ.

ಗರ್ಭಗುಡಿಯ ಹಿಂಭಾಗದಲ್ಲಿ ಮತ್ತೆ ಮೌನ, ಏಕಾಂತ. ಅವಳೊಮ್ಮೆ ಕಂಪಿಸಿದಳು.

ಭೂಮಿಗೌಡ ದೇವಸ್ಥಾನದ ಪ್ರಾಕಾರವನ್ನು ಒಮ್ಮೆ ಪರೀಕ್ಷಿಸಿದ. ಪ್ರಾಕಾರಕ್ಕೆ ಹೊಂದಿಕೊಂಡಿದ್ದ ಅನೇಕ ಚಿಕ್ಕ ಚಿಕ್ಕ ಗರ್ಭಗುಡಿಗಳನ್ನು ಶೋಧಿಸಿದ. ಅನಂತರ, ಮುಖ್ಯಗುಡಿಯಾದ ಶ್ರೀನಿವಾಸಸ್ವಾಮಿಯ ಗುಡಿಯ ಒಳಗೆ ಪ್ರವೇಶಿಸಿದ. ಸುಮಾರು ಇನ್ನೂರು ಮುನ್ನೂರು ವರ್ಷಗಳ ಕಟ್ಟಡ. ಅಲ್ಲಲ್ಲಿ ಬಿರುಕು ಬಿಟ್ಟಿದೆ. ದೇವರಿಗೆ ಪೂಜೆ ಪುನಸ್ಕಾರಗಳು ನಿಂತು ಎಷ್ಟೋ ವರ್ಷಗಳಾಗಿರಬೇಕು. ದೇವಸ್ಥಾನದ ಒಳ ಆವರಣದಲ್ಲಿ ಕಸಕಡ್ಡಿ, ಪ್ಲಾಸ್ಟಿಕ್ ಚೀಲಗಳು, ಬಾಟಲಿಗಳು ! ಕಾವೇರಿ ನದಿಗೆ ಬರುವ ಪ್ರವಾಸಿಗರ ಅಭಿರುಚಿಯನ್ನು ಅವು ತೋರುತ್ತಿದ್ದವು. ಅವನು ಗರ್ಭಗುಡಿಯ ಒಳಗೆ ಇಣುಕಿ ನೋಡಿದ. ಕತ್ತಲೆಯಲ್ಲಿ ಏನೂ ಕಾಣಲಿಲ್ಲ. ಒಮ್ಮೆ ನಿಶ್ಚಲವಾಗಿ ನಿಂತು ಸದ್ದುಗಳನ್ನು ಆಲಿಸಿದ. ಹುಂ ಹುಂ.....ಏನೂ ಇಲ್ಲ.

ಗರ್ಭಗುಡಿಯಿಂದ ಹೊರ ಬಂದವನೆ ಪ್ರಾಕಾರದ ಮುಖ್ಯಧ್ವಾರದಿಂದ ಹೊರಬಂದ. ದಕ್ಷಿಣಕ್ಕೆ ವಿಸ್ತಾರವಾದ ಗದ್ದೆ ಬಯಲು. ಅಲ್ಲಲ್ಲಿ ಒಂದೊಂದು ಬಸುರಿ ಮರ. ಕಾಲುವೆಗಳ ಬಳಿಯ ನೀರಂಜಿಮರಗಳು. ಪೂರ್ವಕ್ಕೂ ಪಶ್ಚಿಮಕ್ಕೂ ಅದೇ ಚಿತ್ರ. ಚಂದ್ರನು ಬಾನಿನಲ್ಲಿ ಇಳಿಯುತ್ತಿದ್ದುದರಿಂದ ಮರಗಳ ನೆರಳು ಪೂರ್ವಕ್ಕೆ ಬಾಗಿತ್ತು. ಭೂಮಿಗೌಡ ದೇವಸ್ಥಾನವನ್ನು ಎಡದಿಂದ ಬಳಸಿ, ಹಿಂಭಾಗಕ್ಕೆ ಬಂದ. ಉತ್ತರದ ದಿಕ್ಕಿನಲ್ಲಿ ಕಾವೇರಿ ತನ್ನಷ್ಟಕ್ಕೆ ತಾನು ನೆಮ್ಮದಿಯಿಂದ ಹರಿಯುತ್ತಿದ್ದಳು. ಬಲಮುರಿ ಕಡೆಯಿಂದ ಪೂರ್ವಕ್ಕೆ ಹರಿದು ಪಕ್ಷಿಧಾಮವನ್ನು ಮುಟ್ಟಿ, ಮುಂದಕ್ಕೆ ಶೀರಂಗನ ಸನ್ನಿಧಿಗೆ ಧಾವಿಸುತ್ತಿದ್ದಳು.

ಅವನು ಒಮ್ಮೆ ತನ್ನ ಉಸಿರು ಬಿಗಿ ಹಿಡಿದು, ಏಕಾಗ್ರತೆಯನ್ನು ಸಾಧಿಸಿ ಆಲಿಸತೊಡಗಿದನು. ಮೊದಲು ಮಂದಗಾಳಿಯ ಹೊರತು ಇನ್ನೇನು ಕೇಳಿಸಲಿಲ್ಲ. ಮತ್ತೆ ಮನಸ್ಸನ್ನು ಕೇಂದ್ರೀಕರಿಸಿದ. ಆಗ ಕಾವೇರಿ ನದಿಯ ಮೃದುವಾದ ಕಲರವ ಕೇಳಿಸಿತು. ತನ್ನ ದೃಷ್ಟಿಯನ್ನು ಅರ್ಧಮೈಲಿಯಾಚೆಯಿರುವ ಅರೆಯ ಕಡೆ ತಿರುಗಿಸಿ ದೃಷ್ಟಿ ಮತ್ತು ಮನಸ್ಸುಗಳನ್ನು ಕೇಂದ್ರೀಕರಿಸಿದ.

ಮೊದಲು ಏನೋ ಕೇಳಿಸಿತು. ಅದು ಯಾವ ಸದ್ದೆಂದು ತಿಳಿಯದಾದ. ಮತ್ತೆ ಕೇಂದ್ರೀಕರಿಸಿ ಆಲಿಸಿದ. ಆಗ ಆ ಸದ್ದಿನ ಮೂಲವನ್ನು ಅರ್ಥಮಾಡಿಕೊಂಡ, ಕೂಡಲೇ ಅವನು ಚುರುಕಾದ. ಕಾವೇರಿ ನದಿ ತೀರವನ್ನು ಒಮ್ಮೆ ತನ್ನ ದೃಷ್ಟಿಯಿಂದ ಪರೀಕ್ಷಿಸಿದ. ದೇವಸ್ಥಾನದ ಹಿಂಭಾಗದಿಂದ ಸ್ವಲ್ಪ ಎಡಕ್ಕೆ, ನದಿಯ ತೀರದಲ್ಲಿದ್ದ ಗದ್ದೆಯ ಮೇಲೆ ಒಂದು ಕ್ಷಣ ಅವನ ದೃಷ್ಟಿ ನೆಟ್ಟಿತು.

ಅವನ ತುಟಿಯ ಮೇಲೆ ತೆಳು ನಗೆ ಮಿಂಚಿ ಮಾಯವಾಯಿತು.

ಭೂಮಿಗೌಡ ಚಂದ್ರಿಕಾಳ ಬಳಿಗೆ ಬರುವ ಹೊತ್ತಿಗೆ ಅವಳು ತನ್ನ ಬಟ್ಟೆಯನ್ನು ಬಿಚ್ಚಿ ನೀರನ್ನು ಹಿಂಡಿ ಮತ್ತೆ ತೊಟ್ಟುಕೊಂಡಿದ್ದಳು. ಅವಳು ಮೊದಲಿಗಿಂತ ಹೆಚ್ಚು ಗೆಲುವಾಗಿದ್ದಳು. ಅವಳ ತಲೆಯ ಕೂದಲು ಹಗುರ ಹಗುರವಾಗಿ ಅವಳ ಬೆನ್ನ ಮೇಲೆ ಹರಡಿಕೊಂಡಿತ್ತು. ಅವನನ್ನು ಕಂಡ ಕೂಡಲೆ "ಏಕೆ ಇಷ್ಟು ಹೊತ್ತು ಮಾಡಿದಿರಿ ?" ಎಂದು ಕೇಳಿದಳು.

ಅವನು ಅವಳ ಮುಖವನ್ನು ಕಣ್ತುಂಬ ನೋಡಿ "ಈಗ ನಾವು ಒಂದಷ್ಟು ದೂರ ನಡಿಯಬೇಕು. ಇಲ್ಲಿ ಹೆಚ್ಚು ಹೊತ್ತು ಇರುವಂತಿಲ್ಲ !" ಎಂದನು.

ಅವಳು "ಏಕೆ ? ರೆಡ್ಡಿ ಇನ್ನೂ ಹೋಗಿರೋಲ್ವೆ ? ಅವನು ಇಲ್ಲಿಗೂ ಬರ್‍ತಾನೆಯೇ ?" ಎಂದು ಆತಂಕದಿಂದ ಪ್ರಶ್ನಿಸಿದಳು.

ಭೂಮಿಗೌಡ ಅವಳ ಬಲಗೈಯನ್ನು ತೆಗೆದುಕೊಂಡು, ತನ್ನ ಎಡಗೈ ಮೇಲೆ ಇಟ್ಟು, ಅದನ್ನು ಮೃದುವಾಗಿ ನೀವುತ್ತಾ "ರೆಡ್ಡಿ ನಮ್ಮನ್ನು ಹುಡುಕದೆ ಬಿಡುವುದಿಲ್ಲ, ಚಂದ್ರಿಕಾ. ಅವನು ಮಾಡಿರುವ ಎರಡು ಕೊಲೆಗಳಿಗೆ ನಾವು ಐ ವಿಟ್ನೆಸ್‌ಗಳು. ನಮ್ಮನ್ನು ಮುಗಿಸಿದರೆ ಅವನು ನಿರಾಳವಾಗಿ ಉಸಿರಾಡಬಲ್ಲ. ಅವನು ನಮ್ಮನ್ನು ಹುಡುಕಿ ಇಲ್ಲಿಗೆ ಬಂದೇ ಬರ್‍ತಾನೆ" ಎಂದನು.

"ನಾವಿಲ್ಲಿರುವುದು ಅವನಿಗೆ ಹೇಗೆ ತಿಳಿಯುತ್ತೆ ?" ಎಂದು ಕೇಳಿದಳು.

"ನೋಡು, ಚಂದ್ರಿಕಾ, ಈ ಸುತ್ತಮುತ್ತ ಅಷ್ಟು ಸುಲಭವಾಗಿ ಅಡಗಿಕೊಳ್ಳುವ ತಾಣಗಳಿಲ್ಲ. ನಾನು ನಿನ್ನನ್ನು ಸುರಂಗದಲ್ಲಿ ಇಲ್ಲಿಗೆ ಕರೆದುಕೊಂಡು ಬಂದದ್ದು ಎರಡು ಕಾರಣಗಳಿಂದ : ಒಂದು, ರೆಡ್ಡಿಯಿಂದ ಕೂಡಲೇ ಮರೆಯಾಗುವುದು ಮತ್ತು ಅವನನ್ನು ಗೊಂದಲದಲ್ಲಿ ಸಿಕ್ಕಿಸುವುದು. ಎರಡು, ಸ್ವಲ್ಪ ಕಾಲವಂಚನೆ ಮಾಡುವುದು. ಅಪಾಯದಿಂದ ಅವಿತುಕೊಳ್ಳುವುದಕ್ಕೆ ಈ ಪ್ರದೇಶದಲ್ಲಿರುವುದು ಈ ದೇವಸ್ಥಾನವೊಂದೆ ಎಂದು ಎಂಥವರಿಗೂ ಗೊತ್ತಾಗುತ್ತದೆ. ಇನ್ನು ರೆಡ್ಡಿಗೆ ಗೊತ್ತಾಗುವುದಿಲ್ಲವೆ ? ಅವನು ಚಾಣಾಕ್ಷನಾಗಿದ್ದಾನೆ. ಅವನು ಏನೇ ಮಾಡಿದರೂ

ಯೋಚನೆ ಮಾಡಿ ಮಾಡುತ್ತಾನೆ. ಆದ್ದರಿಂದ ಅವನು ಇನ್ನು ಕೆಲವೇ ಕೆಲವು ಕ್ಷಣಗಳಲ್ಲಿ ಇಲ್ಲಿಗೆ ಬಂದೇ ಬರುತ್ತಾನೆ" ಎಂದು ಅವಳ ಕೈಗಳೆರಡನ್ನೂ ತನ್ನ ಅಂಗೈಗಳಲ್ಲಿ ಮುಚ್ಚಿಕೊಂಡು " ಅವನನ್ನು ಇಲ್ಲಿಗೆ ನಿನ್ನ ಬೆಳ್ಳಿ ಕರೆದುಕೊಂಡು ಬರುತ್ತದೆ" ಎಂದ.

ಅವಳು ಮಿಶ್ರಭಾವಗಳಿಂದ ಬೆಚ್ಚಿದಳು. ತನ್ನ ಬೆಳ್ಳಿ ತನಗೆ ಸಿಗುತ್ತದೆ; ಆದರೆ ಅದು ರೆಡ್ಡಿಯನ್ನು ಕರೆತರುತ್ತದೆ. ಸಾವನ್ನು ಕರೆತರುವ ಮಿತ್ರನಂತೆ! ಅವಳು ಅವನ ಮುಖವನ್ನು 'ಮುಂದೇನು ?' ಎಂಬಂತೆ ನೋಡಿದಳು.

ಅವಳ ಎದುರು ನಿಂತು ಅವಳನ್ನು ತನ್ನ ಎದೆಗೆ ಆನಿಸಿಕೊಂಡು, ಅವಳ ಬೆನ್ನನ್ನು ಮೃದುವಾಗಿ ಸವರುತ್ತಾ "ನಾನಿರುವಾಗ ನಿನಗೇಕೆ ಭಯ ? ಏನು ಆಗೋಲ್ಲ. ನಿನ್ನ ಬೆಳ್ಳಿ ಅದರ ಕೆಲಸ ಮಾಡುತ್ತದೆ. ಅದು ತನ್ನ ಯಜಮಾನ್ತಿಯನ್ನು ತನ್ನ ಗ್ರಹಣ ಶಕ್ತಿಯಿಂದ ಅರಸುತ್ತ ಬರುತ್ತೆ. ಅದನ್ನು ಹಿಂಬಾಲಿಸಿ ರೆಡ್ಡಿ ಬರ್‍ತಾನೆ. ಅವನಿಗೆ ನಾಯಿ ಬುದ್ದಿಯ ಮೇಲೆ ನಂಬಿಕೆ ಇದ್ದೇ ಇರುತ್ತದೆ" ಎಂದವನೆ ಅವಳನ್ನು ಜಗುಲಿಯಿಂದ ಕೆಳಗಿಳಿಸಿ, ಅವಳ ಕೈಯಿಡಿದು "ಬನ್ನಿ ಹೋಗೋಣ" ಎಂದು ಹೊರಟನು.

ದೇವಸ್ಥಾನದ ಮುಖ್ಯದ್ವಾರದ ಮೂಲಕ ಹೊರ ಬಂದು ಎಡಕ್ಕೆ ತಿರುಗಿ ನದಿಯ ಕಡೆ ಹೆಜ್ಜೆ ಹಾಕಿದ. ಬರಿಗಾಲಲ್ಲಿ ನಡೆಯುತ್ತಿದ್ದ ಅವಳು ತುಸು ಕಷ್ಟಪಡುತ್ತಿದ್ದಳು. ಸ್ವಲ್ಪ ಹೊತ್ತಿನ ಹಿಂದೆಯಷ್ಟೆ ಭೂಮಿಗೌಡ ಮೃದುವಾಗಿ ಮಸಾಜು ಮಾಡಿದ್ದ ಪಾದಗಳು ಕಲ್ಲುಮಣ್ಣಿನ ಒತ್ತಡಕ್ಕೆ ನೋಯುತ್ತಿದ್ದವು. "ಭೂಮಿ ಹೇಳಿದ್ದಾನೆ. ಅವನಿರುವಾಗ ನನಗೇಕೆ ಭಯ ?" ಎಂದು ತನ್ನನ್ನು ತಾನು ಸಮಾಧಾನಪಡಿಸಿಕೊಳ್ಳುತ್ತಾ ಅವನೊಡನೆ ಹೆಜ್ಜೆಹಾಕತೊಡಗಿದಳು.

ಅವನು ನೇರವಾಗಿ ನದಿ ತೀರಕ್ಕೆ ಬಂದ. ನದಿ ಅವನು ನಿಂತಿದ್ದ ಸ್ಥಳದಿಂದ ಹತ್ತು ಹದಿನೈದು ಅಡಿ ದೂರದಲ್ಲಿ ಹರಿಯುತ್ತಿತ್ತು. ಅವನು ಪಶ್ಚಿಮಕ್ಕೆ ತಿರುಗಿ ಗದ್ದೆಯ ಬದುವಿನ ಮೇಲೆ ನಡೆಯತೊಡಗಿದ. ಚಂದ್ರಿಕಾ ಹಿಂಬಾಲಿಸಿದಳು. ಸುಮಾರು ನೂರು ಅಡಿ ನಡೆದಾದ ಮೇಲೆ ಅವನು ನಿಂತು, ಪ್ರದೇಶವನ್ನು ಅವಲೋಕಿಸಿದ. ನದಿ ತೀರಕ್ಕೆ ಹೊಂದಿಕೊಂಡಂತೆ ಒಂದು ದೊಡ್ಡ ಬಾಗೇಮರವಿತ್ತು. ಅದರ ಬುಡ ಸುಮಾರು ಆರೆಂಟು ಅಡಿಯ ವ್ಯಾಸವನ್ನು ಹೊಂದಿತ್ತು. ಸುಮಾರು ಮೂವತ್ತು ಅಡಿ ಎತ್ತರ ಬೆಳೆದಿದ್ದ ಆ ಮರ ಆಕಾಶದಲ್ಲಿ ತನ್ನ ಸುತ್ತ ಅಷ್ಟೇ ಅಡಿ ಅಗಲಕ್ಕೆ ವಿಸ್ತರಿಸಿಕೊಂಡಿತ್ತು. ವಸಂತಕಾಲವಾಗಿದ್ದರಿಂದ, ಅದು ತನ್ನೆಲ್ಲ ಮುದಿ ಎಲೆಗಳನ್ನು ಉದುರಿಸಿಕೊಂಡಿತ್ತು. ಆಗ ತಾನೆ ಚಿಗುರಿದ ಹಸುರೆಲೆಗಳು ಸೊಂಪಾಗಿ ಮರವನ್ನು ಸಮೃದ್ಧಗೊಳಿಸಿದ್ದವು. ಮರದ ಕೆಳಗೆ ಅತ್ಯಂತ ಹಿತಕರವೂ ಅತ್ಯಲ್ಪವೂ ಆದ ಸುವಾಸನೆ ಅಡರಿತ್ತು. ಹೊಸದಾಗಿ ಚಿಗುರಿದ ಎಲೆಗಳ ನಡುವೆ ತೊಟ್ಟು ತೊಟ್ಟಿಗೂ ಹೂ ಬಿಟ್ಟು ಮರ ತೊನೆಯುತ್ತಿತ್ತು. ಚಂದ್ರ ಪಶ್ಚಿಮದ ಕಡೆ ವಾಲಿದ್ದರಿಂದ ಮರದ ನೆರಳು ಪೂರ್ವಕ್ಕೆ ನೀಳವಾದ ಚಲನೆಯಲ್ಲಿತ್ತು.

ಭೂಮಿಗೌಡ ಮರವನ್ನು ದಿಟ್ಟಿಸಿದ. ಅದರ ಮೈ ತುಂಬಾ ಕಳೆದ ಸಾಲಿನಲ್ಲಿ ಅದು ಬಿಟ್ಟ ಬಾಗೆ ಬೀಜದ ಒಣಗಿದ ಕಾಯಿಗಳು ಮೃದುವಾಗಿ ಪಟ ಪಟ ಸದ್ದುಮಾಡುತ್ತಿದ್ದವು.

ಚಂದ್ರನ ಕಿರಣ ಅವುಗಳ ಮೇಲೆ ಬಿದ್ದು, ಚಿನ್ನದ ಬಣ್ಣವನ್ನು ಪ್ರತಿಫಲಿಸುತ್ತಿದ್ದವು. ಆ ಬಾಗೇ ಮರದ ದಕ್ಷಿಣ ದಿಕ್ಕಿಗೆ ಸುಮಾರು ನಲವತ್ತು ಅಡಿ ದೂರದಲ್ಲಿ ನಿಂತು ಭೂಮಿಗೌಡ ಒಮ್ಮೆ ಏನನ್ನೋ ನಿರೀಕ್ಷಿಸುವಂತೆ ಸುತ್ತಲೂ ನೋಡಿದ. ಅನಂತರ ಚಂದ್ರಿಕಾಳ ಕೈಯನ್ನು ಹಿಡಿದು ಗದ್ದೆಯ ಬದುವಿನ ಮೇಲೆ ನೇರವಾಗಿ ಹತ್ತು ಅಡಿ ನಡೆದು, ಮತ್ತೊಂದು ಬದುವಿನ ಮೇಲೆ ಹೆಜ್ಜೆಯಿಟ್ಟು ಚಂದ್ರಿಕಾಳನ್ನು ತನ್ನ ಪಕ್ಕಕ್ಕೆ ಕರೆದುಕೊಂಡು ನೇರವಾಗಿ ನದಿ ತೀರಕ್ಕೆ ಬಂದ. ಅಲ್ಲಿಂದ ಬಲಕ್ಕೆ ತಿರುಗಿ ಬಾಗೇ ಮರದ ಬುಡಕ್ಕೆ ಬಂದ.

ಬಾಗೇ ಮರದ ಬುಡದ ಸುತ್ತ ನಯವಾದ ಜಾಗವಿತ್ತು. ಕಾವೇರಿ ನದಿ ಮರದ ಪಕ್ಕ ಹತ್ತಾರು ಸಹಸ್ರ ವರ್ಷಗಳಿಂದ ಹರಿಯುತ್ತಿದ್ದಳು. ಮುಂಗಾರಿನಲ್ಲಿ ತುಂಬಿ ಮರವನ್ನು ಹತ್ತಿಪ್ಪತ್ತು ಅಡಿ ಅಪ್ಪಿ ಹರಿದದ್ದೂ ಉಂಟು; ಒಮ್ಮೊಮ್ಮೆ ಸ್ಪರ್ಶಿಸಿ ಮುತ್ತಿಕ್ಕಿ ಮುಂದಕ್ಕೆ ಹೋಗಿದ್ದು ಉಂಟು. ಮರ ಮತ್ತು ನದಿಯ ಸಾಹಚರ್ಯ ನಿರಂತರವಾಗಿ ನಡೆಯುತ್ತಲೇ ಇತ್ತು. ಭೂಮಿಗೌಡ ಮರದ ಬುಡದಲ್ಲಿದ್ದ ಒಂದು ಕಡ್ಡಿಯನ್ನು ತೆಗೆದುಕೊಂಡು, ಮರದ ದಕ್ಷಿಣ ಭಾಗದ ಬುಡವನ್ನು ಮುಟ್ಟಿ ಮುಟ್ಟಿ ಪರೀಕ್ಷಿಸಿದ. ಸಣ್ಣಪುಟ್ಟ ಕಲ್ಲು ಕಡ್ಡಿಗಳನ್ನು ತೆಗೆದು ಹಾಕಿದ.

ಚಂದ್ರಿಕಾಳನ್ನು ದಕ್ಷಿಣಕ್ಕೆ ಮುಖಮಾಡಿ ಕೂರುವಂತೆ ಹೇಳಿ, ತಾನು ಅವಳ ಪಕ್ಕ ಕುಳಿತ. ಅವರಿಬ್ಬರೂ ಬಾಗೇಮರವನ್ನು ಒರಗಿದರು. ಅವರ ಬಟ್ಟೆಗಳು ಹೆಚ್ಚು ಕಡಿಮೆ ಒಣಗಿದ್ದವು. ಇಬ್ಬರೂ ಕಾಲನ್ನು ನೀಡಿಕೊಂಡರು. ಅವಳು ಅವನ ಕೈಯನ್ನು ಹಿಡಿದು ತುಸು ಕಣ್ಮುಚ್ಚಿದಳು. ಅವಳ ಮನದಲ್ಲಿ ಅನೇಕ ಪ್ರಶ್ನೆಗಳಿದ್ದವು. ಭೂಮಿಗೌಡ ಏನು ಮಾಡುತ್ತಿದ್ದಾನೆ? ದೇವಸ್ಥಾನದಲ್ಲಿ ತಮಗೆ ರಕ್ಷಣೆ ಇಲ್ಲವೆಂದು ಸುರಕ್ಷಿತ ಸ್ಥಳಕ್ಕೆ ಹೋಗೋಣವೆಂದು ಇಲ್ಲಿಗೇಕೆ ಕರೆತಂದ? ಇದೋ ಬಟ್ಟಾಬಯಲು ! ರೆಡ್ಡಿ ಆಕ್ರಮಣ ಮಾಡಿದರೆ ಹಿಂದಕ್ಕಂತೋ ಹೋಗುವಂತಿಲ್ಲ. ನದಿ ಇದೆ. ಅಕ್ಕ ಪಕ್ಕ ಎದುರು- ಎಲ್ಲಾ ಬಯಲು, ಬರೀ ಗದ್ದೆ. ಇದು ಅಡಗುದಾಣವಂತು ಅಲ್ಲ. ಇವನು ಏನು ಪ್ಲಾನ್ ಮಾಡಿದ್ದಾನೆ? ಏನಾದರೂ ಅಪಾಯವಾದರೆ ಏನು ಮಾಡುವುದು?

ಅವಳು ಕಣ್ತೆರೆದು ಭೂಮಿಗೌಡನ ಮುಖವನ್ನು ನೋಡಿದಳು. ಅವನು ತುಂಬಾ ಎಚ್ಚರಿಕೆಯಿಂದ ಬಯಲನ್ನು ಗಮನಿಸುತ್ತಿದ್ದ ; ಆಲಿಸುತ್ತಿದ್ದ. ಅವನ ತಲೆಯಲ್ಲಿ ಏನೋ ನಡೆಯುತ್ತಿದೆ ; ತನ್ನ ಜೊತೆ ಹೇಳುತ್ತಿಲ್ಲ. ತಾನು ಹಿಡಿದಿದ್ದ ಅವನ ಕೈಯನ್ನು ಮೃದುವಾಗಿ ಅದುಮುತ್ತಾ "ರೆಡ್ಡಿ ಇಲ್ಲಿಗೆ ಬಂದರೆ ನಮ್ಮ ಗತಿಯೇನು ?" ಎಂದು ಕೇಳಿದಳು.

ಭೂಮಿಗೌಡ ತಿಂಗಳ ಬೆಳಕಲ್ಲಿ ಹೊಳೆಯುತ್ತಿದ್ದ ಅವಳ ಕಾಲುಂಗರವನ್ನು ಗಮನಿಸುತ್ತಾ "ನಿಮಗೆ ಅನುಮಾನವೇ ಬೇಡ. ಅವನು ಇಲ್ಲಿಗೆ ಬಂದೇ ಬರುತ್ತಾನೆ ? ಅವನು ಇಲ್ಲಿಗೆ ಬರಲೆಂಬುದೇ ನನ್ನ ಯೋಜನೆ. ಅವನನ್ನು ಗ್ಯಾರಂಟಿಯಾಗಿ ಬೆಳ್ಳಿ ಇಲ್ಲಿಗೆ ಕರೆತರುತ್ತದೆ" ಎಂದು ಉತ್ತರಿಸಿದನು.

"ಆಮೇಲೆ ?" ಅವಳು ಹೆದರಿದ ಧ್ವನಿಯಲ್ಲಿ ಕೇಳಿದಳು. ತಿಂಗಳ ಬೆಳಕಲ್ಲಿ ಅವಳ ಕಣ್ಣುಗಳು ಆತಂಕವನ್ನು ಸೂಚಿಸಿದವು ; ಅವಳ ಬೆರಳುಗಳು ಕಂಪಿಸಿದವು.

"ಆಮೇಲೇನು, ಚಂದ್ರಿಕಾ ? ಅವನು ನಮಗೆ ಮುಖಾಮುಖಿಯಾಗುತ್ತಾನೆ. ನೀವು ನನ್ನ ಮೇಲೆ ಭರವಸೆ ಇಟ್ಟು ಮುಂದೆ ನಡೆಯುವ ಕ್ರಿಯೆಯನ್ನು ಸುಮ್ಮನೆ ನೋಡುತ್ತಾ ಇರಿ" ಎಂದು ಬಯಲ ಕಡೆ ತನ್ನ ದೃಷ್ಟಿಯನ್ನು ಕೇಂದ್ರೀಕರಿಸಿದನು.

ಸುಮಾರು ಅರ್ಧಗಂಟೆಯ ಹಿಂದೆ ನಾಯಿಯ ಕುಯ್‌ಗುಟ್ಟುವಿಕೆಯನ್ನು ಕೇಳಿದ ರೆಡ್ಡಿಗೆ ಉತ್ಸಾಹ ಇಮ್ಮಡಿಯಾಗಿತ್ತು. ತಾನು ನಿಂತಲ್ಲಿಂದಲೇ ಅದರ ಧ್ವನಿ ಬರುವ ಕಡೆ ನೋಡಿ, ಆಲಿಸಿದ, ಅದು ರಸ್ತೆಯ ಪಕ್ಕದಲ್ಲಿರುವ ಬಸುರಿ ಮರದ ಕಡೆ ನೋಡಿ ಬೊಗಳುತ್ತಿತ್ತು. ಅದು ರಸ್ತೆಯ ಪಕ್ಕದಲ್ಲಿರುವ ಬಸುರಿ ಮರದ ಬುಡದಿಂದ ಉತ್ತರಕ್ಕೆ ಎರಡೆರಡು ಬಾರಿ ಓಡಾಡುವುದನ್ನು ಗಮನಿಸಿದ. ಅರೆಯ ನಡುವೆ ನಿಂತು ಮತ್ತೊಂದು ಬಾರಿ ಸೂಕ್ಷ್ಮವಾಗಿ ಗದ್ದೆ ಬಯಲನ್ನು ಗಮನಿಸಿದ. ಇಲ್ಲ, ಅವರ ಸುಳಿವಿಲ್ಲ. ಆ ನಾಯಿ ಬಸುರಿ ಮರದ ಬುಡದಲ್ಲಿ ಅಡ್ಡಾಡುತ್ತಿರುವುದನ್ನು ನೋಡಿದರೆ, ಅವರು ಇಲ್ಲೇ ಎಲ್ಲೋ ಇದ್ದಾರೆ. ಹೌದು, ಇನ್ನೆಲ್ಲಿ ಮಾಯವಾಗಲು ಸಾಧ್ಯ ? ಅದೂ ಈ ಸರಿರಾತ್ರಿಯಲ್ಲಿ ! ಅವನು ಬಸುರಿ ಮರವನ್ನು ನಿಟ್ಟಿಸಿ ನೋಡಿದ. ಸ್ವಲ್ಪ ವಯಸ್ಸಾದ ಮರ. ಕಾಂಡವು ದಪ್ಪವಾಗಿದ್ದು, ಅಲ್ಲಲ್ಲಿ ಟೊಳ್ಳು ಬಿದ್ದಿರುವುದು ಚಂದ್ರನ ಬೆಳಕಿನಲ್ಲಿ ಕಪ್ಪಾಗಿ ಕಾಣುತ್ತಿತ್ತು. ಮರದ ಕೊಂಬೆ ರೆಂಬೆಗಳನ್ನು ಅವಲೋಕಿಸಿದ. ದೂರಕ್ಕೆ ಅದು ಕಪ್ಪು ಮುದ್ದೆಯಂತೆ ತೋರಿತು. 'ಅಹಾ ! ನಿಮ್ಮ ಬುದ್ಧಿಯೇ ! ಮರಹತ್ತಿ ಎಲೆಗಳ ನಡುವೆ ಅವಿತು ಕೂತಿದ್ದೀರಾ ? ನನ್ನಿಂದ ತಪ್ಪಿಸಿಕೊಳ್ಳಲು ಸಾಧ್ಯವೆ ?' ಎಂದು ಕೊಂಡವನೆ ಸರಸರನೆ ಮರದ ಬುಡಕ್ಕೆ ಬಂದ. ಅವನನ್ನು ಗಮನಿಸಿದ ಬೆಳ್ಳಿ ಮೆಲು ದನಿಯಲ್ಲಿ ಅವನತ್ತ ತಿರುಗಿ ಬೊಗಳಲು ಆರಂಭಿಸಿತು. ಅವನು ಅದನ್ನು ನಿರ್ಲಕ್ಷಿಸಿ, ಮರವನ್ನು ವೀಕ್ಷಿಸಿದನು. ತುಂಬಾ ನುಣುಪಾದ ಕಾಂಡ. ಸುಮಾರು ಹನ್ನೆರಡು ಅಡಿ ಎತ್ತರ ನೇರವಾಗಿ ಬೆಳೆದು, ಅನಂತರ ಕವಲೊಡೆದು ಗುಂಪಾಗಿ ಸೊಂಪಾಗಿದೆ. ತಿಂಗಳ ಬೆಳಕು ಅದರ ಎಲೆಗಳ ನಡುವಿನಿಂದ ತೂರಿ ಭೂಮಿಯ ಮೇಲೆ ವಂದರಿಯ ರೂಪವನ್ನು ನಿರ್ಮಾಣ ಮಾಡಿತ್ತು. ದೃಷ್ಟಿಯನ್ನು ಕದಲಿಸದೆ ಕೊಂಬೆ ರೆಂಬೆಗಳನ್ನು ಅತ್ಯಂತ ಸೂಕ್ಷ್ಮವಾಗಿ ಗಮನಿಸಿದ. ಕ್ರಮೇಣ 'ಥತ್' ಎಂದು ಗೊಣಗಿ, ಕತ್ತನ್ನು ಬಗ್ಗಿಸಿ ಕೈಯಿಂದ ಹೆಕ್ಕತ್ತನ್ನು ಉಜ್ಜಿಕೊಂಡ. 'ಎಲ್ಲಿ ಹೋದರು, ಇವರು ? ಮರದಲ್ಲಿ ಅವಿತುಕೊಳ್ಳಲು ಸಾಧ್ಯವಿಲ್ಲ. ಕಾಂಡದ ನುಣುಪಿನಿಂದಾಗಿ ಹತ್ತಲೂ ಅಷ್ಟು ಸುಲಭವಲ್ಲ. ಈ ನಾಯಿ ಇಲ್ಲಿ ಅಡ್ಡಾಡುತ್ತಿರುವುದನ್ನು, ನೆಲವನ್ನು ಮೂಸುತ್ತಿರುವುದನ್ನು ಗಮನಿಸಿದರೆ ಅವರು ಇಲ್ಲಿ ಬಂದು, ನಡೆದಾಡಿದ್ದಾರೆ ಎಂಬುದರ ಬಗ್ಗೆ ಸಂಶಯವಿಲ್ಲ' ಎಂದು ಅವನು ಚಿಂತಿಸಿದ.

ಅವರು ತಪ್ಪಿಸಿಕೊಂಡು ಹೋದರೆ ಹೋಗಲಿ ಎಂದು ಬಿಡುವಂತಿರಲಿಲ್ಲ. ಅವನ ಎರಡೂ ಕೃತ್ಯಗಳಿಗೆ ಅವರು ಪ್ರತ್ಯಕ್ಷದರ್ಶಿಗಳಾಗಿದ್ದರು. ಆ ಭೂಮಿಗೌಡನನ್ನು ಹಾಗೆಯೇ ಬಿಡುವಂತಿರಲಿಲ್ಲ. ಅವನನ್ನು ಬಿಟ್ಟರೆ, ಬೆಳಕು ಮೂಡುತ್ತಲೆ ಅವನು ಪೊಲೀಸ್ ಸ್ಟೇಷನ್‌ಗೆ ಹೋಗುತ್ತಾನೆ. ಪೊಲೀಸರು ತಾನು ಎಲ್ಲೇ ಇದ್ದರೂ ವಾಸನೆ ಹಿಡಿದು ಬರುತ್ತಾರೆ. ಅವನನ್ನು

ಹೇಗಾದರೂ ಮಾಡಿ ಹುಡುಕಿ ಮುಗಿಸಬೇಕು. ಅವನು ಹೋದನಂತರ ಆ ಸಿಸ್ಟರ್ ಯಾವ ಲೆಕ್ಕ ? ಇನ್ನೊಂದರ್ಧ ಮುಕ್ಕಾಲುಗಂಟೆಯಲ್ಲಿ ತಾನೆಂದುಕೊಂಡಂತೆ ಎಲ್ಲಾ ಸರಿಹೋದರೆ, ತನ್ನ ಯೋಜನೆಯಂತೆ ಹೆಣಗಳನ್ನು ನದಿಯಲ್ಲಿ ಬಿಸಾಕಿ, ಬೆಳಗಾಗುವ ಹೊತ್ತಿಗೆ ಬೆಂಗಳೂರು, ಅಲ್ಲಿಂದ ಕೋಲಾರ, ಅಲ್ಲಿಂದ ರಾಯಲಸೀಮೆ. ಅವನು ನಾಯಿಯನ್ನು ಗಮನಿಸಿದ. ಅದು ಮತ್ತೆ ಮತ್ತೆ ಅವನ ಕಡೆ ನೋಡಿ ಬೊಗಳುತ್ತಿತ್ತು. 'ಸ್ವೀಟ್ ಐಲ್ಯಾಂಡ್' ಕಾಟೇಜ್‌ನಲ್ಲಿ ಅವನಿಂದ ಪೆಟ್ಟು ತಿಂದಿದ್ದ ಅದು ಅವನನ್ನು ಪ್ರೀತಿಯಿಂದ ಕಾಣಲು ಸಾಧ್ಯವಿರಲಿಲ್ಲ. ತನ್ನ ಒಡತಿ ಇವನಿಂದ ಬೆದರಿದ್ದಾಳೆಂದು ಅದಕ್ಕೆ ಚೆನ್ನಾಗಿ ಅರ್ಥವಾಗಿತ್ತು. ರೆಡ್ಡಿಗೆ ಅದರ ಬೊಗಳುವಿಕೆ ಕಿರಿಕಿರಿಯುಂಟುಮಾಡಿತು. ಬಾಕುವನ್ನು ಜೇಬಿನಿಂದ ಹೊರತೆಗೆದು, ಅದನ್ನು ಮುಗಿಸಿಬಿಡಲು ಕೈಎತ್ತಿದ. ಆದರೆ ಅವನ ಕೈ ಅಲ್ಲೇ ನಿಂತಿತು. ಅವನ ಮನಸ್ಸು ಚಿಂತಿಸಿತು. ಅವರಿಬ್ಬರ ಬಳಿಗೆ ತನ್ನನ್ನು ಕರೆದುಕೊಂಡು ಹೋಗುವ ಏಕೈಕ ಸಾಧನವೇ ಈ ನಾಯಿ. ತಾನು ಮೂರ್ಖನಂತೆ ಅದನ್ನು ಮುಗಿಸಿದರೆ ? ಬೇಡ, ತಾಳ್ಮೆ...ತಾಳ್ಮೆ.....ಎಂದು ತನಗೆ ತಾನೇ ಹೇಳಿಕೊಂಡ. ಈ ನಾಯಿ ಎಷ್ಟು ಹೊತ್ತು ಬೊಗಳೀತು. ಆಮೇಲೆ ಸುಸ್ತಾಗಿ ಸುಮ್ಮನಾಗುತ್ತದೆ. ಅನಂತರ ತನ್ನ ಒಡತಿಯ ವಾಸನೆ ಹಿಡಿದು ಹುಡುಕಿಕೊಂಡು ಹೋಗುತ್ತದೆ. ತಾನು ಸುಮ್ಮನೆ ಸ್ವಲ್ಪ ಅನತಿದೂರದಲ್ಲಿ ಹಿಂಬಾಲಿಸಿದರೆ ಸಾಕು. ತನಗೆ ಬೇಕಾದವರ ಬಳಿ ಅದು ಕರೆದುಕೊಂಡು ಹೋಗುತ್ತದೆ. ಅನಂತರ ತನ್ನ ಕೆಲಸ ಸುಲಭ.

ರೆಡ್ಡಿ ಅಂದುಕೊಂಡಂತೆಯೇ ಆಯಿತು. ಬೆಳ್ಳಿ ಅವನತ್ತ ತಿರುಗಿ ತಿರುಗಿ ಸ್ವಲ್ಪ ಹೊತ್ತು ಬೊಗಳಿತು. ಅವನಿಂದ ಯಾವ ಬಗೆಯ ಪ್ರತಿಕ್ರಿಯೆಯೂ ಕಂಡು ಬರದೆ ಇದ್ದುದರಿಂದ ಜಗಳದಲ್ಲಿ ಆಸಕ್ತಿಯನ್ನು ಕಳೆದುಕೊಂಡಿತು. ಆಮೇಲೆ ಒಂದು ಸಾರಿ ಗೊರ್ರ್....ಗೊರ್ರ್ ಎಂದು ತಲೆ ಎತ್ತಿ ಉತ್ತರಕ್ಕೆ ನೋಡಿತು. ಮತ್ತೆ ನೆಲವನ್ನು ಮೂಸಿತು. ಮೂಸಿಕೊಂಡೇ ಗದ್ದೆಯ ತೆವರಿ. ಕೆಸುರಗಳಲ್ಲಿ ನಡೆಯತೊಡಗಿತು. ಅದರ ಮೃದುವಾದ ಅರಳೆಯಂಥ ಕೂದಲುಗಳು ಆಗಲೇ ಕೆಸರಿನಿಂದ ತೊಯ್ದಿದ್ದವು. ಆದರೂ ಅದು ಹುಷಾರಾಗಿ, ನೆಲವನ್ನು ಮತ್ತೆ ಮತ್ತೆ ಮೂಸುತ್ತಾ ಮುನ್ನಡೆಯಿತು.

ರೆಡ್ಡಿ ಸ್ವಲ್ಪ ದೂರವನ್ನು ಕಾಯ್ದುಕೊಂಡು ಅದನ್ನು ಹಿಂಬಾಲಿಸಿದನು. ಗದ್ದೆಯ ಪೈರಿನ ನಡುವೆ ಬೆಳ್ಳಿ ಆಗಾಗ ಮರೆಯಾಗುತ್ತಿತ್ತು. ಅದಕ್ಕೆ ಅದರ ಗಾತ್ರವೇ ಕಾರಣವಾಗಿತ್ತು. ರೆಡ್ಡಿ ಬೆಳ್ಳಿ ಹೋಗುವ ದಿಕ್ಕನ್ನು ಗಮನವಿಟ್ಟು ನೋಡುತ್ತಾ ಅದರ ಹಿಂದೆ ಹಿಂದೆ ನಡೆದನು. ಬೆಳ್ಳಿಯ ನಡೆ ಚುರುಕಾಗಿರಲಿಲ್ಲ. ಅದು ತುಂಬ ಸಪೂರವಾದ ಪ್ರಾಣಿ; ಶಕ್ತಿ ಕಡಿಮೆ. ಅದು ಮುಂದೆ ನಡೆದಂತೆಲ್ಲಾ ದಾರಿಯ ಮಗ್ಗುಲಲ್ಲಿ ನೀರಂಜಿ ಮರಗಳೂ ಬಸುರೀಮರಗಳು ಅಲ್ಲಲ್ಲಿ ಗೋಚರಿಸಿದವು. ಅದರಾಚೆ ಉತ್ತರಕ್ಕೆ ಅವನ ಕಣ್ಣಿಗೆ ಶ್ರೀನಿವಾಸ ಕ್ಷೇತ್ರ ಅಸ್ಪಷ್ಟವಾಗಿ ಕಾಣತೊಡಗಿತು.

ರೆಡ್ಡಿ ನಿಂತು ಅದನ್ನು ನೋಡಿ, ಸಣ್ಣಗೆ ಒಂದು ಸಿಳ್ಳೇ ಹಾಕಿಕೊಂಡ. ಅವರಿಬ್ಬರು ಅಡಗಿರುವ ತಾಣ ಅವನಿಗೆ ನಿಚ್ಚಳವಾಗಿ ತೋರಿತು. ಈ ನಾಯಿಯಂತೋ ನೇರವಾಗಿ ತನ್ನನ್ನು ಅವರಲ್ಲಿಗೆ

ಕರೆದೊಯ್ಯುತ್ತದೆ. ನಾಯಿ ಶ್ರೀನಿವಾಸಕ್ಷೇತ್ರ ಹತ್ತಿರವಾದಂತೆ ತನ್ನ ನಡೆಯನ್ನು ಸ್ವಲ್ಪ ಬಿರುಸು ಮಾಡಿತು. ಆಶ್ಚರ್ಯವೆಂಬಂತೆ ಅದು ಶ್ರೀನಿವಾಸ ದೇವಸ್ಥಾನದ ಮುಖ್ಯದ್ವಾರವನ್ನು ತಲೆಯೆತ್ತಿಯೂ ನೋಡದೆ, ನೆಲವನ್ನು ಮೂಸಿಕೊಂಡು ದೇವಸ್ಥಾನದ ಹಿಂಭಾಗಕ್ಕೆ ಹೋಯಿತು. ರೆಡ್ಡಿ ಕುತೂಹಲದಿಂದ ಅದನ್ನು ಮೆಲ್ಲಗೆ ಹಿಂಬಾಲಿಸುತ್ತಿದ್ದ. ಅದು ದೇವಸ್ಥಾನದ ಹಿಂಭಾಗವನ್ನು ಎರಡೆರಡು ಬಾರಿ ಮೂಸಿ ಮೂಸಿ, ಅದರ ಬಲಗಡೆಯಿಂದ ಸುತ್ತುಹಾಕಿ, ಮುಖ್ಯದ್ವಾರಕ್ಕೆ ಬಂದಿತು. ಅದು ಒಳಗೆ ಪ್ರವೇಶಿಸಿತು. ನೇರವಾಗಿ ಅದು ಮುಖ್ಯ ದೇವರ ಗರ್ಭಗುಡಿಯನ್ನು ಪ್ರವೇಶಿಸಿ, ಒಂದು ಸುತ್ತು ಹಾಕಿ, ಹೊರಬಂದು ಎಡಭಾಗದಿಂದ ಪ್ರಾಕಾರದ ಹಿಂಭಾಗಕ್ಕೆ ಬಂದಿತು. ಪ್ರಾಕಾರದ ಹಿಂಭಾಗದಲ್ಲಿ ಮುಖ್ಯದೇವರ ಗರ್ಭಗುಡಿಯ ಹಿಂಬದಿ ಜಗುಲಿಯನ್ನು ಅದು ಪದೆ ಪದೆ ಮೂಸಿತು. ತುಸು ದೂರದಲ್ಲಿ ನಿಂತ ರೆಡ್ಡಿಗೆ ಅವರಿಬ್ಬರು ಇಲ್ಲಿಗೆ ಬಂದಿರುವ ಬಗ್ಗೆ ಅನುಮಾನವೇ ಉಳಿಯಲಿಲ್ಲ. ಅದರ ಜೊತೆಗೆ, ಜಗುಲಿಯ ಅಕ್ಕಪಕ್ಕ ಒದ್ದೆಯಾಗಿರುವುದು ಕಂಡುಬಂತು. ಅದು ಹೇಗೆ ಸಾಧ್ಯ ? ಇಲ್ಲಿ ನೀರು ಎಲ್ಲಿಂದ ಬಂತು ? ಮಳೆಗಾಲವಂತೂ ಅಲ್ಲವೇ ಅಲ್ಲ. ಅವನಿಗೆ ಅದು ಒಗಟಾಯಿತು.

ಬೆಳ್ಳಿ ಜಗುಲಿಯನ್ನು ಮೂಸುತ್ತಿತ್ತು. ಒಮ್ಮೆ ಅದು ಅಲ್ಲಿಂದ ನೆಗೆದು ಎದುರಿಗಿದ್ದ ಕಾವೇರಿ ತಾಯಿಯ ಗರ್ಭಗುಡಿಗೆ ಹೋಗಿ ವಾಪಸ್ಸು ಬಂತು. ರೆಡ್ಡಿಗೆ ನಾಯಿಯ ಬಗ್ಗೆ ವಿಶ್ವಾಸವಿತ್ತು. ತಾನು ಈ ಪ್ರಾಕಾರದ ಗುಡಿಗಳನ್ನು ಮತ್ತು ಮುಖ್ಯ ಗುಡಿಯನ್ನು ಶೋಧಿಸುವ ಅವಶ್ಯಕತೆಯಿಲ್ಲ. ಈ ನಾಯಿ ಅವರಿಬ್ಬರ ಅಡಗುತಾಣವನ್ನು ಇಷ್ಟರಲ್ಲೇ ತೋರಲಿದೆ. ತಾಳ್ಮೆಯಿಂದ ಅದನ್ನು ಹಿಂಬಾಲಿಸಬೇಕು; ಅದರ ಗ್ರಹಣ ಶಕ್ತಿಯಲ್ಲಿ ನಂಬಿಕೆಯಿಡಬೇಕು.

ಬೆಳ್ಳಿ ಮತ್ತೆ ನೆಲವನ್ನು ಮೂಸುತ್ತಾ ಮುಂದೆ ಸಾಗಿ, ದೇವಸ್ಥಾನದ ಮುಖ್ಯದ್ವಾರವನ್ನು ದಾಟಿ ಎಡಕ್ಕೆ ತಿರುಗಿ, ನೇರವಾಗಿ ನದಿಯ ಕಡೆ ನಡೆಯಿತು. ತಲೆಯನ್ನು ಎತ್ತದೆ ಬರೀ ನೆಲವನ್ನು ಮೂಸುತ್ತಾ ಸಾಗಿದ ಅದು ನದಿಯ ತೀರ ಇನ್ನೂ ದೂರ ಇರುವ ಹಾಗೆಯೇ ಪಶ್ಚಿಮಕ್ಕೆ ತಿರುಗಿ, ತನ್ನ ವೇಗವನ್ನು ಹೆಚ್ಚಿಸಿಕೊಂಡು, ಕುಯ್ ಕುಯ್ ಎಂದು ನಿಧಾನವಾಗಿ ರಾಗ ಎಳೆಯುತ್ತಾ ಓಡಿತು.

ಆಗ ಅವನ ಕಣ್ಣಿಗೆ ಜಗ್ಗನೆ ಬಾಗೇಮರ ಕಂಡಿತು. ಅದರ ಬುಡದಲ್ಲಿ ತಾನು ಬರುವುದನ್ನೇ ನೋಡುತ್ತಿರುವ ಇಬ್ಬರ ಅಸ್ಪಷ್ಟ ಆಕೃತಿಗಳು ಕಂಡವು. ಅವನು ಗೆದ್ದೆ ಎಂದುಕೊಂಡ. 'ನೀವಿಬ್ಬರು ಸಿಕ್ಕಿ ಬಿದ್ದಿರಿ' ಎಂದು ನಕ್ಕ. ನಾಯಿಯನ್ನು ದಾರಿ ತೋರಿದ ಗುರು ಎಂದುಕೊಂಡ. ಇವರಿಬ್ಬರನ್ನು ಮುಗಿಸಿದ ಮೇಲೆ, ಈ ಕುನ್ನಿಯನ್ನು ಕೂಡ ಮುಗಿಸಿ ಎಸೆಯಬೇಕು. ಅವನು ಮತ್ತಷ್ಟು ದೂರ ನಡೆದ.

ನೇರವಾಗಿ ಉತ್ತರಕ್ಕೆ ತಿರುಗಿ, ಗದ್ದೆಯ ಬದುವಿನ ಮೇಲೆ ನಿಂತ ರೆಡ್ಡಿಗೆ ಭೂಮಿಗೌಡ, ಚಂದ್ರಿಕಾ ಸ್ಪಷ್ಟವಾಗಿ ಕಂಡರು. ಅವನು ಅವರಿಂದ ಸುಮಾರು ನಲವತ್ತು ಅಡಿ ದೂರದಲ್ಲಿದ್ದ. ಬದುವಿನ ಮೇಲೆ ನಿಂತು ಅವರನ್ನು ಅಂದಾಜು ಮಾಡುತ್ತಿದ್ದ. ಆ ಸಮಯದಲ್ಲಿ ಅವನಲ್ಲಿ

ಯೋಚನೆಯೊಂದು ಮೂಡಿತು. ತನ್ನಿಂದ ಬಚ್ಚಿಕೊಳ್ಳದೆ ಏಕೆ ಸವಾಲನ್ನು ಎದುರಿಸಲು ಸನ್ನದ್ಧರಾಗಿ ನಿಂತಿದ್ದಾರೆ? ಬಹುಶಃ ಶಕ್ತಿಗುಂದಿ ಅಸಹಾಯಕರಾಗಿರಬೇಕು.

ಬೆಳ್ಳಿ ತಲೆ ಎತ್ತಿ ತನ್ನ ಒಡತಿಯನ್ನು ಗುರುತಿಸಿತು. ಅದು ತಡಮಾಡಲಿಲ್ಲ. ತನ್ನ ಹಗುರಾದ ದೇಹವನ್ನು ಮತ್ತಷ್ಟು ಹಗುರಮಾಡಿಕೊಂಡು ಚೆಂಗ ಚೆಂಗನೆ ನೆಗೆಯುತ್ತಾ ಓಡಿತು. ಅದು ಕ್ಷಣಾರ್ಧದಲ್ಲಿ ಅವಳ ಒಡತಿಯನ್ನು ಮುಟ್ಟಿ, ಅವಳನ್ನು ಎಲ್ಲೆಂದರಲ್ಲಿ ನೆಕ್ಕಲಾರಂಭಿಸಿತು. ಭೂಮಿಗೌಡನತ್ತ ಒಮ್ಮೆ ನೋಡಿ, ಅವನ ಮೇಲೆ ನೆಗೆದು ಅವನ ಕೆನ್ನೆಯನ್ನು ಒಮ್ಮೆ ನೆಕ್ಕಿ, ಮತ್ತೆ ತನ್ನ ಒಡತಿಯತ್ತ ಗಮನ ಹರಿಸಿ ಪ್ರೀತಿ ತೋರಲಾರಂಭಿಸಿತು.

ಭೂಮಿಗೌಡನ ದೃಷ್ಟಿ ರೆಡ್ಡಿಯ ಮೇಲೆ ನೆಟ್ಟಿತ್ತು. ಅವನು ಉಸಿರು ಹಿಡಿದು ಕುಳಿತಿದ್ದ. ತನ್ನ ಪಕ್ಕದಲ್ಲಿದ್ದ ಚಂದ್ರಿಕಾಳ ಕಂಪನವನ್ನು ಅವನು ಅನುಭವಿಸುತ್ತಿದ್ದ. ಅವಳ ಎದೆ ಬಡಿತ ಕೇಳುವಂತಿತ್ತು. ಅವಳು ಮೊದಲಿಗಿಂತ ಬಿಗಿಯಾಗಿ ಅವನ ಕೈಯನ್ನು ಅದುಮಿ ಹಿಡಿದಿದ್ದಳು. ಅವನು ಅವಳ ಕೈಯನ್ನು ಮೃದುವಾಗಿ ತಟ್ಟಿ ಸಮಾಧಾನದಿಂದಿರುವಂತೆ ಸೂಚಿಸಿದನು.

ಭೂಮಿಗೌಡನ ಎಡಕ್ಕೆ ಬಲಕ್ಕೆ ಭತ್ತದ ಗದ್ದೆಗಳಿದ್ದವು. ರೆಡ್ಡಿ ನಿಂತಿದ್ದ ಜಾಗದಿಂದ ಬಾಗೇಮರದವರೆಗಿನ ನಲವತ್ತು ಅಡಿ ಉದ್ದ- ಮೂವತ್ತು ಅಡಿ ಅಗಲದ ಸ್ಥಳದಲ್ಲಿ ಭತ್ತದ ನಾಟಿ ಹಾಕಿರಲಿಲ್ಲ. ಹಾಗೆ ನೋಡಿದರೆ ಅಲ್ಲಿ ಬೇಸಾಯ ಮಾಡಿದ ಯಾವ ಕುರುಹು ಇರಲಿಲ್ಲ. ಆಗ ಜಾಗದ ಸುತ್ತ ಒಳ ಆವರಣದಲ್ಲಿ, ಗದ್ದೆಗಳ ಅಂಚಿಗೆ ಹೊಂದಿಕೊಂಡಂತೆ ನಾಲ್ಕೈದು ಅಡಿ ಹುಲ್ಲು ಬೆಳೆದುಕೊಂಡಿತ್ತು. ನಡುವೆ ಅಲ್ಲೊಂದು ಇಲ್ಲೊಂದು ಕಳೆಗಿಡಗಳು, ಜೊಂಡಿನ ಜಾತಿಯ ಹುಲ್ಲು ಗಿಡಗಳು ಮಾತ್ರ ಗೋಚರಿಸುತ್ತಿದ್ದವು. ಅವುಗಳ ನಡುವೆಯೇ ಬೆಳ್ಳಿ ತನ್ನ ಪುಟ್ಟ ಪುಟ್ಟ ಹೆಜ್ಜೆಗಳನ್ನಿಟ್ಟು, ನೆಗೆದು ನಗೆದು ಅವಳ ಒಡತಿಯನ್ನು ಸೇರಿದ್ದು.

ಭೂಮಿಗೌಡನಿಗೆ ರೆಡ್ಡಿ ಸ್ಪಷ್ಟವಾಗಿ ಕಾಣುತ್ತಿದ್ದ. ಅವನ ಮುಖದಲ್ಲಿ ಗೆಲುವಿನ ನಗೆಯಿತ್ತು. ಗೆದ್ದೆನೆಂಬ ಅಹಂ ಅವನ ಮುಖದಲ್ಲಿ ಎದ್ದು ಕಾಮುತ್ತಿತ್ತು. ತನ್ನ ಕೈಯಲ್ಲಿದ್ದ ಬಾಕುವನ್ನು ಅವನು ಅವರಿಬ್ಬರ ಕಡೆ ತೋರಿ ಒಮ್ಮೆ ನಕ್ಕನು. ಕಡುರಾತ್ರಿಯಲ್ಲಿ ಅವನ ನಗು ವಿಕೃತವಾಗಿ ಕೇಳಿಸಿತು. ಚಂದ್ರನ ಬೆಳಕು ಬಾಕುವಿನ ಮೇಲೆ ಬಿದ್ದು ಹೊಳಪಾಗಿ ಮಿಂಚಿತು.

ರೆಡ್ಡಿ ಗದ್ದೆಯ ಬದುವಿನಿಂದ ನೆಗೆದು ಹುಲ್ಲಿನ ಮೇಲೆ ಕಾಲಿಟ್ಟ. ಭೂಮಿಗೌಡ ಗಮನಿಸಿದ. 'ಬಾ ಮಗನೆ, ಬಾ-' ಎಂದು ಮನಸ್ಸಿನಲ್ಲಿ ಅಂದುಕೊಂಡ.

ರೆಡ್ಡಿ ಎರಡು ಹೆಜ್ಜೆ ಮುಂದೆ ಇಟ್ಟು ಭೂಮಿಗೌಡನನ್ನು ಕುರಿತು "ನನಗೇ ಚಳ್ಳೇಹಣ್ಣು ತಿನ್ನಿಸಬೇಕೆಂದು ನೋಡಿದಿರಾ, ಪ್ರೊಫೆಸರ್ ? ನನಗೆ ಗೊತ್ತಿತ್ತು. ನೀವೆಲ್ಲೂ ಹೋಗಲ್ಲಾಂತ, ನೀವೊಬ್ಬರೆ ಆಗಿದ್ದರೆ ನನ್ನಿಂದ ತಪ್ಪಿಸಿಕೊಳ್ಳುತ್ತಿದ್ದಿರಿ ಅಂತ ನನಗೆ ಗೊತ್ತಿತ್ತು. ಆದರೆ....ಆದರೆ ನಿಮ್ಮ ವೀಕ್‌ನೆಸ್ ಈ ಸಿಸ್ಟರ್ ಅಂತ ನನಗೆ ಸಂಜೆಯೇ ಗೊತ್ತಾಗಿ ಹೋಯ್ತು. ಇವಳನ್ನು ಬಿಟ್ಟು ನೀವು ಹೋಗಲಾರಿರಿ ಅಂತಾನು ಗೊತ್ತಾಯಿತು" ಚಂದ್ರಿಕಾಳನ್ನು ಉದ್ದೇಶಿಸಿ "ಥ್ಯಾಂಕ್ಯು ಸಿಸ್ಟರ್, ನಿನ್ನ ನಾಯಿಗಾಗಿ ! ಅದು ಅತ್ಯಂತ

ಸುಲಭವಾಗಿ ನಿಮ್ಮ ಬಳಿಗೆ ಕರೆದುಕೊಂಡು ಬಂತು !" ಎಂದು ಹೇಳಿ ಅವರ ಕಡೆ ತನ್ನ ಬಾಕುವನ್ನು ತೋರಿಸಿದ.

ಭೂಮಿಗೌಡನು ಮನದಲ್ಲೇ 'ಬಾ ರೆಡ್ಡಿ, ಬಾ, ಇನ್ನೂ ಸ್ವಲ್ಪ ಮುಂದೆ ಬಾ' ಅಂದುಕೊಂಡ.

ರೆಡ್ಡಿಗೆ ಗೆದ್ದೆನೆಂಬ ನಂಬಿಕೆ ಬಲವಾಯಿತು. ಭೂಮಿಗೌಡ-ಚಂದ್ರಿಕಾ ಭಯದಿಂದ ಹತಾಶರಾಗಿದ್ದಾರೆ. ಅವರು ಸುಲಭವಾಗಿ ವಶವಾಗುತ್ತಾರೆ. ಆದಷ್ಟು ಬೇಗ ಕೆಲಸ ಮುಗಿಸಿ, ಇಲ್ಲಿಂದ ಹೊರಡಬೇಕು.

ಅವನು ಮತ್ತೆರಡು ಅಡಿ ಮುಂದಿಟ್ಟು, ತನ್ನೆದುರಿಗೆ ಮರದ ಬುಡವನ್ನು ಒರಗಿಕೊಂಡು ಕುಳಿತಿದ್ದ ಅವರಿಬ್ಬರನ್ನು ಗಮನಿಸಿದ. 'ಇನ್ನು ಕೆಲವೇ ಕೆಲವು ಹೆಜ್ಜೆಗಳು. ನಾನು ತನ್ನ ಕೆಲಸ ಮುಗಿಸುತ್ತೇನೆ'. ಆತ್ಮವಿಶ್ವಾಸ ಗರಿಗೆದರಿತು.

ಅವನು ನಿಂತ ನೆಲದಿಂದ ತನ್ನ ಬಲಗಾಲನ್ನು ಎತ್ತಿ ಒಂದು ಹೆಜ್ಜೆ ಮುಂದೆ ಇಟ್ಟ. ಅದು ಬೊದಕ್ಕನೆ ಮಂಡಿಯವರೆಗೆ ಭೂಮಿಯಲ್ಲಿ ಹೂತುಕೊಂಡಿತು.

ಭೂಮಿಗೌಡನ ಮುಖದಲ್ಲಿ ಗೆಲುವಿನ ನಗೆ ಹರಿದಾಡಿತು.

ರೆಡ್ಡಿ ತಕ್ಷಣ ವಿಚಲಿತನಾದ; ಅವನು ಗಾಬರಿಯೂ ಆದ. ಮಂಡಿಯವರೆಗೆ ಹೂತುಕೊಂಡಿದ್ದ ಬಲಗಾಲನ್ನು ಕೀಳಲು ಯತ್ನಿಸಿದ. ತುಸು ಅಲ್ಲಾಡಿತು. ತುಸು ಮೇಲೆ ಬಂದಿತು ಎಂದೆನ್ನಿಸಿತು. ಅದನ್ನು ಕೀಳಲು ಎಡಗಾಲ ಮೇಲೆ ಮತ್ತಷ್ಟು ಭಾರಬಿಟ್ಟು ಮೇಲೆತ್ತಲು ನೋಡಿದ. ಆಗಲಿಲ್ಲ. ಅವನು ಆಗ ತನ್ನ ಎಡಗಾಲನ್ನು ಎತ್ತಿ ಮತ್ತೆ ಒಂದಡಿ ಮುಂದೆ ಇಟ್ಟ. ಅದು ಬುಸಕ್ಕನೆ ತೊಡೆಯವರೆಗೆ ಹೂತುಕೊಂಡಿತು. ಗಾಬರಿ ಜಾಸ್ತಿಯಾಯಿತು. ತನ್ನ ಕೈಗಳನ್ನು ನೆಲದ ಮೇಲಿಟ್ಟು ಕಾಲುಗಳನ್ನು ಕೀಳಲು ಯತ್ನಿಸಿದ.

ನೆಲ ಅಲ್ಲಾಡಿತು. ಅದನ್ನು ಕಂಡ ರೆಡ್ಡಿಯ ಮುಖದಲ್ಲಿದ್ದ ಗಾಬರಿಯ ಭಾವನೆ ಹೆದರಿಕೆಯ ಭಾವನೆಯಾಗಿ ಪರಿವರ್ತಿತವಾಯಿತು.

ತಾನು ಮೋಸಹೋದೆ. ಈ ಭೂಮಿಗೌಡ ತನ್ನನ್ನು ಉಸುಕು ನೆಲಕ್ಕೆ ಟ್ರಾಪ್ ಮಾಡಿದ. ಅದು ಅವನಿಗೆ ಚೆನ್ನಾಗಿ ಗೊತ್ತಿದ್ದರಿಂದಲೇ ಅಷ್ಟು ಆರಾಮವಾಗಿ ಕುಳಿತಿದ್ದಾನೆ. ತಾನು ಮೋಸ ಹೋದೆ.....ಆದರೂ ಇಲ್ಲಿಂದ ತಪ್ಪಿಸಿಕೊಳ್ಳಬೇಕು; ತಪ್ಪಿಸಿಕೊಂಡು ಇವರಿಬ್ಬರನ್ನು ಮುಗಿಸಬೇಕು.....ಎಂದು ಚಿಂತಿಸಿ ಅವನು ಮತ್ತಷ್ಟು ಬಲ ಪ್ರಯೋಗಿಸಿ ಉಸುಕು ಭೂಮಿಯನ್ನು ಅಲ್ಲಾಡಿಸಲು ಯತ್ನಿಸಿದ.

ಸುಮಾರು ಹದಿನೈದು ಅಡಿ ಆಳ, ಇಪ್ಪತ್ತು ಅಡಿ ವ್ಯಾಸದ ಉಸುಕು ಕೂಪ ತನ್ನ ಮೇಲ್ಮೈ ಮೇಲೆ ಅರ್ಧ ಇಂಚು ಒಣಪದರವನ್ನು ರಚಿಸಿಕೊಂಡಿತ್ತು. ಅದರ ಒಳಗೆ ಬರೀ ನೀರು-ಮರಳು ಮಿಶ್ರಿತ ಬಗ್ಗಡ. ಹತ್ತಾರು ವರ್ಷದ ಹಸಿವಿನಿಂದ ಕಾದು ಕೂತಿದ್ದ ಬಕಾಸುರನಂತೆ ಅದು ಅಲ್ಲಾಡತೊಡಗಿತು. ಅದು ಅಲ್ಲಾಡಿದಂತೆ ರೆಡ್ಡಿಗೆ ಹೆದರಿಕೆಯೂ ಅಧಿಕವಾಯಿತು. ನಿಧಾನವಾಗಿ ಅವನು ಉಸುಕು ಕೂಪದೊಳಕ್ಕೆ ಜಾರತೊಡಗಿದ. ಅವನು

ಭಯದಿಂದ ತತ್ತರಿಸಿದ. ಉಸುಕು ಅವನ ಸೊಂಟದವರೆಗೆ ಬಂತು. ಅವನು ಭೂಮಿಗೌಡನನ್ನು ನೋಡಿದ.

ಈಗ ಅವರಿಬ್ಬರು ಎದ್ದು ನಿಂತಿದ್ದರು. ಅವರು ಕೈ ಕೈ ಹಿಡಿದುಕೊಂಡಿದ್ದರು. ಅವರ ಮುಖದಲ್ಲಿ ವಿಜಯದ ನಗುವಿತ್ತು.

ರೆಡ್ಡಿಯ ಒದರಾಟ, ಕುಲಕಾಟದಿಂದ ಅವನ ಸುತ್ತ ಮೂರು ಅಡಿ ವೃತ್ತಾಕಾರದ ಕೆಸರು ಮೂಡಿತು. ಅವನ ದೇಹದ ಸುತ್ತಲಿನ ಮರಳು ಮಿಶ್ರಿತ ಕೆಸರು ಸಡಿಲವಾಗುತ್ತಾ ಸಾಗಿತು. ಅವನು ನಿಧಾನವಾಗಿ ಭೂಮಿಯೊಳಕ್ಕೆ ಇಳಿಯತೊಡಗಿದ. ಅವನಲ್ಲಿ ಅಧಿಕವಾಗುತ್ತಿದ್ದ ಭಯ ಕ್ರಮೇಣ ಕೋಪವಾಗಿ ಪರಿವರ್ತಿತವಾಗತೊಡಗಿತು. ಅವನು ಕೆಂಡ ಕಾರುವ ಕಣ್ಣುಗಳಿಂದ ಅವರಿಬ್ಬರನ್ನು ನೋಡಿದ. ಭೂಮಿಗೌಡನ ಮಂದಹಾಸ ಅವನನ್ನು ಮತ್ತಷ್ಟು ಕೆರಳಿಸಿತು. ಆದರೆ ಅವನು ಅಸಹಾಯಕನಾಗಿದ್ದ.

ಉಸುಕು ನಿಧಾನವಾಗಿ ಅವನ ಕುತ್ತಿಗೆವರೆಗೂ ಏರಿತು. ಅವನಿಗೆ ತಾನು ಸಾಯುತ್ತೇನೆ ಎಂಬ ಸ್ಪಷ್ಟ ಅರಿವಾಯಿತು. ಅವನು ತನ್ನ ಕೈಗಳನ್ನು ಮೇಲೆತ್ತಿದ. ಕೆಸರು ಅವನ ಗಲ್ಲವನ್ನು ತಾಕಿತು. ಅವನಲ್ಲಿ ತುಸುಕ್ಷಣದ ಹಿಂದೆ ಮೂಡಿದ್ದ ಕೋಪ ಮತ್ತೆ ಮಾಯವಾಯಿತು. ಭಯ....ಭಯ.....ಸಾವಿನ ಭಯ. ತಾನು ಬದುಕಬೇಕು. ಅವನು ತಡಮಾಡಲಿಲ್ಲ. ಭೂಮಿಗೌಡನ ಕಡೆ ನೋಡಿ "ಪ್ರೊಫೆಸರ್, ಪ್ಲೀಸ್ ನನ್ನನ್ನು ಬದುಕಿಸಿ, ಪ್ಲೀಸ್" ಎಂದು ಕೂಗಿ ನಿನಂತಿಸಿಕೊಂಡ.

ಅವರಿಬ್ಬರು ಸುಮ್ಮನೆ ತನ್ನನ್ನೇ ನೋಡುತ್ತಿದ್ದಾರೆ. ಅಲುಗಾಡುತ್ತಿಲ್ಲ. ತನ್ನನ್ನು ಬದುಕಿಸುವ ಪ್ರಯತ್ನ ಮಾಡುತ್ತಿಲ್ಲ. ಮತ್ತೆ ಅವನು "ಪ್ಲೀಸ್....ಪ್ಲೀಸ್" ಎಂದ. ಅದು ಅವನ ಕೊನೆಯ ಮಾತಾಗಿತ್ತು.

ಭೂಮಿ ಕೆಸರಾಗಿ ಬಾಯ್ತೆರೆದು ಅವನನ್ನು ನುಂಗಿತು. ಅವನ ಎರಡೂ ಕೈಗಳು ಹೊರ ನೋಟಕ್ಕೆ ಕಾಣುತ್ತಿದ್ದವು. ರೆಡ್ಡಿಗೆ ನೀರಿನಲ್ಲಿ ಕಣ್ಣುಬಿಟ್ಟು, ಬಾಯಿಬಿಟ್ಟು ಈಜಾಡಿದ ಅನುಭವವಿತ್ತು. ಆದರೆ ಇದು ಅದರಂತಲ್ಲ. ಕಣ್ಣುಬಿಟ್ಟ. ಅದರೊಳಗೆ ಕೆಸರು ನುಗ್ಗಿತು. ಬಾಯಿ ತೆರೆದ- ಕೆಸರು ಒಳ ಸೇರಿತು. ಉಸಿರು ಕಟ್ಟಿತು. ಕತ್ತಲು, ಬರೀ ಕತ್ತಲು. ಎದೆ ಭಾರವಾಗುತ್ತಿದೆ. ತಾನು ಜಾರುತ್ತಿರುವ, ಜಾರುತ್ತಿರುವಂತೆಯೇ ತೇಲುತ್ತಿರುವ ಅನುಭವ !

ಅವನು ಎರಡು ಕೈಗಳನ್ನು ಮೇಲೆತ್ತಿಕೊಂಡಂತೆಯೇ ಈಜುಗಾರನ ಭಂಗಿಯಿಲ್ಲ ಉಸುಕು ಕೆಸರಲ್ಲಿ ಜಾರತೊಡಗಿದ. ಅವನು ಬಲಗೈಯಲ್ಲಿ ಹಿಡಿದಿದ್ದ ಬಾಕುವನ್ನು ಅವನ ಕೈ ಬಿಟ್ಟಿತ್ತು. ಅದು ಹಿಡಿಯಭಾಗದಿಂದ ಪೂರ್ತ ಮುಳುಗಿ ಕೇವಲ ಒಂದಿಂಚು ತುದಿಯನ್ನು ಕೆಸರಿನ ಮೇಲೆ ರೆಡ್ಡಿಯ ಗುರುತಿಗೆಂಬಂತೆ ತೋರುತ್ತಿತ್ತು.

ರೆಡ್ಡಿ ಉಸುಕು ಕೂಪದ ಅಂತರಾಳದಲ್ಲಿ ಲೀನವಾಗಿದ್ದ.

## ಅಧ್ಯಾಯ : ಇಪ್ಪತ್ನಾಲ್ಕು

ಚಂದ್ರಿಕಾ ಭೂಮಿಗೌಡನ ಮುಖವನ್ನು ನಿಟ್ಟಿಸಿ "ನೀವು ಅವನನ್ನು ಬದುಕಿಸಬಹುದಿತ್ತಲ್ಲವೆ ?" ಎಂದು ಕೇಳಿದಳು.

"ಹೌದು, ಬದುಕಿಸಬಹುದಿತ್ತು, ಕೇವಲ ನಿನ್ನ ಚೂಡಿದಾರ್‌ನ ವೇಲ್‌ಗೆ ಆ ಶಕ್ತಿಯಿತ್ತು. ಆದರೆ ಅವನು ಬದುಕಿದ್ದರೆ ನಮ್ಮನ್ನು ಮುಗಿಸಲು ಯತ್ನಿಸುತ್ತಿದ್ದ. ಆಗಲಾದರೂ ನಾನು ಅವನನ್ನು ಮುಗಿಸಲೇಬೇಕಾಗಿತ್ತು" ಎಂದು ಭೂಮಿಗೌಡ ಹೇಳಿದನು.

"ನಿಮಗೆ ಇಲ್ಲಿ ಉಸುಕು ನೆಲವಿರುವುದು ಗೊತ್ತಿತ್ತೆ ?" ಎಂದು ಪ್ರಶ್ನಿಸಿದಳು. "ಹೌದು ಗೊತ್ತಿತ್ತು. ಗೊತ್ತಿದ್ದೇ ಅವನು ಅದರೊಳಗೆ ಬೀಳಲೆಂದು ಈ ಮರದ ಬುಡವನ್ನು ಆಯ್ದುಕೊಂಡೆ. ನಿಮ್ಮ ಬೆಳ್ಳಿ ನನ್ನ ಕಾರ್ಯ ತಂತ್ರಕ್ಕೆ ಪೂರಕವಾಗಿ ಕೆಲಸ ಮಾಡಿತು. ಅದಕ್ಕೆ ನನ್ನ ಥ್ಯಾಂಕ್ಸ್" ಎಂದು ಅವರ ತಲೆಯನ್ನು ಸವರಿದನು.

"ಒಂದು ವೇಳೆ ಅವನು ಉಸುಕು ನೆಲಕ್ಕೆ ಜಿಗಿಯದೆ, ಗದ್ದೆಯ ಬದುವನ್ನೇ ಬಳಸಿ ನಮ್ಮಲ್ಲಿಗೆ ಬಂದಿದ್ದರೆ ?" ಮತ್ತೆ ಪ್ರಶ್ನೆಮಾಡಿದಳು.

ಭೂಮಿಗೌಡ ನಗುತ್ತಾ ಉತ್ತರಿಸಿದ. "ಅದನ್ನೂ ನಾನು ಯೋಚನೆ ಮೂಡಿದ್ದೆ. ಅವನು ನಮ್ಮ ಮೇಲೆ ಅಟ್ಯಾಕ್ ಮಾಡಿದ್ದರೂ ಈಗ ಅವನಿಗಾದ ಗತಿಯೇ ಆಗುತ್ತಿತ್ತು" ಅವನ ಕಣ್ಣುಗಳು ಕಿರಿದಾದವು ; ತುಸು ಉಗ್ರವಾದವು. ಅವನು ಮಾತನ್ನು ಮುಂದುವರಿಸಿ "ನಾನು ಅವನನ್ನು ಅಟ್ಯಾಕ್ ಮಾಡಿ ನನ್ನ ಕೈಯನ್ನು ರಕ್ತ ಮಾಡಿಕೊಳ್ಳುವುದು ನನಗಿಷ್ಟವಿರಲಿಲ್ಲ ಆ ಕೆಲಸವನ್ನು ಭೂಮಿಯೇ ಮಾಡಲೆಂದು ನಾನು ಯೋಚಿಸಿದ್ದೆ. ಎಷ್ಟಾದರೂ ಇವರೆಲ್ಲರೂ ಭೂಮಿತಾಯಿಯ ಎದೆಯನ್ನು ಸೀಳಿ ಜೀವನ ಮಾಡಿದವರು ತಾನೆ ? ಅವಳು ತಾನು ಮಾಡಬೇಕಾದ ಕೆಲಸವನ್ನು ಮಾಡಿದಳು. ನನ್ನ ಕೈ ಶುಭ್ರವಾಗಿಯೇ ಉಳಿಯಿತು. ಅದಕ್ಕಾಗಿ ಆ ತಾಯಿಗೆ ನನ್ನ ಕೃತಜ್ಞತೆಗಳಿವೆ-" ಎಂದನು.

ಚಂದ್ರಿಕಾ ಉಸುಕು ನೆಲವನ್ನು ನೋಡಿದಳು. ಅಲ್ಲಿ ಕೆಲವು ನಿಮಿಷಗಳ ಹಿಂದೆ ಏನೂ ನಡೆದಿಲ್ಲವೆಂಬಂತೆ ನಿಶ್ಯಬ್ದವಾಗಿತ್ತು. ಸುತ್ತಲ ಪರಿಸರ ಪ್ರಶಾಂತವಾಗಿತ್ತು. ಪಶ್ಚಿಮದ ಕಡೆ ಚಂದ್ರ ಹೆಚ್ಚು ಕಡಿಮೆ ವಾಲಿದ್ದ. ಅವನ ಸುತ್ತ ನಕ್ಷತ್ರಗಲು ಪ್ರಕಾಶಮಾನವಾಗಿ ಮಿನುಗುತ್ತಿದ್ದವು.

ಅವಳು ತನ್ನ ಗಡಿಯಾರವನ್ನು ನೋಡಿಕೊಂಡಳು. ಅದು ನಿಂತಿತ್ತು. ಬಹುಶಃ ಸುರಂಗದಲ್ಲಿ ನೀರಿನಲ್ಲಿ ನೆನೆದು ನಿಂತಿರಬೇಕು. ಭೂಮಿಗೌಡನ ಎಡಗೈಯ್ಯನ್ನು ತನ್ನ ಕೈಗೆ ತೆಗೆದುಕೊಂಡು ಅವನ ಗಡಿಯಾರದಲ್ಲಿ ಸಮಯ ನೋಡಿದಳು. ಅವನ ವಾಟರ್‌ಪ್ರೂಫ್ ಗಡಿಯಾರ ಬೆಳಿಗಿನ ನಾಲ್ಕುಗಂಟೆಯೆಂದು ಹೇಳಿತು. ಅವನು ಮರದ ಬುಡಕ್ಕೆ ಒರಗಿದ್ದ. ಅವನ ಕಣ್ಣುಗಳು

ಮುಚ್ಚಿದ್ದವು. ಅವನು ದೀರ್ಘವಾಗಿ, ಆದರೆ ನಿಧಾನವಾಗಿ ಉಸಿರಾಡುತ್ತಿದ್ದ. ಅವನ ಮುಖದಲ್ಲಿ ನಿರಾಳತೆಯಿತ್ತು. ಅವನ ಮುಖವನ್ನೇ ಸ್ವಲ್ಪ ಹೊತ್ತು ನೋಡಿದ ಚಂದ್ರಿಕಾ, ಅವನ ಪಕ್ಕಕ್ಕೆ ಒತ್ತಿ ಕುಳಿತು, ಎಡಗೈಯಿಂದ ಅವನ ಎದೆಯನ್ನು ಬಳಸಿ, ಅವನ ಭುಜದ ಮೇಲೆ ತಲೆ ಇಟ್ಟು ಕಣ್ಣುಮುಚ್ಚಿದಳು.

ಬೆಳ್ಳಿ ತನ್ನ ಒಡತಿಯ ಕಾಲುಗಳ ನಡುವೆ ತಾವು ಮಾಡಿಕೊಂಡು, ಮೈಯನ್ನು ಉಂಡೆ ಮಾಡಿಕೊಂಡು ಬೆಚ್ಚಗೆ ಮಲಗಿತು.

ಚಂದ್ರಿಕಾಳಿಗೆ ಎಚ್ಚರವಾಯಿತು. ಒಂದು ಕ್ಷಣ ತಾನೆಲ್ಲಿದ್ದೇನೆ ಎಂಬ ಅರಿವಾಗಲಿಲ್ಲ. ಮಂದವಾಗಿ ಗಾಳಿ ಬೀಸುತ್ತಿತ್ತು. ಪಕ್ಕದಲ್ಲಿ ನೀರು ಹರಿಯುವ ಜುಳುಜುಳು ಸದ್ದು. ಅವಳು ಮೆಲ್ಲಗೆ ಕಣ್ಣು ತೆರೆದಳು. ತಿಂಗಳ ಬೆಳಕು ಹಾಲ್ಚೆಲ್ಲಿದ ರೀತಿಯಿದ್ದರೂ, ಅದು ತನ್ನ ಪ್ರಕಾಶಮಾನವನ್ನು ತುಸು ಕಳೆದುಕೊಂಡಿತ್ತು. ಚಂದ್ರ-ಪಶ್ಚಿಮದ ದಿಗಂತದ ಕಡೆ ಇದ್ದ. ಅವನು ಮೊದಲಿಗಿಂತ ಕೆಂಪಗಾಗಿದ್ದ.

ಚಂದ್ರಿಕಾಳಿಗೆ ತುಸು ಚಳಿಯಾದಂತೆನಿಸಿತು. ಅವಳು ಅಲುಗಾಡಲಿಲ್ಲ. ಹಾಗೆಯೇ ತಾನಿರುವ ಸ್ಥಿತಿಯನ್ನು ಗಮನಿಸಿದಳು. ಅವಳು ಯಾವಾಗ ಈ ಭಂಗಿಗೆ ಬಂದು ಕುಳಿತಿದ್ದಳೋ ಗೊತ್ತಿಲ್ಲ. ಅವಳು ಅವನ ಎರಡು ತೊಡೆಗಳ ಮೇಲೆ, ಕಾಲುಗಳನ್ನು ಬಲಕ್ಕೆ ನೀಡಿ ಕುಳಿತ್ತಿದ್ದಳು. ತನ್ನೆರಡು ಕೈಗಳಿಂದ ಅವನನ್ನು ಅಪ್ಪಿಕೊಂಡಿದ್ದಳು. ಅವಳ ತಲೆ ಅವನ ಎದೆಯ ಮೇಲೆ ಒಮ್ಮುಖವಾಗಿ ಒರಗಿತ್ತು. ಅವಳ ಸ್ತನಗಳು ಅವನ ಹೊಟ್ಟೆಯ ಭಾಗವನ್ನು ಬಿಗಿಯಾಗಿ ಸ್ಪರ್ಶಿಸುತ್ತಿದ್ದವು. ಅವನು ಅವಳನ್ನು ಮಗುವನ್ನು ತಬ್ಬಿ ಹಿಡಿವಂತೆ ತಬ್ಬಿ ಆಲಂಗಿಸಿದ್ದನು.

ಅವಳು ಅದೇ ಭಂಗಿಯಲ್ಲಿ ಕಣ್ಣು ತೆರೆದವಳೆ, ಅವನ ಮುಖವನ್ನು ನೋಡಿದಳು. ಮಗುವಿನಂಥ ಮುಖ, ಎಷ್ಟು ನಿರಾಳವಾಗಿ ಉಸಿರಾಡುತ್ತಿದ್ದಾನೆ ? ತಾನು ಹೀಗೆ....ಹೀಗೆಯೆ ಅವನ ತೋಳ್ತೆಕ್ಕೆಯಲ್ಲಿ ಜೀವನ ಕಳೆಯಬೇಕೆನಿಸಿತು. ಅವಳು ತಲೆಯನ್ನು ಮೇಲಕ್ಕೆತ್ತಿ ಅವನ ತುಟಿಗಳಿಗೆ ತನ್ನ ತುಟಿಯೊತ್ತಿ ಮೃದುವಾಗಿ ಚುಂಬಿಸಿದಳು.

ಅವಳ ಸೂಕ್ಷ್ಮ ಚಲನೆಯಿಂದ ಅವನಿಗೆ ಎಚ್ಚರವಾಗಿತ್ತು. ಅವಳ ತುಟಿಯ ಸ್ಪರ್ಶದಿಂದ ಅವನ ಮೈನವಿರೆದ್ದಿತು. ಅವನ ಉಸಿರಾಟ ಬಿರುಸಾಗತೊಡಗಿತು. ಅವಳನ್ನು ಬಂಧಿಸಿದ್ದ ಅವನ ಕೈಗಳು ಮತ್ತಷ್ಟು ಬಿಗಿಯಾಗಿ, ಅವಳನ್ನು ತನ್ನತ್ತ ಸೆಳೆದುಕೊಂಡ. ತನ್ನ ತುಟಿಯ ಮೇಲಿದ್ದ ಅವಳ ತುಟಿಗಳನ್ನು ಮೃದುವಾಗಿ ಚುಂಬಿಸಿದ.

ಮುಂಜಾನೆಯ ಆ ತಂಪಿನಲ್ಲೂ ಅವರು ಬೆವರಿದ್ದರು. ಅವನ ಎದೆಯ ಕೂದಲನ್ನು ತನ್ನ ಬೆರಳುಗಳಿಂದ ಆಡಿಸುತ್ತಾ ಅವಳು, ಬಲಗೈನಿಂದ ವೇಲ್ ಅನ್ನು ಮಡಿಚಿ, ಅವನ ಹಣೆ, ಕುತ್ತಿಗೆಯನ್ನು ಒರೆಸಿದಳು. ಅವನ ಎಡಗೈ ಅವಳ ತಲೆಯ

ಕೂದಲನ್ನು ಸವರುತ್ತಿತ್ತು. ಬಲಗೈ ಅವಳ ನುಣುಪಾದ ತೋಳುಗಳನ್ನು ನೇವರಿಸುತ್ತಿತ್ತು.

ಭೂಮಿಗೌಡ ಪಶ್ಚಿಮದ ದಿಕ್ಕನ್ನು ನೋಡಿದ. ಚಂದ್ರ ದಿಗಂತದ ಅಂಚಿಗೆ ಹೋಗಿದ್ದ. ಕೆಂಪಗೆ, ಚೆನ್ನಾಗಿ ಹಣ್ಣಾದ ಫಲದಂತೆ ಕಂಡ. ಅವನ ಕಿರಣಗಳು ಕಾವೇರಿ ನದಿಯ ಮೇಲೆ ಒಂದು ಅಪೂರ್ವ ಕಾಂತಿಯನ್ನುಂಟುಮಾಡಿದ್ದವು. ಅವನು ಪೂರ್ವದ ಕಡೆ ನೋಡಿದ. ಆಕಾಶ ಸಂಪೂರ್ಣ ಕೆಂಪನೆಯ ರಂಗನ್ನು ಪಡೆದಿತ್ತು. ಆಕಾಶದಲ್ಲಿ ಆಗಲೇ ನಕ್ಷತ್ರಗಳು ಕಣ್ಮರೆಯಾಗತೊಡಗಿದ್ದವು.

ಇದೊಂದು ಅಪೂರ್ವ ಮುಂಜಾನೆ ! ತಮ್ಮ ಬಾಳಿನಲ್ಲೇ ಇದೊಂದು ಮರೆಯಲಾಗದ ಅಪೂರ್ವ ಮುಂಜಾನೆ ! ಅಲ್ಲಿ ಸೂರ್ಯ ಮೂಡುತ್ತಿದ್ದಾನೆ; ಇಲ್ಲಿ ಚಂದ್ರ ಮುಳುಗುತ್ತಿದ್ದಾನೆ. ಎರಡೂ ದಿಗಂತದಂಚಿನಲ್ಲಿ ಸೂರ್ಯ ಚಂದ್ರ ಇಬ್ಬರೂ ನಿಂತು ಪರಸ್ಪರ ಮುಖ ನೋಡುವ ಅಪೂರ್ವ ದೃಶ್ಯ ! ಭೂಮಿಗೌಡ ಕಾವೇರಿ ನದಿಯನ್ನು ನೋಡಿದ.

ಚಂದ್ರಿಕಾಳನ್ನು ನದಿಯನ್ನು ನೋಡುವಂತೆ ಸೂಚಿಸಿದ. ಅವಳು ನದಿಯನ್ನು ನೀಡಿದಳು. ನದಿ ಜೀವಂತವಾಗತೊಡಗಿತು. ಒಂದು ಕಡೆ ಮುಳುಗುತ್ತಿರುವ ಚಂದ್ರನ ಕಿರಣಗಳು, ಮತ್ತೊಂದೆಡೆ ಮೂಡುತ್ತಿರುವ ಸೂರ್ಯನ ಹೊಂಗಿರಣಗಳು ನದಿಗೆ ಅಪೂರ್ವ ರಂಗನ್ನು ನಿರ್ಮಿಸಿದ್ದವು. ನದಿ ಚಿನ್ನದ ರಸವನ್ನು ತುಂಬಿಕೊಂಡು ಹರಿಯುತ್ತಿರುವಂತೆ ಭಾಸವಾಯಿತು. ಮಂದಗಾಳಿ ಉಂಟುಮಾಡುತ್ತಿದ್ದ ಅತಿ ಸಣ್ಣ ತೆರೆಗಳು ಪಳಪಳನೆ ಹೊಳೆಯತೊಡಗಿದವು. ಎಲ್ಲಿದ್ದವೋ ಏನೋ ನೂರಾರು ಪಕ್ಷಿಗಳು ಚಿಲಿಪಿಲಿ ಎನ್ನತೊಡಗಿದವು. ನೀರು ಹಕ್ಕಿಗಳು ನದಿಯ ಪೊದೆಗಳೆಡೆಯಿಂದ ಹೊರಬಂದು ನೀರಿನಲ್ಲಿ ತೇಲತೊಡಗಿದವು. ನೋಡು ನೋಡುತ್ತಲೇ ದಕ್ಷಿಣ ದಿಕ್ಕಿನಿಂದ ಬೆಳ್ಳಕ್ಕಿಗಳ ಸಾಲು ಸಾಲು ಆಕಾಶದಲ್ಲಿ ಸಾಗಿ ಬಂದು ನದಿಯಲ್ಲಿದ್ದ ಕಲ್ಲುಬಂಡೆಗಳ ಮೇಲೆ ಕೂರತೊಡಗಿದವು.

ಅವಳಿಗೆ ಮಾತು ಬಾರದಾಯಿತು. ಸುಮ್ಮನೆ ಅವನ ಭುಜವನ್ನೊರಗಿ ಕುಳಿತು ನದಿಯನ್ನು ನೋಡತೊಡಗಿದಳು. ಅವನು ಅವಳ ಮುಖವನ್ನು ನೋಡಿದ. ಅಲ್ಲಿ ಆತಂಕವಿರಲಿಲ್ಲ. ಅವಳ ಕಣ್ಣುಗಳಲ್ಲಿ ನದಿಯಲ್ಲಿ ಕಂಡ ಹೊಳಪನ್ನು ಕಂಡು ಚಕಿತನಾದ.

ಈ ಎರಡೂ ಹೃದಯದಲ್ಲಿ ನಡೆಯುತ್ತಿದ್ದ ಮನೋವ್ಯಾಪಾರವನ್ನೂ ಅರ್ಥಮಾಡಿಕೊಂಡಂತೆ, ಅವರ ಏಕಾಂತಕ್ಕೆ ಭಂಗ ಉಂಟುಮಾಡಬಾರದು ಎಂದುಕೊಂಡಂತೆ ಬೆಳ್ಳಿ ಮೌನವಾಗಿ ಕುಳಿತಿತ್ತು.

ಚಂದ್ರ ಸಂಪೂರ್ಣವಾಗಿ ಪಶ್ಚಿಮದಲ್ಲಿ ಮುಳುಗಿದ್ದ. ರಾತ್ರಿ ಕಳೆದು ಹಗಲು ಬಂದಿತ್ತು. ಸೂರ್ಯ ದಿಗಂತದಿಂದ ಒಂದು ಮೊಳ ಮೇಲೆ ಬಂದ. ಇಡೀ ಗದ್ದೆ ಬಯಲು ಸೂರ್ಯನ ರಶ್ಮಿಗೆ ಹಸುರಾಗಿ ತೊನೆಯುತ್ತಿತ್ತು. ಬೆಳ್ಳಕ್ಕಿಗಳು ಗದ್ದೆ ಬಯಲಲ್ಲಿ, ಅಲ್ಲಲ್ಲಿ ಕೂತು ಹುಳ ಉಪ್ಪಟೆಗಳನ್ನು ಗಮನಿಸುತ್ತಿದ್ದವು. ಭೂಮಿಗೌಡ ಅವಳತ್ತ ತಿರುಗಿ "ಈಗ

ಮೊದಲು ನಾವು ಹತ್ತಿರದ ಪೊಲೀಸ್ ಠಾಣೆಗೆ ಹೋಗೋಣ. ಈ ದಿನವೆಲ್ಲವೂ ನಮಗೆ ಸಾಕಾಗುವಷ್ಟು ಕೆಲಸವಿದೆ. ಇಲ್ಲಿಂದ ಬೆಳಗೊಳಕ್ಕೆ ನಡೆಯಬೇಕು-" ಎಂದು ಎದ್ದು ನಿಲ್ಲಲು ಪ್ರಯತ್ನಿಸಿದ.

ಅವಳು ಅವನನ್ನು ಜಗ್ಗಿ ಮತ್ತೆ ಕೂರಿಸಿ, ಅವನ ಕಣ್ಣಲ್ಲಿ ಕಣ್ಣಿಟ್ಟು ನೋಡಿ, "ನಾನು ನಿನ್ನೆಯ ಚಂದ್ರಿಕಾ ಅಲ್ಲ. ಕೇವಲ ಒಂದು ರಾತ್ರಿಯಲ್ಲಿ ಬೇಕಾದಷ್ಟನ್ನು ಕಲಿತಿದ್ದೇನೆ; ಅನುಭವಿಸಿದ್ದೇನೆ-" ಅವನ ಕೆನ್ನೆಗಳನ್ನು ತನ್ನ ಕೈಗಳಿಂದ ಸ್ಪರ್ಶಿಸಿ, "ಬೇಕಾದಷ್ಟನ್ನು ಪಡೆದಿದ್ದೇನೆ. ನಾನು ಮತ್ತೆ ಬೆಂಗಳೂರಿಗೆ ಹೋಗಲಾರೆ. ಚಂದ್ರಶೇಖರ್ ಜೊತೆ ಬಾಳಲಾರೆ. ಅವರ ಬಗ್ಗೆ ಅಷ್ಟೆಲ್ಲಾ ತಿಳಿದ ಮೇಲೂ ಜೊತೆಯಲ್ಲಿ ಬದುಕುವುದು ವ್ಯಭಿಚಾರವಾಗುತ್ತದೆ-" ಎಂದು ಹೇಳಿದಳು. ಅನಂತರ ಅವಳು ನದಿಯನ್ನು ನೋಡುತ್ತಾ "ನನ್ನ ಮಗ ಶೋಭಿತ್‌ನನ್ನು ಮೈಸೂರಿನಲ್ಲೇ ಸ್ಕೂಲಿಗೆ ಸೇರಿಸುತ್ತೇನೆ. ನಾನೇ ಅವನನ್ನು ಬೆಳೆಸುತ್ತೇನೆ"- ಎಂದಳು ದೃಢವಾಗಿ.

ಅವನು ಅವಳ ಮುಖವನ್ನು ತನ್ನ ಕೈಗಳಿಂದ ಹಿಡಿದು, ಅವಳ ತುಟಿಗಳನ್ನು ಚುಂಬಿಸಿ "ನೀವು ನನ್ನ ಬಾಳಸಂಗಾತಿಯಾಗಲು ಒಪ್ಪುವಿರಾ ?" ಎಂದು ಕೇಳಿದ.

ಅವಳು ಅವನನ್ನು ಮತ್ತೊಮ್ಮೆ ಚುಂಬಿಸಿ, ಅವನ ಎದೆಯ ಮೇಲೊರಗಿದಳು. ಭೂಮಿಗೌಡ ಮೇಲೆದ್ದು "ಇನ್ನು ತಡಮಾಡುವುದು ಬೇಡ. ಜನರ ಓಡಾಟ ಪ್ರಾರಂಭವಾಗುತ್ತದೆ. ಬನ್ನಿ, ಹೊರಡೋಣ" ಎಂದ.

ಅವಳು ಬೆಳ್ಳಿಯನ್ನು ಎತ್ತಿಕೊಂಡು ಅವನ ಹಿಂದೆ ಹೆಜ್ಜೆಹಾಕಿದಳು. ಹಾಗೆ ಹೆಜ್ಜೆ ಹಾಕುವಾಗ ಒಮ್ಮೆ ಹಿಂತಿರುಗಿ ಉಸುಕು ನೆಲವನ್ನು ನೋಡಿದಳು. ಆ ಉಸುಕು ನೆಲದ ನಡುವೆ ನಿಂತಿದ್ದ ಬಾಕುವಿನ ತುದಿಗೆ ಸೂರ್ಯನ ಕಿರಣ ಬಿದ್ದು, ಫಳಾರನೆ ಹೊಳೆಯಿತು.

೩೧.೫.೨೦೦೭

* * *



ವರ್ತಮಾನದ ಬದುಕಿನಲ್ಲಿ ಪ್ರಕೃತಿಯ ಮೇಲೆ ಮಾನವ ನಡೆಸುತ್ತಿರುವ ಕ್ರೌರ್ಯವನ್ನು ಅನಾವರಣ ಮಾಡುವ 'ವಸುಂಧರೆ' ಒಂದು ವಿಶಿಷ್ಟ ಕಾದಂಬರಿ. ದಟ್ಟವಾದ ರಾಜಕೀಯ ಪ್ರಜ್ಞೆಯನ್ನು ಅಭಿವ್ಯಕ್ತಿಸುತ್ತಾ, ದೂರಗಾಮಿ ದೃಷ್ಟಿಯಿಲ್ಲದ ವರ್ತಮಾನದ ಕ್ರಿಯೆಗಳು ಉಂಟು ಮಾಡಬಹುದಾದ ತಲ್ಲಣಗಳನ್ನು ಕಾದಂಬರಿ ಉಸಿರಾಡುತ್ತದೆ. ಮಾನವನ ದುರಾಸೆ-ಅಧಿಕಾರ ಮೋಹ, ಸ್ವಾರ್ಥಗಳು ಪ್ರಕೃತಿಬದುಕನ್ನು ಹೊಸಕಿ ಹಾಕುವ ಕ್ರೌರ್ಯ ಇಲ್ಲಿ ಜುಮ್ಮೆನ್ನುವಂತೆ ಚಿತ್ರಿತವಾಗಿವೆ. ಈ ಉಸಿರುಗಟ್ಟಿಸುವ ಒತ್ತಡದ ನಡುವೆಯೇ ಬದುಕು ಚಿಗುರಲು ಬಯಸುತ್ತದೆ; ಪ್ರಕೃತಿ ತನ್ನ ಮಕ್ಕಳ ಬದುಕನ್ನು ಅರಳಿಸುತ್ತದೆ ಎಂಬ ಮುನ್ನೋಟವನ್ನು ಕಾದಂಬರಿ ನೀಡುತ್ತದೆ.

ಸೂರ್ಯಾಸ್ತದಿಂದ ಸೂರ್ಯೋದಯದವರೆಗಿನ ಹನ್ನೆರಡು ಗಂಟೆಗಳ ಅವಧಿಯಲ್ಲಿ ನಡೆಯುವ ಇಲ್ಲಿನ ಕ್ರಿಯೆಯಲ್ಲಿ ವರ್ತಮಾನದ ಬದುಕು ಭೂತ ಭವಿಷ್ಯಗಳ ಸೂಕ್ಷ್ಮ ಗ್ರಹಿಕೆಯಲ್ಲಿ ರೋಚಕವಾಗಿ ಬಿಚ್ಚಿಕೊಳ್ಳುತ್ತದೆ. ತನ್ನ ವಿಶಿಷ್ಟ ಆಕರ್ಷಕ ಶೈಲಿಯಿಂದಾಗಿ ಒಂದೇ ಸಲಕ್ಕೆ ಓದಿಸಿಕೊಳ್ಳುವ ಗುಣ ಈ ಕಾದಂಬರಿಗೆ ಪ್ರಾಪ್ತವಾಗಿದೆ. ನಮ್ಮ ನಡುವಿನ ಪ್ರಗತಿಪರ ಚಿಂತಕ, ಬರಹಗಾರರಾದ ಶಿವರಾಮು ಕಾಡನಕುಪ್ಪೆ ಅವರ ಜೀವನಾನುಭವ ಇಲ್ಲಿ ಕಲಾತ್ಮಕ ರೂಪ ಪಡೆದಿದೆ.




ಶ್ರೀ ರಾಜೇಂದ್ರ ಪ್ರಿಂಟರ್ಸ್ ಅಂಡ್ ಪಬ್ಲಿಷರ್ಸ್
ಶಿವರಾಂಪೇಟೆ, ಮೈಸೂರು